ಕಡಿದಾಳ್ ಮಂಜಪ್ಪ ಜನ್ಮಶತಮಾನೋತ್ಸವ ಸಂಸ್ಮರಣೆ

# ನಾಳೆಯ ನೆಳಲು


ಕಡಿದಾಳ್ ಮಂಜಪ್ಪ





ಕರ್ನಾಟಕ ಸರ್ಕಾರ

ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಬೆಂಗಳೂರು

**NALEYA NELALU** : Written by Kadidal Manjappa, Published by : **Manu Baligar**, Director, Department of Kannada & Culture, Kannada Bhavana, J.C. Road, Bengalooru - 560 002.



ಪುಟಗಳು : viii + ೧೮೮

ಪ್ರತಿಗಳು : ೧೦೦೦

ರಕ್ಷಾಪುಟ : ಪ.ಸ. ಕುಮಾರ್

**ಬೆಲೆ : ರೂ. ೭೦/-**

Price : **Rs. 70/-**

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨

# ಪ್ರಕಾಶಕರ ನುಡಿ

ದಿವಂಗತ ಕಡಿದಾಳ್ ಮಂಜಪ್ಪನವರು ಸ್ವಾತಂತ್ರ್ಯ ಹೋರಾಟಗಾರರು, ದಕ್ಷ ರಾಜಕಾರಣಿ, ಪರಿಶುದ್ಧ ಜೀವನ ನಡೆಸಿದ ಧೀಮಂತ ಪುರುಷ. ಮುಖ್ಯಮಂತ್ರಿ ಕೆಂಗಲ್ ಹನುಮಂತಯ್ಯನವರ ಪ್ರಥಮ ಸಚಿವ ಸಂಪುಟದಲ್ಲಿ ಶ್ರೀ ಕಡಿದಾಳ್ ಮಂಜಪ್ಪನವರು ಕಂದಾಯ ಮತ್ತು ಕಾಮಗಾರಿ ಸಚಿವರಾಗಿದ್ದರು. ಕಂದಾಯ ಸಚಿವರಾಗಿ ಭೂ ಸುಧಾರಣೆಗೆ ಭದ್ರ ಬುನಾದಿ ಹಾಕಿ 'ಭೂ ಸುಧಾರಣೆಯ ರೂವಾರಿ' ಎಂಬ ಕೀರ್ತಿಗೆ ಪಾತ್ರರಾದವರು ಹಾಗೂ ಇನಾಂ ಜಹಗೀರಿ, ಜೋಡಿ ಗ್ರಾಮ ಪದ್ಧತಿ ಮುಂತಾದ ರೂಢಿಗತ ಪದ್ಧತಿಗಳನ್ನು ರದ್ದುಪಡಿಸಿ ಪರಿವರ್ತನಶೀಲ ಸಮಾಜ ನಿರ್ಮಾಣಕ್ಕೆ ಪ್ರವರ್ತಕರಾದವರು.

ನಂತರ ಶ್ರೀ ಕಡಿದಾಳ್ ಮಂಜಪ್ಪನವರು ರಾಜ್ಯದ ಮುಖ್ಯಮಂತ್ರಿಯಾದರು. ಹೀಗೆ ಶಾಸಕ, ಮಂತ್ರಿ, ಮುಖ್ಯಮಂತ್ರಿ ಆಗಿ ನಾಡು ನುಡಿಗೆ ಅನನ್ಯ ಸೇವೆ ಸಲ್ಲಿಸಿರುವ ಶ್ರೀ ಕಡಿದಾಳರ ಜೀವನ ಪಥ ; ಸುವರ್ಣ ಪಥ. ಶ್ರೀ ಕಡಿದಾಳ್ ಮಂಜಪ್ಪನವರು ಶ್ರೇಷ್ಠ ಸಂಸದೀಯ ಪಟು, ರಾಜಕಾರಣಿಯೇ ಅಲ್ಲದೆ ಸಾಹಿತಿಯಾಗಿಯೂ ಸೇವೆ ಸಲ್ಲಿಸಿದ್ದಾರೆ. ಮೂರು ಕಾದಂಬರಿ ಮತ್ತು ಒಂದು ಆತ್ಮಕಥನವನ್ನು ಬರೆದಿದ್ದಾರೆ. ದಿವಂಗತ ಕಡಿದಾಳ್ ಮಂಜಪ್ಪನವರ ಜನ್ಮಶತಮಾನೋತ್ಸವದ ಅಂಗವಾಗಿ ರಾಜ್ಯ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯು ಹಲವಾರು ಕಾರ್ಯಕ್ರಮಗಳನ್ನು ರೂಪಿಸಿಕೊಂಡಿದೆ. ಅವುಗಳಲ್ಲಿ ಅವರು ರಚಿಸಿದ ಪುಸ್ತಕಗಳನ್ನು ಪ್ರಕಟಿಸಿ ಜನಸಾಮಾನ್ಯರಿಗೆ ಸುಲಭ ಬೆಲೆಯಲ್ಲಿ ನೀಡಬೇಕೆಂಬುದು ಒಂದಾಗಿರುತ್ತದೆ.

ಅದರಂತೆ ಶ್ರೀ ಕಡಿದಾಳ್ ಮಂಜಪ್ಪನವರ ಪುಸ್ತಕಗಳನ್ನು ಪ್ರಕಟಿಸಲಾಗುತ್ತಿದ್ದು, ಪ್ರಕಟಿಸಲು ಒಪ್ಪಿಗೆ ನೀಡಿದ ಅವರ ಮಗಳು ಶ್ರೀಮತಿ ಶ್ರೀಕಲಾ ಅವರಿಗೆ ನನ್ನ ಕೃತಜ್ಞತೆಗಳು. ಈ ಪುಸ್ತಕಗಳ ಕರಡಚ್ಚು ತಿದ್ದುವ ಜವಾಬ್ದಾರಿಯನ್ನು ಡಾ॥ ಶ್ರೀಕಂಠಕೂಡಿಗೆ ಅವರು ವಹಿಸಿಕೊಂಡು ನೆರವಾಗಿದ್ದಾರೆ. ಈ ಪುಸ್ತಕಗಳನ್ನು ಹೊರತರಲು ನೆರವಾದ 'ಕಡಿದಾಳು' ಸಂಸ್ಮರಣ ಗ್ರಂಥದ ಸಂಪಾದಕರು ಹಾಗೂ ಸಂಪಾದಕ ಮಂಡಳಿಯ ಎಲ್ಲ ಸದಸ್ಯರಿಗೆ ನನ್ನ ಕೃತಜ್ಞತೆಗಳು.

ಶ್ರೀ ಕಡಿದಾಳ್ ಮಂಜಪ್ಪನವರ ಪುಸ್ತಕಗಳ ಪ್ರಕಟಣೆಯನ್ನು ಹೊರತರಲು ಸಹಕರಿಸಿದ ಜಂಟಿ ನಿರ್ದೇಶಕರಾದ ಶ್ರೀ ಕಾ.ತ. ಚಿಕ್ಕಣ್ಣ, ಶ್ರೀಮತಿ ವೈ.ಎಸ್. ವಿಜಯಲಕ್ಷ್ಮಿ, ಸಹಾಯಕ ನಿರ್ದೇಶಕರು, ಪ್ರಕಟಣ ಶಾಖೆ ಹಾಗೂ ಸಿಬ್ಬಂದಿ ವರ್ಗದವರಿಗೆ ಹಾಗೂ ಈ ಸಂಪುಟವನ್ನು ಸುಂದರವಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮೀ ಮುದ್ರಣಾಲಯದ ಮಾಲೀಕರಾದ ಶ್ರೀ ಅಶೋಕ್‌ಕುಮಾರ್ ಮತ್ತು ಸಿಬ್ಬಂದಿ ವರ್ಗದವರಿಗೆ ಕೃತಜ್ಞತೆಗಳು.

ಶ್ರೀ ಕಡಿದಾಳ್ ಮಂಜಪ್ಪನವರ ಪುಸ್ತಕಗಳನ್ನು ಓದಿ, ಅವರ ಜೀವನಾದರ್ಶಗಳನ್ನು ನಮ್ಮ ಯುವಜನಾಂಗ ರೂಢಿಸಿಕೊಳ್ಳುವ ಮೂಲಕ ಈ ಪುಸ್ತಕಗಳ ಸದುಪಯೋಗ ಮಾಡಿಕೊಳ್ಳುತ್ತಾರೆಂದು ನಾನು ನಂಬಿದ್ದೇನೆ.

**ಮನು ಬಳಿಗಾರ್**
ನಿರ್ದೇಶಕರು

# ಅರ್ಪಣೆ

ನನ್ನ ಪೂಜ್ಯ ತಂದೆ ತಾಯಿಗಳ ಸವಿನೆನಪಿಗಾಗಿ

ಇಂದು ಕೆಲವು ಕಡೆಗಳಲ್ಲಿ ಸಾರ್ವಜನಿಕ ಜೀವನದಲ್ಲಿ ನಡೆಯುತ್ತಿರುವ ಅನಾಚಾರಗಳನ್ನೂ, ಅಕೃತ್ಯಗಳನ್ನೂ ತ್ವರಿತವಾಗಿ ತಡೆಗಟ್ಟದಿದ್ದರೆ, ಇನ್ನೂ ಕೇವಲ ಹತ್ತು ವರ್ಷಗಳಲ್ಲಿ, ಅಹಿತ ಪೈಪೋಟಿ ಯಾವ ರೂಪವನ್ನು ತಾಳಬಹುದೆಂಬುದನ್ನು ಈ ಕಾದಂಬರಿಯು ನಿರೂಪಿಸುತ್ತದೆ. ಇದೊಂದು ಭವಿಷ್ಯವನ್ನು ಕುರಿತು ಬರೆದ ಕಾಲ್ಪನಿಕ ಕತೆ. ಕತೆಯಲ್ಲಿ ಕಾಣುವ ವ್ಯಕ್ತಿಗಳು ಕಾಲ್ಪನಿಕ ವ್ಯಕ್ತಿಗಳೆಂಬುದು ಕತೆಯನ್ನು ಓದಿದವರಿಗೆ ವೇದ್ಯವಾಗುತ್ತದೆ. ಸಾರ್ವಜನಿಕ ಜೀವನದ ಶುದ್ಧೀಕರಣವೇ ಕಾದಂಬರಿಯ ಮುಖ್ಯ ಉದ್ದೇಶ. ರಾಷ್ಟ್ರ ರಕ್ಷಣೆಯ ಮಹತ್ವವನ್ನು ಅಲ್ಲಲ್ಲಿ ಒತ್ತಿ ಪ್ರಸ್ತಾಪಿಸಲಾಗಿದೆ. ಪ್ರಜಾಪ್ರಭುತ್ವದ ಉಳಿವು ಸ್ವಚ್ಛ ರಾಜಕಾರಣವನ್ನವಲಂಬಿಸಿದೆಯೆಂಬುದನ್ನು ಸಹ ಅಲ್ಲಲ್ಲಿ ಸ್ಪಷ್ಟಪಡಿಸಲಾಗಿದೆ.

ಕಾದಂಬರಿಯ ಉದ್ದೇಶ ಎಷ್ಟರ ಮಟ್ಟಿಗೆ ಸಫಲವಾಗುತ್ತದೆಯೆಂಬುದನ್ನು ನಾನರಿಯೆ. ಕಾದಂಬರಿಯನ್ನು ಓದುವವರಲ್ಲಿ ಕೆಲವರಾದರೂ, ಸಾರ್ವಜನಿಕ ಜೀವನವನ್ನು ಸ್ವಚ್ಛಗೊಳಿಸುವುದು ಅವಶ್ಯಕವೆಂಬುದನ್ನು ಮನಗಂಡರೆ ನನ್ನ ನಮ್ರ ಪ್ರಯತ್ನ ಸಾರ್ಥಕವಾಯಿತೆಂದು ಭಾವಿಸುತ್ತೇನೆ. ನನ್ನಲ್ಲಿ ಸಾಹಿತ್ಯ ಸಂಪತ್ತಿಲ್ಲ; ಅನುಭವ ತಕ್ಕಷ್ಟಿದೆ. ನನ್ನ ಅನುಭವವನ್ನು ನನಗೆ ತೋಚಿದ ರೀತಿಯಲ್ಲಿ ಕಾದಂಬರಿಗೆ ಅಳವಡಿಸಿದ್ದೇನೆ.

ನನ್ನ ಈ ಕಾರ್ಯದಲ್ಲಿ ಹಲವರು ನನಗೆ ಸಹಾಯ ಮಾಡಿದ್ದಾರೆ. ಕರಡು ಪ್ರತಿಯನ್ನು ಬರೆಯಲು ಸಹಾಯಕರಾಗಿದ್ದ ಶ್ರೀಯುತರಾದ ಎ.ಆರ್. ಜಗದೀಶ, ರಾಘವ ಜವಳಿ, ಜವಳಿ ನಾಗೇಂದ್ರನಾಥ್, ಚಿ॥ಮಹೇಂದ್ರ ಕಡಿದಾಳ್, ಚಿ॥ಸೌ॥ ಗೀತಾ ಕಡಿದಾಳ್ ಇವರುಗಳಿಗೂ, ಕರಡು ಪ್ರತಿಯನ್ನು ಪರಿಷ್ಕರಿಸಿ, ಕೆಲವು ಕಡೆಗಳಲ್ಲಿ ಉಪಯುಕ್ತ ಮಾರ್ಪಾಟು ಮಾಡಿರುವ ಚಿ॥ಸೌ॥ ಹೆಚ್.ಬಿ. ಶಾರದಮ್ಮನವರಿಗೂ, ಅಂತಿಮ ಪ್ರತಿಯನ್ನು ಬರೆಯಲು ಸಹಾಯಕರಾಗಿದ್ದ ಶ್ರೀಯುತರಾದ ಸಿ. ಪುಟ್ಟಸ್ವಾಮಿ, ಕೆ.ಟಿ. ಶ್ರೀನಿವಾಸ, ಕೆ.ಟಿ.ಮೋಹನ, ಕೆ. ಗೋಪಾಲಕೃಷ್ಣರಾವ್, ಕೆ.ಯಂ. ಜಯಪ್ರಕಾಶ್, ಬಿ.ವಿ. ದೇಶಪಾಂಡೆ, ತಿಲಕ ಹೆಗ್ಡೆ ಇವರುಗಳಿಗೂ ನಾನು ಋಣಿಯಾಗಿದ್ದೇನೆ. ಶ್ರೀ ಯಸ್.ಜಿ. ವೆಂಕಟರಂಗನ್‌ರವರು ಕೇವಲ ಒಂದೂವರೆ ತಿಂಗಳ ಅವಧಿಯಲ್ಲಿ ಕಾದಂಬರಿಯನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿದ್ದಾರೆ. ಅವರಿಗೆ ನನ್ನ ಧನ್ಯವಾದಗಳು.

ಬೆಂಗಳೂರು

ತಾ॥ ೨೪-೧೨-೬೬ **ಕಡಿದಾಳ್ ಮಂಜಪ್ಪ**

# ಪರಿವಿಡಿ

# ೧. ಮುಂದಿನ ಮಾತು

ಹನ್ನೊಂದು ವರ್ಷಗಳ ಮುಂದಿನ ಮಾತು; ನಿಂಬೂರಿನ ಶಂಭು ಮಂತ್ರಿಯಾದದ್ದು ರೋಮಾಂಚಕವಾಗಿತ್ತು. ವಸಂತ ಕಾಲ; ಕುಸುಮಮಯ ಸಮಯ. ಸಂಧ್ಯಾಸಮೀರನು ಮರಮರನೆ ಪ್ರಭಾತ ಗಿರಿಯನ್ನು ತೀಡುತ್ತಿದ್ದನು. ಗಗನ ಚುಂಬಿತ ಪ್ರಭಾತ ಗಿರಿಯು ದಿಗಂತವನ್ನು ಹೊತ್ತು ನಿಂತಿರುವುದೋ ಎಂಬಂತೆ ಆರು ಸಾವಿರ ಅಡಿಗಳ ಎತ್ತರದಲ್ಲಿ ವಿರಾಜಿಸುತ್ತಿತ್ತು. ಅದರ ಪಕ್ಕದಲ್ಲೇ ಉನ್ಮಾದಿನಿ ಜಲಪಾತವು ಭೋರ್ಗರೆದು ವಿಜೃಂಭಿಸಿತ್ತು.

ಗಿರಿಯ ಒಂದು ಪಾರ್ಶ್ವವು ಬಗೆಬಗೆಯ ಗಗನ ಚುಂಬಿತ ವೃಕ್ಷಗಳಿಂದಲೂ, ಗಮಗಮಿಸುವ ಪುಷ್ಪಮಯ ಗಿಡ ಬಳ್ಳಿಗಳಿಂದಲೂ, ಸಾಲು ಸಾಲಾಗಿ ಸಿಂಗರಿಸಿ ಹರಡಿದ್ದ ರತ್ನಗಂಬಳಿಗಳಂತಿದ್ದ ಹುಲ್ಲುಗಾವಲುಗಳಿಂದಲೂ, ವಿವಿಧ ಜಾತಿಯ ಜೀವರಾಶಿಗಳಿಂದಲೂ ಕೂಡಿದ್ದು ಚೆಲ್ವಿಕೆಯು ಚೆಲ್ಲಿ ಸೂಸುತ್ತಿರುವುದೋ ಎಂಬಂತೆ, ಸೃಷ್ಟಿದೇವಿಯು ವಿವಿಧ ರೂಪಗಳನ್ನು ಧರಿಸಿ ನರ್ತಿಸುತ್ತಿರುವಳೋ ಎಂಬಂತೆ ಶೋಭಿಸುತ್ತಿತ್ತು.

ಕಡಿದಾದ ಗಿರಿಯ ಇನ್ನೊಂದು ಪಾರ್ಶ್ವವು ಕಗ್ಗಲ್ಲಿನಿಂದ ಕೂಡಿದ್ದು, ಜೀವಜಂತುಗಳ ಆಶ್ರಯಕ್ಕೆ ಆಸ್ಪದವಿಲ್ಲದ ಪ್ರದೇಶವಾಗಿತ್ತು. ಆ ಪಕ್ಕದಲ್ಲೇ ಬಂಡೆಗಳ ನಡುವೆ ಹರಿಯುತ್ತಿದ್ದ ಉನ್ಮಾದಿನಿ ನದಿಯು, ಹೆಸರಿಗೆತಕ್ಕಂತೆ ಉನ್ಮತ್ತಳಂತೆ ನೆಗೆನೆಗೆದು ದುಮುದುಮುಕಿ, ಭೋರ್ಗರೆದು ಚೆಲ್ಲಾಡಿ ಎರಡು ಸಾವಿರ ಅಡಿಗಳ ಎತ್ತರದಿಂದ ಕೆಳಗಿನ ಕಮರಿಯಲ್ಲಿ ಬಿದ್ದು, ಉನ್ಮಾದಿನಿ ಜಲಪಾತ ನಿರ್ಮಿಸಿ, ಮತ್ತೆ ಮಂದಗಾಮಿನಿಯಂತೆ ಮೆಲುನಡೆಯಲ್ಲಿ ಪ್ರವಹಿಸುತ್ತಿತ್ತು.

ಸೂರ್ಯದೇವನು ತನ್ನ ದೈನಂದಿನ ಯಾತ್ರೆಯನ್ನು ಮುಗಿಸಿ, ಪ್ರಭಾತಗಿರಿಯ ಮೇಲೆ ವಿಶ್ರಮಿಸಿಕೊಳ್ಳುತ್ತಿರುವನೋ ಎಂಬಂತೆ, ಮಂದಸ್ಮಿತನಾಗಿ ತನ್ನ ಹೊಂಬಣ್ಣದ ಕಿರಣಗಳನ್ನು ಸುತ್ತಲೂ ಚೆಲ್ಲಿದ್ದನು. ಸೂರ್ಯ ರಶ್ಮಿಯಿಂದ ತೋಯ್ದ ಜಲಪಾತವು ಹೇಮ ಝುರಿಯಂತೆ ಥಳಥಳಿಸುತ್ತಿತ್ತು. ಜಲಪಾತದ ಇಕ್ಕೆಲದ ಬಂಡೆಗಳಲ್ಲಿದ್ದ, ತಮ್ಮ ಪೊಟರೆಗಳತ್ತ ಧಾವಿಸುತ್ತಿದ್ದ ಚಿಲಿಪಿಲಿಗುಟ್ಟುವ ಪಕ್ಷಿಗಳ ಗಾನವು ಸುತ್ತಲ ಸನ್ನಿವೇಶಕ್ಕೆ ಮಾಧುರ್ಯವನ್ನು ನೀಡಿತ್ತು. ಆಗಸವು ನೀಲಾಂಬರದಿಂದ ಶೋಭಿಸುತ್ತಿತ್ತು. ಈ ರಮಣೀಯ ದೃಶ್ಯವು ದೃಷ್ಟಿಗೆ ಅಗೋಚರವಾದ ಅದಾವುದೋ ದಿವ್ಯತೀರದ ದಿವ್ಯಭಾವದ ಸವಿನೆನಪನ್ನು ತರುವಂತಿತ್ತು.

ಆಹ್ಲಾದಕರವಾದ ಆ ಸಂಜೆ ಪ್ರಭಾತ ಗಿರಿಯ ತುಟ್ಟತುದಿಯಲ್ಲಿ ಉನ್ಮಾದಿನಿ ಜಲಪಾತಕ್ಕಭಿಮುಖವಾಗಿ ಗುಹೆಯೊಂದರಲ್ಲಿ ಮಾನವರಿಬ್ಬರು ಕುಳಿತು ಅದಾವುದೋ

ಸಂಭಾಷಣೆಯಲ್ಲಿ ಮಗ್ನರಾಗಿದ್ದರು. ನರಹುಳುವಿನ ಸುಳಿವಿಗೆ ಅವಕಾಶವಿಲ್ಲದ ಆ ಗುಹೆಗೆ ಅವರೀರ್ವರೂ ಹೇಗೆ ಹೋದರೆಂಬುದು ಸೋಜಿಗದ ಸಂಗತಿಯಾಗಿತ್ತು.

ಆ ಇಬ್ಬರು ವ್ಯಕ್ತಿಗಳ ಪೈಕಿ ಒಬ್ಬರು ಇಳಿ ವಯಸ್ಸಿನ ಕಾಷಾಯ ವಸ್ತ್ರಧಾರಿಗಳಾಗಿ ತಪಸ್ವಿಗಳಂತೆ ಕಾಣುತ್ತಿದ್ದರು. ನೀಳವಾಗಿ ಬೆಳೆದು ಜಡೆ ಜಡೆಯಾಗಿ ಉಡಿದುಕೊಂಡಿದ್ದ ಅವರ ಕೇಶರಾಶಿಯೂ, ನಾಭಿಯವರೆಗೂ ವಿಸ್ತರಿಸಿದ್ದ ಗಡ್ಡವೂ, ಪುರಾತನ ಕಾಲದ ಋಷಿಗಳ ನೆನಪನ್ನು ತರುತ್ತಿದ್ದುವು. ತೇಜಃಪುಂಜವಾದ ಮುಖ ಮುದ್ರೆಯೂ, ಅವರ ಸುತ್ತಲೂ ಆವರಿಸಿದ್ದ ದಿವ್ಯ ಲಹರಿಯೂ, ಅವರೊಬ್ಬ ಸಿದ್ಧಪುರುಷರೆಂಬುದನ್ನು ಸಾರುತ್ತಿದ್ದುವು. ತೊಂಬತ್ತು ವರ್ಷಗಳನ್ನು ದಾಟಿದರೂ ಯೋಗ ಬಲದಿಂದ ಐವತ್ತು ವರ್ಷದವರಂತೆ ಕಾಣುತ್ತಿದ್ದರು.

ಇನ್ನೊಬ್ಬ ವ್ಯಕ್ತಿ ಇನ್ನೂ ಎಳೆಯ ವಯಸ್ಸಿನವನು. ಆರಡಿ ಎತ್ತರದ ಆಜಾನು ಬಾಹು. ತುಂಬಿದ ಮುಖ, ಕಾಂತಿಯುತವಾದ ಕಣ್ಣುಗಳು, ಸುಳಿ ಸುಳಿಯಾಗಿ ಹಣೆಯ ಮೇಲೆ ಬಾಗಿದ್ದ ಮುಂಗುರುಳು, ದಿಟ್ಟ ನೋಟ, ದೃಢವಾದ ಮೈಕಟ್ಟುಗಳಿಂದ ಕೂಡಿದ್ದ ಆ ಯುವಕನು ಯಾವುದೋ ಮಹತ್ಕಾರ್ಯಕ್ಕಾಗಿ ಜನ್ಮವೆತ್ತಿದ ಮಹಾಪುರುಷನಂತೆ ಕಾಣಿಸುತ್ತಿದ್ದನು. ಸತ್ಯವನ್ನರಸುವ ಬಾಲ ಸನ್ಯಾಸಿಯಂತೆ ತೋರುತ್ತಿದ್ದರೂ ಅಲೌಕಿಕಕ್ಕಿಂತಲೂ, ಲೌಕಿಕವೇ ಅವನನ್ನು ಹೆಚ್ಚು ಕಾಡುತ್ತಿದ್ದಂತೆ ತೋರುತ್ತಿತ್ತು. ಇವರೀರ್ವರಾರೆಂಬುದು ಮುಂದಿನ ಕತೆಯಿಂದ ಗೊತ್ತಾಗುವುದು.

* * * *

ಆಂಗ್ಲರ ಆಳ್ವಿಕೆಯಿಂದ ನಾಡು ಬಿಡುಗಡೆಯಾಗಿ ಮೂವತ್ತು ವರ್ಷಗಳು ಗತಿಸಿದ್ದವು. ಆಲಸ್ಯದ ಜಡ ನಿದ್ದೆಯಲ್ಲಿ, ನಿಶ್ಚೇತವಾಗಿ ಮಲಗಿದ್ದ ಭಾರತವು ಎಚ್ಚೆತ್ತು ಹೇಡಿತನದ ನಿಸ್ಸಹಾಯಕತೆಯ ನಿವೃತ್ತಿ ಮಾರ್ಗವನ್ನು ತ್ಯಜಿಸಿ, ಪೌರುಷದ ಭರವಸೆ ಪ್ರವೃತ್ತಿ ಮಾರ್ಗದಲ್ಲಿ ಮುಂದೆ ಸಾಗುತ್ತಿದ್ದಿತು. ಈ ಮೂವತ್ತು ವರ್ಷಗಳ ಅವಧಿಯು ಈ ದೇಶದ ಇತಿಹಾಸದಲ್ಲಿ ಚಿರಸ್ಮರಣೀಯವಾದ ಅಧ್ಯಾಯವಾಗಿದೆ. ಈ ಕಾಲದಲ್ಲಿ ಕೆಲವು ಅಪೂರ್ವ ಘಟನೆಗಳೂ, ಹಲವು ಅದ್ಭುತ ಸಾಧನೆಗಳೂ ಜರುಗಿದ್ದವು. ಮಹಾತ್ಮಗಾಂಧೀಯವರು ಅಜ್ಞಾನದ ಅಂಧಕಾರದಲ್ಲಿ, ಗುಲಾಮಗಿರಿಯ ಶೃಂಖಲೆಗಳಲ್ಲಿ ತೊಳಲುತ್ತಿದ್ದ ಭಾರತೀಯರನ್ನು ಒಂದು ಗೂಡಿಸಿ, ಅವರಿಗೆ ಹೊಸ ಚೈತನ್ಯವನ್ನು ತುಂಬಿ, ಸತ್ಯ ಅಹಿಂಸೆಗಳ ಕ್ರಾಂತಿಯಿಂದ ಸ್ವರಾಜ್ಯವನ್ನು ಸಾಧಿಸಿ ಜಗತ್ತನ್ನು ವಿಸ್ಮಯಗೊಳಿಸಿದರು. ಅವರು ಈ ದೇಶದ ಕೀರ್ತಿ ಜ್ಯೋತಿಯನ್ನು ಬೆಳಗಿಸಿ ಜಗತ್ತಿನ ಶ್ರೇಷ್ಠ ಪುರುಷರ ಶ್ರೇಣಿಯಲ್ಲಿ ಸೇರಿ ಅಮರರಾದರು.

ಗಾಂಧೀಜಿಯವರು ಪ್ರಿಯ ಶಿಷ್ಯ ಜವಾಹರ್‌ಲಾಲ್ ನೆಹರೂರವರು ಮಹಾಜನರ ಮೆಚ್ಚಿನ ಸರ್ವಾಧಿಕಾರಿಯಂತೆ ಹದಿನೆಂಟು ವರ್ಷಗಳ ಕಾಲ ಆಳಿ, ಪ್ರಜಾಪ್ರಭುತ್ವದ ಮತ್ತು ಆರ್ಥಿಕ ಪ್ರಗತಿಯ ಶಾಶ್ವತ ತಳಹದಿಯನ್ನು ಹಾಕಿ ಸಂಪ್ರದಾಯಕ್ಕೆ ಶರಣು ಹೋಗಿದ್ದ ಭಾರತೀಯರಿಗೆ ವಿಜ್ಞಾನದ ಹಾದಿಯನ್ನೂ, ವಿಚಾರದ ಬೆಳಕನ್ನೂ ತೋರಿಸಿ,

ವಿಶ್ವ ಶಾಂತಿಯ ದೂತನಾಗಿ ವಿಶ್ವವಿಖ್ಯಾತರಾದರು. ಅವರ ನಂತರ ಆಳಿದ ಅವರ ಪ್ರಿಯಮಿತ್ರ ಲಾಲ್‌ಬಹದ್ದೂರ್ ಶಾಸ್ತ್ರಿಯವರು ಚೀನಿಯರ ಮತ್ತು ಪಾಕಿಸ್ತಾನಿ ಧಾಳಿಗಳನ್ನು ಹಿಮ್ಮೆಟಿಸಿ ಧೈರ್ಯ, ಶೌರ್ಯ ಮತ್ತು ಪರಾಕ್ರಮದ ಬಹದ್ದೂರ್ ಯುಗವನ್ನು ಸ್ಥಾಪಿಸಿದರು. ಅವರ ನಂತರ ಆಳಿದ ಇಂದಿರಾಗಾಂಧಿಯವರು ಇಂದಿರೆಯಂತೆ ಬೆಳಗಿ ನಾಡಿನ ಬಹುಮುಖ ಪ್ರಗತಿಗೆ ಕಾರಣರಾದರು. ಅವರ ನಂತರ ಅಧಿಕಾರಕ್ಕೆ ಬಂದವರೂ ಸಹ ಹಿಂದಿನವರ ಮೇಲ್ಪಂಕ್ತಿಯಲ್ಲಿ ದೇಶವನ್ನು ಪ್ರಗತಿ ಮತ್ತು ಪ್ರಾಬಲ್ಯಗಳ ಹೆದ್ದಾರಿಯಲ್ಲಿ ಕೊಂಡೊಯ್ಯುತ್ತಿದ್ದರು.

ಈ ಮೂವತ್ತು ವರ್ಷಗಳ ಅವಧಿಯಲ್ಲಿ ಕಾಂಗ್ರೆಸ್ ಮುಖಂಡರ ಸತತ ಪ್ರಯತ್ನದಿಂದ, ಭಾರತವು ಅಸದೃಶ್ಯ ಆರ್ಥಿಕ ಪ್ರಗತಿಯನ್ನೂ, ಅಸಾಧಾರಣ ವೈಜ್ಞಾನಿಕ ಮತ್ತು ತಾಂತ್ರಿಕ ಸಿದ್ಧಿಯನ್ನೂ ಸಾಧಿಸಿ, ಅಜೇಯವಾದ ಸೇನಾಬಲದಿಂದ ಆಗಾಗ ರಣಹದ್ದುಗಳಂತೆ ಮೇಲೆರಗುತ್ತಿದ್ದ ಶತ್ರು ರಾಷ್ಟ್ರಗಳ ಸೊಕ್ಕನ್ನಡಗಿಸಿ, ಜಗತ್ತಿನ ಬೃಹತ್ ರಾಷ್ಟ್ರಗಳ ಶ್ರೇಣಿಗೆ ಸೇರಿದ್ದಿತು. ಕಾಂಗ್ರೆಸ್ ಪಕ್ಷವು ಪ್ರಮುಖ ರಾಜಕೀಯ ಪಕ್ಷವಾಗಿ ದೇಶದ ಆಗುಹೋಗುಗಳನ್ನು ನಿರ್ಧರಿಸುತ್ತಿತ್ತು.

ಆದರೆ ಕೆಲವು ರಾಜ್ಯಗಳಲ್ಲಿ ಕಾಂಗ್ರೆಸ್ಸು ಜನಾನುರಾಗವನ್ನು ಕಳೆದುಕೊಂಡು ಕಾಂತಿ ಹೀನವಾಗಿದ್ದರೆ, ವಿರೋಧಪಕ್ಷಗಳು ದುರ್ಬಲವಾಗಿ ಆದರ್ಶಹೀನವಾಗಿದ್ದವು. ಒಂದೆರಡು ರಾಜ್ಯಗಳಲ್ಲಿ ಕುಡುಕರೂ, ಕೆಡುಕಿಗಳೂ, ಕೃತ್ರಿಮಿಗಳೂ, ಪುಂಡರೂ, ಪೋಕರಿಗಳೂ, ಲಾಭಕೋರರೂ, ಲಂಚಕೋರರೂ, ಒಟ್ಟಾಗಿ ಸೇರಿ ಕಾಂಗ್ರೆಸ್ ಸಂಸ್ಥೆಯನ್ನು ಅಕ್ರಮವಾಗಿ ವಶಪಡಿಸಿಕೊಂಡಿದ್ದರೆ, ವಿರೋಧಪಕ್ಷಗಳು ಬಡವರ ಭಾಗ್ಯವಿಧಾತರಂತೆ ನಟಿಸುತ್ತಾ ಆದರ್ಶವಿಲ್ಲದ ಬಣಗು ಘೋಷಣೆಗಳಿಂದ ರಾಜಕೀಯದ ದೊಂಬರಾಟವನ್ನಾಡುತ್ತಿದ್ದರು.

ಇಂತಹ ದೇಶಕಂಟಕರ ಗುಂಪೊಂದು ಹೇಮಾವತಿ ರಾಜ್ಯದ ಕಾಂಗ್ರೆಸ್ ಪಕ್ಷವನ್ನು ಹೇಗೆ ಆಕ್ರಮಿಸಿತೆಂಬುದೂ, ಅವರ ನಾಯಕರಾದ ನಿಂಬೂರಿನ ಶಂಭು ಮತ್ತು ಹೇಮಾವತಿ ದಾಮೋದರ ಹೇಗೆ ಅಧಿಕಾರವನ್ನು ಆಕ್ರಮಿಸಿದರೆಂಬುದೂ ಒಂದೂ ರೋಮಾಂಚಕ ಕತೆ.

* * * *

ಹೇಮಾವತಿ ರಾಜ್ಯವು ಪ್ರಕೃತಿ ಸೌಂದರ್ಯದ ತೌರೂರಾಗಿ, ನೈಸರ್ಗಿಕ ಸಂಪತ್ತಿನ ನೆಲೆವೀಡಾಗಿ, ಉನ್ನತ ಪರ್ವತ ಶ್ರೇಣಿಗಳಿಂದಲೂ, ದಟ್ಟಡವಿಗಳಿಂದಲೂ, ನದಿ ನಾಲೆಗಳಿಂದಲೂ, ಕಡಲ ಸಾಲುಗಳಿಂದಲೂ, ಜನ ನಿಬಿಡವಾದ ಹಳ್ಳಿ ಪಟ್ಟಣಗಳಿಂದಲೂ ಕೂಡಿ, ಸಂಪತ್ಸಮೃದ್ಧಿಯಿಂದ ಬೆಳಗುತ್ತಿತ್ತು. ಈ ರಾಜ್ಯವು ಉಚ್ಛ ಸಂಸ್ಕೃತಿಗೂ, ಉತ್ತಮ ಆಡಳಿತಕ್ಕೂ ಹೆಸರಾಗಿತ್ತು.

ದೇಶಕ್ಕೆ ಸ್ವಾತಂತ್ರ್ಯ ಲಭಿಸಿದನಂತರ ರಾಜ್ಯದ ಮೊಟ್ಟಮೊದಲನೆಯ ಮುಖ್ಯಮಂತ್ರಿಯಾಗಿ ನೇಮಿತರಾದ ನಿರಂಜನದಾಸರು ಸ್ವಾತಂತ್ರ್ಯ ಸಂಗ್ರಾಮದ ವೀರರೂ,

ಅಪ್ರತಿಮ ದೇಶಭಕ್ತರೂ, ಅದ್ವಿತಿಯ ಗಾಂಧೀವಾದಿಗಳೂ ಆಗಿದ್ದರು. ನಿರಂಜನದಾಸರು ಸತತವಾಗಿ ಹದಿನೈದು ವರ್ಷಗಳ ಕಾಲನಿಷ್ಠೆ ಸಾಮರ್ಥ್ಯಗಳಿಂದ ಆಡಳಿತವನ್ನು ನಿರ್ವಹಿಸಿ, ರಾಜ್ಯದ ಸರ್ವತೋಮುಖ ಪ್ರಗತಿಗೆ ಬುನಾದಿಯನ್ನು ಹಾಕಿ, ಸರ್ವ ಜನರ ಮೆಚ್ಚುಗೆಗೆ ಪಾತ್ರರಾಗಿ, ವೃದ್ಧಾಪ್ಯ ಮತ್ತು ಅನಾರೋಗ್ಯದ ಕಾರಣದಿಂದ ಅಧಿಕಾರದಿಂದ ನಿವೃತ್ತರಾದರು.

ನಿರಂಜನದಾಸರು ನಿವೃತ್ತರಾದ ಮೇಲೆ ಗದ್ದುಗೆಯನ್ನೇರಿದ ದಿಲೀಪಚಂದ್ರನು ಹಳೆಯ ಕಾಂಗ್ರೆಸ್ಸಿಗನಾದರೂ ಆದರ್ಶವಿಲ್ಲದ ವ್ಯಕ್ತಿ. ಅವನ ದೃಷ್ಟಿಯಲ್ಲಿ ಅಧಿಕಾರವು ತನ್ನ ಮತ್ತು ತನ್ನವರ ಮೇಲ್ಮೆಯನ್ನು ಸಾಧಿಸುವ ಒಂದು ಸಾಧನವಾಗಿತ್ತು. ನಿರಂಜನದಾಸರು ಉತ್ತಮ ಆಡಳಿತಕ್ಕೆ ಎಷ್ಟು ಹೆಸರುವಾಸಿಯಾಗಿದ್ದರೋ, ದಿಲೀಪಚಂದ್ರನು ದುರಾಡಳಿತಕ್ಕೆ ಅಷ್ಟೇ ಹೆಸರಾಗಿದ್ದನು. ಅವನು ತನ್ನ ಆಳ್ವಿಕೆಯನ್ನು ಶಾಶ್ವತಗೊಳಿಸುವ ಉದ್ದೇಶದಿಂದ ರಾಜ್ಯದ ಕಾಂಗ್ರೆಸ್ಸಿನಲ್ಲಿ ಗುಂಪು ರಾಜಕಾರಣದ ವಿಷಬೀಜವನ್ನು ಬಿತ್ತಿದ್ದನು.

ತನ್ನ ಅಧಿಕಾರ ಉಳಿಯಬೇಕಾಗಿದ್ದರೆ ಜನ ಬೆಂಬಲದ ಜೊತೆಗೆ ಧನಿಕರ ಬೆಂಬಲವೂ ಸಹ ಅವಶ್ಯಕವೆಂಬುದನ್ನು ಮನಗಂಡಿದ್ದ ದಿಲೀಪನು ಒಂದು ಕಡೆ ತಾಳಕ್ಕೆ ಸರಿಯಾಗಿ ಕುಣಿಯುವ ಪುಢಾರಿಗಳ ತಂಡವನ್ನೂ, ಇನ್ನೊಂದು ಕಡೆ ತಾನು ಕೇಳಿದಾಗ ಕೇಳಿದಷ್ಟು ಹಣ ಕೊಡಲು ಸದಾ ಸಿದ್ಧರಿರುವ ಲಾಭಕೋರ ವಣಿಕರ ತಂಡವನ್ನೂ ನಿರ್ಮಿಸಿದನು. ದಿಲೀಪನ ಐದು ವರ್ಷಗಳ ಆಳ್ವಿಕೆಯು ಮುಗಿಯುವುದರೊಳಗಾಗಿ ಅವನ ಪ್ರೋತ್ಸಾಹ ಬೆಂಬಲಗಳಿಂದ ಒಂದುಕಡೆ ರಾಜಕೀಯ ಕ್ಷೇತ್ರದಲ್ಲಿ ಹಲವರು ಭ್ರಷ್ಟರು ತಲೆಯೆತ್ತಿದ್ದರೆ, ಇನ್ನೊಂದೆಡೆ ವಾಣಿಜ್ಯ ಕ್ಷೇತ್ರದಲ್ಲಿ ಹಲವರು ಕಾಳಸಂತೆಯ ಕದೀಮರೂ, ಲಾಭಕೋರ ನಿಸ್ಸೀಮರೂ ಚಿಗುರಿದ್ದರು. ಒಂದು ದೃಷ್ಟಿಯಿಂದ ದಿಲೀಪನು ಪುಂಡ ಪೋಕರಿಗಳ ಮತ್ತು ಲಾಭಕೋರ ಲಂಚಕೋರರ ಗುರುವಿನಂತಿದ್ದನು.

ದಿಲೀಪನು ಮುಖ್ಯಮಂತ್ರಿಯಾಗಿದ್ದಾಗ ದುರ್ಗಾದಾಸರೆಂಬುವವರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. ಅವರು ಚಿಕ್ಕ ವಯಸ್ಸಿನಲ್ಲಿಯೇ ಕಾಂಗ್ರೆಸ್ಸಿಗೆ ಸೇರಿ ಸ್ವಾತಂತ್ರ್ಯಸಮರದಲ್ಲಿ ಹೋರಾಡಿದವರು. ದುರ್ಗಾದಾಸರು ಆದರ್ಶಪ್ರಿಯರೂ, ಸತ್ಯಸಂಧರೂ ಮತ್ತು ಅದ್ವಿತೀಯ ದೇಶಭಕ್ತರೂ ಆಗಿದ್ದರು. ಕೆಟ್ಟದ್ದನ್ನೂ ಕೆಟ್ಟವರನ್ನೂ ಸಹಿಸುತ್ತಿರಲಿಲ್ಲ. ಈ ಕಾರಣದಿಂದ ಅವರಿಗೆ ದಿಲೀಪನನ್ನೂ, ಅವನ ದುಷ್ಟ ಬೆಂಬಲಿಗರನ್ನೂ ಕಂಡರಾಗುತ್ತಿರಲಿಲ್ಲ.

ದುರ್ಗಾದಾಸರ ತಂದೆ ಜಿತೇಂದ್ರದಾಸರು ಗಾಂಧೀಜೀಯವರ ಪರಮ ಭಕ್ತರು. ಸ್ವಾತಂತ್ರ್ಯ ಚಳುವಳಿಯ ಕಾಲದಲ್ಲಿ ಜಿತೇಂದ್ರದಾಸರು ಅಸಾಧಾರಣ ರೀತಿಯಲ್ಲಿ ಸೇವೆಯನ್ನು ಸಲ್ಲಿಸಿದರು. ಆ ಕಾಲದಲ್ಲಿ ಅವರು ಮಾಡಿದ ತ್ಯಾಗ ಅಪಾರವಾದದ್ದು. ಅವರು ತಮ್ಮ ಏಕಮಾತ್ರ ಪುತ್ರ ದುರ್ಗಾದಾಸರು ಪದವೀಧರರಾದೊಡನೆ ಅವರನ್ನು ಚಳವಳಿಗೆ ದುಮುಕುವಂತೆ ಪ್ರೋತ್ಸಾಹಿಸಿದರು. ಸ್ವಾತಂತ್ರ್ಯ ಲಭಿಸಿದ ಕೆಲವೇ ವರ್ಷಗಳಲ್ಲಿ ಜಿತೇಂದ್ರದಾಸರು ಸ್ವರ್ಗಸ್ಥರಾದರು. ಅವರ ದೇಶಭಕ್ತಿಯನ್ನೂ, ದೇಶಸೇವೆಯನ್ನೂ

ಮೆಚ್ಚಿದ ಸರ್ಕಾರದವರು ಅವರ ಹೆಸರನ್ನು ಶಾಶ್ವತಗೊಳಿಸುವ ದೃಷ್ಟಿಯಿಂದ ಅವರ ಹಳ್ಳಿಗೆ ಜಿತೇಂದ್ರಪುರವೆಂದು ನಾಮಕರಣ ಮಾಡಿದರು.

ದುರ್ಗಾದಾಸರು ತಂದೆಯಂತೆ ಸಾಹಸಿ. ಅವರು ತಮ್ಮ ಸೇವೆ ಸಾಹಸಗಳಿಂದ ಜನರ ಪ್ರೀತಿ ಗೌರವಗಳಿಗೆ ಪಾತ್ರರಾಗಿದ್ದುದಲ್ಲದೆ ದೇಶದ ನಾಯಕರನೇಕರ ವಿಶ್ವಾಸಕ್ಕೂ ಸಹ ಪಾತ್ರರಾಗಿದ್ದರು. ವಿವಿಧ ಹಂತಗಳಲ್ಲಿ ವಿವಿಧ ಕ್ಷೇತ್ರಗಳಲ್ಲಿ ಅವರು ರಾಜ್ಯಕ್ಕೆ ಸೇವೆಯನ್ನು ಸಲ್ಲಿಸಿದರು. ದಿಲೀಪನ ಐದು ವರ್ಷಗಳ ಆಳ್ವಿಕೆ ಮುಗಿಯುವ ವೇಳೆಗೆ ದಿಲೀಪನ ಅನುಯಾಯಿಗಳಿಗೂ, ದುರ್ಗಾದಾಸರ ಅನುಯಾಯಿಗಳಿಗೂ ರಾಜಕಾರಣದಲ್ಲಿ ತಿಕ್ಕಾಟ ಪ್ರಾರಂಭವಾಯಿತು. ದುರ್ಗಾದಾಸರು ಅಧಿಕಾರಕ್ಕಾಗಿ ಗುಂಪು ರಾಜಕಾರಣದ ಪೈಪೋಟಿಯಲ್ಲಿ ಮಗ್ನರಾಗತಕ್ಕವರಾಗಿರಲಿಲ್ಲ. ದಿಲೀಪನು ತನ್ನ ದುರ್ವರ್ತನೆಗಳನ್ನು ಕ್ರಮೇಣ ಬದಲಾಯಿಸಿಕೊಂಡಾನೆಂಬ ಭ್ರಾಂತಿಯಿಂದ ಅವರು ಮುಖ್ಯಮಂತ್ರಿ ಪದವಿಗೆ ಆಸೆಪಡಲಿಲ್ಲ. ಅವರ ಔದಾರ್ಯದಿಂದಲೂ, ಸನ್ನಿವೇಶಗಳ ಸಂಯೋಗದಿಂದಲೂ ದಿಲೀಪನು ಎಡನೆಯ ಸಾರಿ ಮುಖ್ಯಮಂತ್ರಿಯಾಗುವ ಅವಕಾಶವನ್ನು ಪಡೆದನು.

ದಿಲೀಪನು ಎರಡನೆಯ ಬಾರಿ ಮುಖ್ಯಮಂತ್ರಿಯಾದವನು ದುರ್ಗಾದಾಸರ ನಿರೀಕ್ಷೆಗೆ ವಿರೋಧವಾಗಿ ತನ್ನ ದುರಾಡಳಿತವನ್ನು ಮುಂದುವರಿಸತೊಡಗಿದನು. ಅವನ ದುರಾಡಳಿತ ಮತ್ತು ಅವನ ಗುಂಪಿನವರ ಉಪಟಳವು ದಿನದಿನಕ್ಕೂ ಸಹಿಸಲಸಾಧ್ಯವಾಗುತ್ತಾ ಬಂದಿತ್ತು. ರಾಜ್ಯದ ಜನರು ದೆಹಲಿಯ ಕಾಂಗ್ರೆಸ್ ವರಿಷ್ಠರಿಗೆ ಅವನ ವಿರುದ್ಧ ನೂರಾರು ಅರ್ಜಿಗಳನ್ನು ಬರೆದರು. ಆದರೆ ಅವನಿಗೆ ಕಾಂಗ್ರೆಸ್ ಪಕ್ಷದಲ್ಲಿ ಸ್ಪಷ್ಟ ಬಹುಮತವಿದ್ದುದರಿಂದ ಕಾಂಗ್ರೆಸ್ ವರಿಷ್ಠರು ಅವನ ಮೇಲೆ ಯಾವ ಕ್ರಮವನ್ನೂ ಕೈಗೊಳ್ಳಲಾಗಲಿಲ್ಲ. ದಿಲೀಪನ ಎರಡನೆಯ ಸಲದ ಐದು ವರ್ಷಗಳ ಆಳ್ವಿಕೆಯು ಜನಸಾಮಾನ್ಯರಿಗೆ ನರಕಪ್ರಾಯವಾಗಿತ್ತು. ಬಡಬಗ್ಗರ ಗೋಳನ್ನು ಕೇಳುವವರೇ ಇರಲಿಲ್ಲ. ಅವನ ಆಳ್ವಿಕೆ ಮುಗಿದರೆ ಸಾಕೆಂದು ಭಗವಂತನಲ್ಲಿ ಮೊರೆಯಿಡುತ್ತಿದ್ದರು. ಆದರೆ ಅಂದಿದ್ದ ವಾತಾವರಣವನ್ನು ಗಮನಿಸಿದ್ದವರೆಲ್ಲರೂ ದಿಲೀಪನು ಇನ್ನೂ ಹತ್ತು ವರ್ಷಗಳ ಕಾಲ ಆಳಬಹುದೆಂದು ಭಾವಿಸಿದ್ದರು.

ಜನರೊಂದು ಬಗೆದರೆ ದೈವವೊಂದು ಬಗೆಯುವುದು. ದಿಲೀಪನ ಹತ್ತುವರ್ಷಗಳ ಆಳ್ವಿಕೆಯು ಮುಗಿಯುತ್ತಾ ಬಂದಿತ್ತು. ಸಾರ್ವತ್ರಿಕ ಚುನಾವಣೆ ಸಮಿಾಪಿಸುತ್ತಿತ್ತು. ದಿಲೀಪನೂ, ದುರ್ಗಾದಾಸರೂ, ಅವರೀರ್ವರ ಅನುಯಾಯಿಗಳೂ ಚುನಾವಣೆಯಲ್ಲಿ ಸ್ಪರ್ಧಿಸಿದ್ದರು. ರಾಜ್ಯದಾದ್ಯಂತ ಚುನಾವಣಾ ಪ್ರಚಾರ ನಡೆಯುತ್ತಲಿತ್ತು. ಒಂದುದಿನ ದಿಲೀಪನು ಪ್ರಚಾರ ಕಾರ್ಯಕ್ಕಾಗಿ ತನ್ನ ಚುನಾವಣಾ ಕ್ಷೇತ್ರದಲ್ಲಿ ಬಿರುಗಾಳಿಯ ವೇಗದಲ್ಲಿ ಕಾರಿನಲ್ಲಿ ಪ್ರವಾಸ ಮಾಡುತ್ತಿರುವಾಗ ಒಂದು ತಿರುವಿನಲ್ಲಿ ಕಾರು ಬಂಡೆಯೊಂದಕ್ಕೆ ಡಿಕ್ಕಿ ಹೊಡೆದು ಅವನೂ, ಅವನ ಕಾರಿನ ಸಾರಥಿಯೂ ಸ್ಥಳದಲ್ಲಿಯೇ ಮೃತಪಟ್ಟರು.

* * * *

ದಿಲೀಪನ ಅನಿರೀಕ್ಷಿತ ಆಕಸ್ಮಿಕ ಮರಣದಿಂದ ಅವನ ಬೆಂಬಲಿಗರಾಗಿದ್ದ ಲಾಭಕೋರರೂ, ಲಂಚಕೋರರೂ ಬಹಳ ದುಃಖಪಟ್ಟರು. ಆದರೆ ರಾಜ್ಯದ ಜನರು ಒಂದು ಪೀಡೆ ತೊಲಗಿತೆಂದು ಸಮಾಧಾನಪಟ್ಟರು. ಚುನಾವಣೆ ನಡೆಯಿತು. ದುರ್ಗಾದಾಸರೂ ಅವರ ಬೆಂಬಲಿಗರನೇಕರೂ ಆರಿಸಿ ಬಂದಿದ್ದರು. ದಿಲೀಪನ ಅನುಯಾಯಿಗಳೂ ಕೂಡ ಸಾಕಾದಷ್ಟು ಸಂಖ್ಯೆಯಲ್ಲಿ ಆರಿಸಿ ಬಂದಿದ್ದರು. ಆದರೆ ತಮ್ಮ ನಾಯಕನ ಆಕಸ್ಮಿಕ ಮರಣದಿಂದ ಧೃತಿಗೆಟ್ಟಿದ್ದ ಅವರು ತಮ್ಮ ಗುಂಪನ್ನು ಸಂಘಟಿಸಿ ತಮಗೆ ಬೇಕಾದವರೊಬ್ಬರನ್ನು ನಾಯಕರನ್ನಾಗಿ ತರಲು ಶಕ್ತರಾಗಿರಲಿಲ್ಲ; ಜೊತೆಗೆ ಕಾಲಾವಕಾಶವೂ ಸಾಕಷ್ಟಿರಲಿಲ್ಲ. ಆದ್ದರಿಂದ ದುರ್ಗಾದಾಸರು ಸುಲಭವಾಗಿ ಮುಖ್ಯಮಂತ್ರಿಯಾದರು. ಅವರಿಗೆ ಜನ ಬೆಂಬಲವಿತ್ತು; ಶಾಸಕರ ಬೆಂಬಲವೂ ದೊರಕಿತ್ತು. ಅಂತೂ ಹೇಮಾವತಿ ರಾಜ್ಯದಲ್ಲಿ ಹೊಸದೊಂದು ಅಧ್ಯಾಯ ಪ್ರಾರಂಭ ವಾಯಿತು.

ದುರ್ಗಾದಾಸರು ರಾಜ್ಯದ ಮುಖ್ಯಮಂತ್ರಿಯಾದುದು ಜನ ಸಾಮಾನ್ಯರಿಗೆ ಅಮಿತಾನಂದವನ್ನುಂಟುಮಾಡಿತ್ತು. ಆದರೆ ದಿಲೀಪನ ಹಿಂಬಾಲಕರಾಗಿದ್ದ ಭ್ರಷ್ಟ ರಾಜಕಾರಣಿಗಳಿಗೂ, ದುರಾಶೆಯ ಲಾಭಕೋರರಿಗೂ ಬಹಳ ಅತೃಪ್ತಿಯುಂಟಾಗಿತ್ತು. ಮುಖ್ಯಮಂತ್ರಿಯಾದ ಮೂರು ವರ್ಷಗಳೊಳಗಾಗಿ ದುರ್ಗಾದಾಸರು ರಾಜ್ಯದ ಸುವ್ಯವಸ್ಥಿತ ನ್ಯಾಯಪರ ಸಮರ್ಥ ಆಡಳಿತವನ್ನು ಸ್ಥಾಪಿಸಿದ್ದರು. ರಾಜ್ಯದಲ್ಲಿ ಹಲವು ಅಭ್ಯುದಯಕಾರಕವಾದ ಕಾರ್ಯಗಳು ಜರುಗಿದ್ದವು. ಹಲವು ಪ್ರಗತಿಪರ ಕಾಯಿದೆಗಳು ರಚಿಸಲ್ಪಟ್ಟಿದ್ದವು. ಲಂಚದ ಹಾವಳಿಯೂ, ಕಾಳಸಂತೆಯ ಉಪಟಳವೂ ಕಡಿಮೆಯಾಗಿದ್ದವು. ದೀನ ದಲಿತರ ಉದ್ಧಾರದ ಕಾರ್ಯ ಸಾರೋದ್ಧಾರವಾಗಿ ನಡೆದಿತ್ತು. ಕಾನೂನು ಕಟ್ಟಳೆಗಳ ಅನುಷ್ಠಾನ ಕಟ್ಟುನಿಟ್ಟಾಗಿ ಸಾಗಿತ್ತು. ಜನಸಾಮಾನ್ಯರಲ್ಲಿ ತೃಪ್ತಿ ಸಂತೋಷಗಳು ಮೂಡಿದ್ದವು. ದಿಲೀಪನ ದುರಾಡಳಿತದಿಂದ ನೊಂದಿದ್ದ ಜನರು ದುರ್ಗಾದಾಸರನ್ನು ದೇವರಂತೆ ಕಾಣುತ್ತಿದ್ದರು. ದಾಸರು ಹಗಲಿರಳೂ ರಾಜ್ಯದ ಅಭ್ಯುದಯಕ್ಕಾಗಿ ಶ್ರಮಿಸಿದ್ದರು.

ಜನಸಾಮಾನ್ಯರು ಸರ್ವರಿಗೂ ಅನುಕೂಲವಾಗುವ ಪಕ್ಷಪಾತರಹಿತ ಸ್ವಚ್ಛ ಆಡಳಿತವನ್ನು ಬಯಸಿದರೆ, ಅಸಕ್ತಹಿತ ಜನರು ತಮಗನುಕೂಲವಾದ ಆಡಳಿತವನ್ನು ಬಯಸುವರು. ದಿಲೀಪನ ಕಾಲದಲ್ಲಿ ತಮಗನುಕೂಲವಾಗಿದ್ದ ಆಡಳಿತ ರುಚಿಯನ್ನು ಕಂಡಿದ್ದ ಅಸಕ್ತಹಿತ ಜನರು ದುರ್ಗಾದಾಸರ ಕಟ್ಟುನಿಟ್ಟಿನ ಆಡಳಿತದಿಂದ ಬಹಳ ಕಂಗೆಟ್ಟು ಹೋಗಿದ್ದರು. ಅವರು ದುರ್ಗಾದಾಸರ ಆಳ್ವಿಕೆ ಏನೇನೂ ಪ್ರಯೋಜನವಿಲ್ಲವೆಂದು ಎಲ್ಲೆಲ್ಲೂ ಅಪಪ್ರಚಾರ ಮಾಡತೊಡಗಿದ್ದರು. ಸಾಲದುದಕ್ಕೆ ದುರ್ಗಾದಾಸರಿಗೆ ಹಿಂದೆ ರಾಜಕಾರಣದಲ್ಲಿ ನೆರವಾಗಿದ್ದ ಅವರ ಬಂಧುಬಾಂಧವರಲ್ಲಿ ಕೆಲವರು ಅವರನ್ನು ವಿರೋಧಿಸತೊಡಗಿದ್ದರು. ತಮ್ಮವರೇ ಆದ ದುರ್ಗಾದಾಸರು ಅಧಿಕಾರಕ್ಕೆ ಬಂದರೆ ತಾವು ಬಯಸಿದ್ದೆಲ್ಲಾ ಸುಲಭವಾಗಿ ದೊರೆಯುತ್ತದೆಯೆಂದು ಆ ಬಂಧುಗಳು ಭಾವಿಸಿದ್ದರು.

ದುರ್ಗಾದಾಸರು ಮುಖ್ಯಮಂತ್ರಿಯಾದ ಮೇಲೆ ತಮ್ಮವರು ಇತರರು ಎಂಬ ಭೇದ ಭಾವನೆಯಿಲ್ಲದೆ ಎಲ್ಲರನ್ನೂ ಒಂದೇ ದೃಷ್ಟಿಯಿಂದ ಕಾಣತೊಡಗಿದರು. ಜೊತೆಗೆ ತಾವು ಮುಖ್ಯಮಂತ್ರಿಯಾದುದು ತಮ್ಮವರ ಹಿತ ಸಾಧನೆಗಾಗಿ ಮಾತ್ರ ಅಲ್ಲವೆಂದೂ, ಸರ್ವಜನರ ಹಿತಸಾಧನೆಗೆಂದೂ ಹೇಳತೊಡಗಿದರು. ಅವರ ನಿಷ್ಪಕ್ಷಪಾತಪೂರ್ಣವಾದ ವರ್ತನೆಯು ಅವರ ಬಂಧುಬಾಂಧವರಲ್ಲೂ ಬೆಂಬಲಿಗರಲ್ಲೂ ನಿರಾಸೆಯನ್ನುಂಟು ಮಾಡಿತು. ದಾಸರು ಮುಖ್ಯಮಂತ್ರಿಯಾದೊಡನೆ ತಮ್ಮ ಆಸೆ ಅಭೀಷ್ಟಗಳು ಸುಲಲಿತವಾಗಿ ಈಡೇರುತ್ತವೆ ಎಂಬ ಭಾವನೆ ಹೊಂದಿದ್ದ ಜನರಿಗೆ ದುರ್ಗಾದಾಸರ ವರ್ತನೆಯು ವಿಚಿತ್ರವಾಗಿ ಕಾಣಿಸಿತು.

ದಿಲೀಪಚಂದ್ರನು ಮುಖ್ಯಮಂತ್ರಿಯಾಗಿದ್ದಾಗ ಅವನ ಆತ್ಮೀಯ ಗೆಳೆಯರೂ ಬೆಂಬಲಿಗರೂ ಹೆಮ್ಮಾರ, ಕೆಮ್ಮಾರ, ಜಲೋದರ, ಪಟವಾರ, ಮುಂತಾದ ಕಾಂಗ್ರೆಸ್ ಪುಢಾರಿಗಳೂ, ದಾಮೋದರ, ಮಹೋದರ, ಮುಂತಾದ ವಣಿಕ ಪ್ರಮುಖರೂ ಸರ್ಕಾರದ ಆಧಾರ ಸ್ತಂಭಗಳಂತಿದ್ದರು. ಅವರು ದಿಲೀಪನ ಸಲಹೆಗಾರರಾಗಿದ್ದರು. ರಾಜ್ಯದ ಆಡಳಿತವು ಅವರ ಹೇಳಿದಂತೆ ನಡೆಯುತ್ತಿತ್ತು. ತಾವೇ ಸರ್ಕಾರವೆಂಬಂತೆ ಅವರು ಮೆರೆಯುತ್ತಿದ್ದರು. ಯಾವ ಕಾನೂನು ಕಟ್ಟಳೆಗಳಿಗೂ, ನೀತಿ ನಿಯಮಗಳಿಗೂ ಅವರು ಒಳಪಟ್ಟಿರಲಿಲ್ಲ. ದಾಮೋದರ, ಮಹೋದರ, ಪಟವಾರ ಮುಂತಾದ ಲಾಭಕೋರರು ದಿಲೀಪನು ಕೇಳಿದಷ್ಟು ಹಣವನ್ನು ಅವನ ರಾಜಕಾರಣಕ್ಕಾಗಿ ಕೊಡುತ್ತಿದ್ದರು. ಅದಕ್ಕೆ ಪ್ರತಿಯಾಗಿ ದಿಲೀಪನು ಅವರಿಗೆ ಸರ್ಕಾರದಿಂದ ಹಲವು ಅನುಗ್ರಹಗಳನ್ನು ಕೊಡಿಸಿದ್ದನು.

ದಿಲೀಪನ ಅಕಾಲ ಮತ್ತು ಅನಿರೀಕ್ಷಿತ ಮರಣದಿಂದ ಆ ಕಾಂಗ್ರೆಸ್ ಪುಢಾರಿಗಳೂ, ಲಾಭಕೋರರೂ ಸರ್ಕಾರದ ಮೇಲೆ ಇಟ್ಟುಕೊಂಡಿದ್ದ ಹಿಡಿತವು ಅನಿರೀಕ್ಷಿತವಾಗಿ ಕಳಚಿಹೋಯಿತು. ದುರ್ಗಾದಾಸರು ಮುಖ್ಯಮಂತ್ರಿಯಾದ ನಂತರ ಅವರ ಮೇಲೆ ಆಧಿಪತ್ಯವನ್ನು ಸ್ಥಾಪಿಸಲು ಆ ಜನರು ವಿವಿಧ ರೀತಿಗಳಲ್ಲಿ ಪ್ರಯತ್ನಿಸಿದರು. ಆಗಾಗ ಅವರ ಬಳಿಗೆ ಹೋಗಿ ಹಾರ ತುರಾಯಿಗಳನ್ನು ಅರ್ಪಿಸಿ ಹೊಗಳಿ ನೋಡಿದರು. ದಾಸರಿಗೆ ಅಪ್ತರಾದವರಿಂದ ಹೇಳಿಸಿ ನೋಡಿದರು. ಔತಣ ಸಮಾರಂಭಗಳಿಗೆ ಆಮಂತ್ರಿಸಿ ನೋಡಿದರು. ಆಕ್ರಮ ಅನುಗ್ರಹಗಳಿಗಾಗಿ ಬೇಡಿ, ಕಾಡಿ, ಅಂಗಲಾಚಿ ನೋಡಿದರು. ದುರ್ಗಾದಾಸರು ಯಾವುದಕ್ಕೂ ಜಗ್ಗಲಿಲ್ಲ ತಮ್ಮ ಹಗ್ಗ ಉರುಳುಗೆ ಸಿಕ್ಕದಿರುವ ಮುಖ್ಯಮಂತ್ರಿಯಿಂದ ತಮಗಾವ ಪ್ರಯೋಜನವೂ ಸಿಕ್ಕುವುದಿಲ್ಲವೆಂದು ಮನಗಂಡ ಭ್ರಷ್ಟ ಶಿಖಾಮಣಿಗಳು ಪದಚ್ಯುತಿಗೆ ಸನ್ನಾಹ ಮಾಡತೊಡಗಿದರು.

ಹೀಗಾಗಿ ದುರ್ಗಾದಾಸರ ನಾಲ್ಕು ವರ್ಷಗಳ ಆಳ್ವಿಕೆ ಮುಗಿಯುವುದರೊಳಗಾಗಿ ಅವರು ರಾಜ್ಯದಲ್ಲಿ ಪ್ರಬಲವಾದ ವಿರೋಧವನ್ನು ಎದುರಿಸಬೇಕಾಗಿ ಬಂತು. ಅತೃಪ್ತ ಕಾಂಗ್ರೆಸ್ಸಿಗರೂ, ಕುಪಿತ ಬಂಧುಬಾಂಧವರೂ, ತಿರಸ್ಕರಿಸಲ್ಪಟ್ಟ ಲಾಭಕೋರರೂ ಒಟ್ಟಾಗಿ ಸೇರಿ ಒಂದು ವಿರೋಧಕೂಟವನ್ನು ರಚಿಸಿದರು. ದುರ್ಗಾದಾಸರ

ಜ್ಞಾತಿಯಾಗಿ ಅವರ ಆಶ್ರಯದಲ್ಲೇ ಬೆಳೆದ ಅವರ ಕೃಪೆಯಿಂದ ಪ್ರವರ್ಧಮಾನಕ್ಕೆ ಬಂದಿದ್ದ ಶುಂಭುನಾಥನೆಂಬುವವನು ಆ ಕೂಟದ ಸೂತ್ರಧಾರಿಯಾಗಿದ್ದನು. ದಾಮೋದರನೆಂಬ ಅನಾಮಧೇಯ ವಣಿಕನು ಆ ಕೂಟದ ನಾಯಕನಾದನು. ಮೊದಲು ಪ್ರದೇಶ ಕಾಂಗ್ರೆಸ್ ಸಮಿತಿಯನ್ನು ಆಕ್ರಮಿಸಿ ಆ ನಂತರ ಸರ್ಕಾರವನ್ನಾಕ್ರಮಿಸಿ ಕೊಂಡು ತಮ್ಮಿಚ್ಛೆ ಬಂದಂತೆ ಆಳಬೇಕೆಂಬುದೇ ಆ ಅನಿಷ್ಟಕೂಟದವರ ಅಂತಿಮ ಗುರಿಯಾಗಿತ್ತು.

# ೨. ಅನಿಷ್ಟಕೂಟದ ಅಂಗಾರಕರು

ವಿರೋಧಿಗಳು ರಚಿಸಿದ್ದ ವಿರೋಧ ಕೂಟಕ್ಕೆ ದಾಮೋದರನು ಹೆಸರಿಗೆ ಮಾತ್ರ ನಾಯಕನಾಗಿದ್ದರೂ ವಾಸ್ತವಿಕವಾಗಿ ಶಂಭುವೇ ಆ ಕೂಟದ ಸಾರ್ವಭೌಮನಂತಿದ್ದನು. ಅವನು ತನ್ನಂತೆಯೇ ಇದ್ದ ಭ್ರಷ್ಟರನ್ನೆಲ್ಲಾ ಒಂದುಗೂಡಿಸಿ ದಾಮೋದರನ ನಾಯಕತ್ವದಲ್ಲಿ ಕೂಟ ರಚನೆಯನ್ನು ಮಾಡಿದನು. ಮಹೋದರ, ಪಟವಾರ, ಗಾಂಢೀವ, ಹೆಮ್ಮಾರ, ಕೆಮ್ಮಾರ, ಜಲೋದರ ಮುಂತಾದವರು ಆ ಕೂಟದ ದಳವಾಯಿಗಳಂತಿದ್ದರು. ನಮ್ಮ ಕತೆಯನ್ನು ಮುಂದುವರಿಸುವ ಮುನ್ನ ರಾಜ್ಯದ ರಾಜಕೀಯ ಭವಿಷ್ಯವನ್ನೇ ಬದಲಾಯಿಸಲು ಹೊರಟಿದ್ದ ಈ ಅನಿಷ್ಟಕೂಟದ ಅಂಗಾರಕರ ಪರಿಚಯ ಮಾಡಿಕೊಳ್ಳುವುದು ಅಗತ್ಯ.

ದಾಮೋದರನು ಹೇಮಾವತಿ ನಗರದಲ್ಲಿ ಜನ್ಮವೆತ್ತಿದವನು. ಅವನ ತಂದೆ ಬೀಡಿ ಸಿಗರೇಟುಗಳ ಪೆಟ್ಟಿಗೆ ಅಂಗಡಿಯನ್ನು ಇಟ್ಟುಕೊಂಡು ಜೀವನ ಸಾಗಿಸುತ್ತಿದ್ದನು. ಅವನು ತನ್ನ ಅಲ್ಪ ವ್ಯಾಪಾರದಿಂದ ಬರುತ್ತಿದ್ದ ಅಲ್ಪ ವರಮಾನದಲ್ಲಿ ಬಹಳ ಕಷ್ಟದಿಂದ ಜೀವನವನ್ನು ಸಾಗಿಸಿ ಮಗ ದಾಮೋದರನನ್ನು ಪ್ರೌಢಶಾಲೆಯ ಅಂತಿಮ ಪರೀಕ್ಷೆಯವರೆಗೆ ಓದಿಸಿದ್ದನು. ದಾಮೋದರನು ಶಾಲೆಯನ್ನು ಬಿಟ್ಟ ನಂತರ ಹೇಮಾವತಿ ನಗರದಲ್ಲಿದ್ದ ಗೋಕುಲ್ ಚಂದ್ ಎಂಬುವನ ಬ್ರಾಂದಿ ಅಂಗಡಿಯಲ್ಲಿ ಮ್ಯಾನೇಜರ್ ಆಗಿ ಕೆಲಸಕ್ಕೆ ಸೇರಿದನು.

ಅಂಗಡಿಯ ಒಡೆಯ ಗೋಕುಲ್‌ಚಂದನು ಜೂಜಿನ ಹವ್ಯಾಸಕ್ಕೆ ಬಿದ್ದು ಕುದುರೆ ಜೂಜಿನಲ್ಲಿ ಮಗ್ನನಾಗಿರುತ್ತಿದ್ದನು. ಆ ದ್ಯೂತ ಪಿಶಾಚಿಯ ಕಣ್ಣಿಗೆ ಮಣ್ಣೆರಚುವುದು ಚಾಣಾಕ್ಷ ನರಿಯಂತಿದ್ದ ದಾಮೋದರನಿಗೆ ಕಷ್ಟವಾಗಿರಲಿಲ್ಲ. ಅವನು ಮೊದಲು ಒಡೆಯನ ಬಳಿ ವಿನಯ, ವಿಧೇಯತೆಗಳನ್ನು ಪ್ರದರ್ಶಿಸಿ ಕ್ರಮವಾದ ಲೆಕ್ಕ ಪತ್ರಗಳನ್ನಿಟ್ಟು ಪ್ರಾಮಾಣಿಕನಂತೆ ವರ್ತಿಸಿದನು. ಕೆಲಕಾಲದ ನಂತರ ಗೋಕುಲ್‌ಚಂದನು ಅವನನ್ನು ಸಂಪೂರ್ಣ ನಂಬಿ, ಅಂಗಡಿಯ ವಹಿವಾಟನ್ನು ಅವನಿಗೆ ವಹಿಸಿಕೊಟ್ಟು ಅಮವಾಸ್ಯೆಗೊ, ಹುಣ್ಣಿಮೆಗೊ ಅಂಗಡಿಗೆ ಭೇಟಿಕೊಟ್ಟು ಲೆಕ್ಕಪತ್ರಗಳ ತನಿಖೆ ಶಾಸ್ತ್ರವನ್ನು ಮಾಡುತ್ತಿದ್ದನು.

ಕಾಲಕ್ರಮೇಣ ದಾಮೋದರನು ತನ್ನ ಕೈಚಳಕವನ್ನು ತೋರಿಸಲಾರಂಭಿಸಿದನು. ಮದ್ಯವನ್ನು ನಗದಿ ಹಣಕ್ಕೆ ವಿಕ್ರಯಿಸಿ ಹಣವನ್ನು ತನ್ನ ಬೊಕ್ಕಸಕ್ಕೆ ಸೇರಿಸಿ, ಲೆಕ್ಕದ ಪುಸ್ತಕಗಳಲ್ಲಿ ಕಡವಾಗಿ ಮಾರಿದಂತೆ ಮಾಡಿ ಅವರಿವರ ಹೆಸರಿನಲ್ಲಿ ಖರ್ಚು ಬರೆದಿಡುತ್ತಿದ್ದನು. ವರ್ಷದ ಅಂತ್ಯದಲ್ಲಿ ಕಡದ ಲೆಕ್ಕದಲ್ಲಿದ್ದ ಹಣವಸೂಲಿ ಮಾಡಲು ಅಸಾಧ್ಯವೆಂಬ ನೆಪದಿಂದ ಹೋಕು ಬಾಕಿಯ ಪಟ್ಟಿಗೆ ಸೇರಿಸುತ್ತಿದ್ದನು. ಹೀಗಾಗಿ ಒಂದೆರಡು ವರ್ಷಗಳಲ್ಲೇ ಅಂಗಡಿಯ ಆದಾಯಕ್ಕಿಂತ ಖರ್ಚೇ ಹೆಚ್ಚಾಗುತ್ತಾ ಬಂತು. ಕೆಲವೇ ವರ್ಷಗಳಲ್ಲಿ ಅಂಗಡಿ ದಿವಾಳಿಯಾಗಿ ಮುಚ್ಚುವ ಪ್ರಸಂಗ ಒದಗಿತು.

ಅತ್ತ ಕುದುರೆ ಜೂಜಿನಲ್ಲಿ ಮಗ್ನನಾಗಿದ್ದ ಗೋಕುಲ್‌ಚಂದನು ಜೂಜಿನ ದೆಸೆಯಿಂದ ಅಪಾರ ನಷ್ಟಕ್ಕೊಳಗಾಗಿದ್ದನು. ಅಂಗಡಿಯ ವ್ಯಾಪಾರದಿಂದಲೂ ಜೂಜಿನ ವ್ಯವಹಾರದಿಂದಲೂ ಸಂಭವಿಸಿದ್ದ ಅಪಾರ ನಷ್ಟದಿಂದ ಪಾರಾಗುವ ಮಾರ್ಗತೋರದೆ ಗೋಕುಲ್‌ಚಂದನು ಆತ್ಮಹತ್ಯೆ ಮಾಡಿಕೊಂಡು ನಷ್ಟ ಕಷ್ಟಗಳಿಂದ ಪಾರಾದನು. ಅನ್ನವಿಟ್ಟ ಧಣಿಗೆ ದ್ರೋಹ ಬಗೆದ ದಾಮೋದರನು ಶ್ರೀಮಂತನಾಗಿ ತನ್ನ ಜೀವನದಲ್ಲಿ ಹೊಸ ಅಧ್ಯಾಯವನ್ನು ಪ್ರಾರಂಭಿಸಿದನು.

ಗೋಕುಲ್‌ಚಂದನು ಸಾಯುವಾಗ ದಿಲೀಪನು ರಾಜ್ಯದ ಮುಖ್ಯಮಂತ್ರಿಯಾಗಿದ್ದನು. ದಿಲೀಪನಿಗೆ ದಾಮೋದರನಂತಹ ವ್ಯಕ್ತಿಗಳ ಸಹಾಯ ಅಗತ್ಯವಾಗಿತ್ತು. ಅದನ್ನರಿತ ದಾಮೋದರನು ದಿಲೀಪನಿಗೆ ಅವನ ಅಳಿಯನ ಮೂಲಕ ಐದು ಸಾವಿರ ರೂಪಾಯಿಗಳ ಕಾಣಿಕೆಯನ್ನು ಸಲ್ಲಿಸಿ ಅವನ ಸ್ನೇಹವನ್ನು ಸಂಪಾದಿಸಿದನು. ಕೆಲವು ದಿನಗಳ ನಂತರ ಗೋಕುಲ್‌ಚಂದನ ಹೆಸರಿನಲ್ಲಿದ್ದ ಬಾರ್ ಲೈಸನ್ಸನ್ನು ತನ್ನ ಹೆಸರಿಗೆ ಮಾಡಿಸಿಕೊಂಡನು. ದಾಮೋದರ್ ಬಾರ್ ಮಾಲೀಕನಾದ ಮೇಲೆ ಅವನ ಮತ್ತು ದಿಲೀಪನ ಸ್ನೇಹ ದಿನೇ ದಿನೇ ಗಾಢವಾಯಿತು. ದಿಲೀಪನ ಮನೆಗೆ ದಾಮೋದರನು ಹೋಗಿಬರುವುದೂ, ದಾಮೋದರನನ್ನು ನೋಡಲು ದಿಲೀಪನು ಗುಟ್ಟಾಗಿ ಬರುವುದು ವಾಡಿಕೆಯಾಗಿತ್ತು. ಆಗಾಗ ದಾಮೋದರನು ಅಮೂಲ್ಯವಾದ ವಿದೇಶಿ ಮಧ್ಯವನ್ನು ದಿಲೀಪನಿಗೆ ಉಡುಗೊರೆಯಾಗಿ ಕಳುಹಿಸಿಕೊಡುತ್ತಿದ್ದನು. ಮಧ್ಯದಿಂದ ಸ್ನೇಹವೃದ್ಧಿಯಾಗುವಷ್ಟು ಇನ್ನಾವುದರಿಂದಲೂ ಆಗುವುದಿಲ್ಲವೆಂಬಂತೆ ದಾಮೋದರನೂ ದಿಲೀಪನೂ ಅತ್ಯಂತ ಗೆಳೆಯರಾದರು. ದಿಲೀಪನ ಪ್ರೋತ್ಸಾಹದಿಂದ ದಾಮೋದರನು ಕಾಂಗ್ರೆಸ್ಸಿಗೂ ಸೇರಿ ಬಿಟ್ಟನು.

ಮುಖ್ಯಮಂತ್ರಿಯ ಸ್ನೇಹವನ್ನು ಸಂಪಾದಿಸಿದ್ದ ದಾಮೋದರನು ಮಧ್ಯದ ಕಳ್ಳ ಸಾಗಾಣಿಕೆ ಮತ್ತು ಕಳ್ಳ ಪ್ಯಾಪಾರಗಳಲ್ಲಿ ತೊಡಗಿದನು. ಮುಖ್ಯಮಂತ್ರಿಯ ಸ್ನೇಹಿತನಾಗಿದ್ದುದರಿಂದ ಯಾವ ಅಧಿಕಾರಿಗಳೂ ಅವನ ಗೋಜಿಗೆ ಹೋಗುತ್ತಿರಲಿಲ್ಲ. ಆದ್ದರಿಂದ ಅವನ ಕಳ್ಳ ವ್ಯವಹಾರಗಳಿಗೆ ಯಾವ ಅಡ್ಡಿ ಆತಂಕಗಳೂ ಬರುತ್ತಿರಲಿಲ್ಲ. ಬಾರ್ ಲೈಸನ್ಸ್ ಸಿಕ್ಕಿದ ಮೂರನೇ ವರ್ಷಗಳಲ್ಲಿ ದಾಮೋದರನು ಲಕ್ಷಾಧಿಪತಿಯಾದನು. ಲಕ್ಷಾಧಿಪತಿಯೆನಿಸಿಕೊಂಡ ಅವನು ಕೊಟ್ಯಾಧಿಪತಿಯೂ ಆಗಬೇಕೆಂಬ ಕನಸನ್ನು ಕಾಣುತ್ತಿದ್ದನು. ದಿಲೀಪನ ಆಕಸ್ಮಿಕ ಮರಣದಿಂದ ತಾತ್ಕಾಲಿಕವಾಗಿ ಅವನು ನಿರಾಶನಾದರೂ ಆಶೆಯನ್ನು ತೊರೆದಿರಲಿಲ್ಲ.

ದುರ್ಗಾದಾಸರು ಮುಖ್ಯಮಂತ್ರಿಯಾದ ನಂತರ ದಾಮೋದರನು ಹಲವು ಬಾರಿ ಅವನನ್ನು ಸಂದರ್ಶಿಸಿ ನಯ ವಿನಯ, ಭಯ ಭಕ್ತಿಗಳನ್ನು ಪ್ರದರ್ಶಿಸಿ ಅವರನ್ನು ತನ್ನ ಗಾಳಕ್ಕೆ ಸಿಲುಕಿಸಿಕೊಳ್ಳುವ ಪ್ರಯತ್ನಮಾಡಿದನು. ಆದರೆ ದುರ್ಗಾದಾಸರು ಅವನ ಗಾಳಕ್ಕೆ ಸಿಕ್ಕತಕ್ಕ ಮೀನಾಗಿರಲಿಲ್ಲ. ಒಮ್ಮೆ ದಾಮೋದರನು ಒಂದು ಮಧ್ಯ ತಯಾರಿಕಾ ಕೇಂದ್ರಕ್ಕೆ ಲೈಸನ್ಸ್ ಕೊಡಿಸಿ ಕೊಡಬೇಕೆಂದು ದುರ್ಗಾದಾಸರನ್ನು ಬಹು ವಿಧವಾಗಿ

ಅಂಗಲಾಚಿ ಬೇಡಿ ಕೊಂಡನು. ಆ ಸಮಯದಲ್ಲಿ ದುರ್ಗಾದಾಸರು "ನೋಡೋಣ" ಎಂಬ ಉಪಾಯದ ಉತ್ತರವನ್ನು ಹೇಳಿ ಅವನನ್ನು ಕಳುಹಿಸಿಕೊಡಬಹುದಾಗಿತ್ತು. ದಾಸರು ಕಪಟ ಮೋಸಗಳನ್ನು ಅರಿಯದವರು. ಅವರ ಮಾತುಕತೆ ನಡತೆ ಎಲ್ಲವೂ ನೇರ. ಉಪಾಯದ ಉತ್ತರ ಹೇಳುವ ಬದಲು "ನಿಮ್ಮ ಇತಿಹಾಸ ಚೆನ್ನಾಗಿಲ್ಲ. ಆದ್ದರಿಂದ ನಿಮಗೆ ಲೈಸನ್ಸ್ ಕೊಡಿಸಲು ಸಾಧ್ಯವಿಲ್ಲ, ವೃಥಾ ತೊಂದರೆ ಕೊಡಬೇಡಿ," ಎಂದು ದಾಮೋದರನಿಗೆ ಕಟುವಾಗಿ ಹೇಳಿದರು.

ಅವರ ಮಾತು ಸತ್ಯವೇ ಆಗಿದ್ದರೂ, ಆ ಮಾತುಗಳಿಂದ ದಾಮೋದರನು ಬಹಳ ನೊಂದು ಅವಮಾನಿತನಾದನು. "ಇರಲಿ ದುರ್ಗಾದಾಸ, ನಿನ್ನನ್ನು ಈ ಅಧಿಕಾರ ಗದ್ದುಗೆಯಿಂದ ಕೆಳಗುರುಳಿಸದಿದ್ದರೆ ನಾನು ದಾಮೋದರನೇ ಅಲ್ಲ", ಎಂದು ಮನಸ್ಸಿನಲ್ಲಿ ಶಪಥ ಮಾಡಿದನು. ಅಂದಿನಿಂದ ಶುಂಭುವಿನ ಜೊತೆಗೂಡಿ ವಿರೋಧಕೂಟದ ರಚನೆಯಲ್ಲಿ ತತ್ಪರನಾದನು.

* * * *

ಶಂಭು ಅಥವಾ ಶಂಭುನಾಥನು ನಿಂಬೂರಿನಲ್ಲಿ ಜನ್ಮ ತಾಳಿದವನು. ಅವನು ದುರ್ಗಾದಾಸರ ದೂರದ ಜ್ಞಾತಿ. ಅವನ ತಂದೆ ಒಂದು ಸಣ್ಣ ಕಿರಾಣಿ ಅಂಗಡಿಗೆ ಒಡೆಯನಾಗಿದ್ದನು. ಶಂಭು ಚಿಕ್ಕ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡು ವಿಧವೆಯಾದ ತಾಯಿಯ ಪೋಷಣೆಯಲ್ಲಿ ಬೆಳೆದನು. ಆ ಬಡ ವಿಧವೆಯು ತನ್ನ ಮಗನನ್ನು ಪದವೀಧರನನ್ನಾಗಿ ಮಾಡಬೇಕೆಂಬ ಮಹತ್ವಾಕಾಂಕ್ಷೆಯಿಂದ ಅವನನ್ನು ಶಾಲೆಗೆ ಸೇರಿಸಿದಳು. ಆದರೆ ಸುಪುತ್ರನಿಗೆ ಆಟ ಊಟಗಳಲ್ಲಿದ್ದ ಆಸಕ್ತಿ ಪಾಠ ಪ್ರವಚನಗಳಲ್ಲಿ ಎಳ್ಳಷ್ಟೂ ಇರಲಿಲ್ಲ. ಪರೀಕ್ಷೆಗಳಲ್ಲಿ ಹಲವು ಬಾರಿ ಪಲ್ಟಿ ಹೊಡೆದು ಪ್ರಾಥಮಿಕ ಶಾಲೆಯಲ್ಲಿಯೇ ಹತ್ತು ವರ್ಷಗಳನ್ನು ನೂಕಿದನು.

ವಿದ್ಯೆ ಶಂಭುವಿನ ತಲೆಗೆ ಹತ್ತದಿದ್ದರೂ ಜೇಬುಗಳ್ಳತನದಲ್ಲಿ ಅವನು ಪ್ರಸಿದ್ಧನಾಗಿದ್ದನು. ಶಾಲೆಯಲ್ಲೇ ತನ್ನ ಕೈಚಳಕವನ್ನು ತೋರಿಸಲಾರಂಭಿಸಿ, ತನ್ನ ಸಹಪಾಠಿಗಳ ವಸ್ತುಗಳನ್ನು ಅವರಿಗರಿವಾಗದಂತೆಯೂ, ಅನುಮಾನಕ್ಕೆ ಎಳ್ಳಷ್ಟೂ ಎಡೆಗೊಡದಂತೆಯೂ ಅಪಹರಿಸುತ್ತಿದ್ದನು. ಮಗ ಓದಿ ಮುಂದೆ ಬಂದಾನೆಂಬ ತಾಯಿ ತನ್ನ ಚಿಲ್ಲರೆ ಅಂಗಡಿಯಿಂದ ಬರುತ್ತಿದ್ದ ಅಲ್ಪಸ್ವಲ್ಪ ವರಮಾನದಲ್ಲಿ ಹೊಟ್ಟೆ ಬಟ್ಟೆಗಳನ್ನು ಕಟ್ಟಿ ಮಗನಿಗೆ ಬಟ್ಟೆ ಬರೆಗಳನ್ನೂ, ತಿಂಡಿ ತೀರ್ಥಗಳನ್ನೂ ಒದಗಿಸಿ ಶಾಲೆಗೆ ಕಳುಹಿಸುತ್ತಿದ್ದಳು. ಆದರೆ ಶಂಭು ಶಾಲೆಗೆ ಕ್ರಮವಾಗಿ ಹೋಗದೆ ಹಾದಿ ಬೀದಿಗಳಲ್ಲಿ ಅಲೆಯುತ್ತಾ, ತನ್ನಂತೆಯೇ ಪುಂಡ ಸ್ನೇಹಿತರೊಡನೆ ಗೋಲಿಯಾಡುತ್ತಾ ಕಾಲಹರಣ ಮಾಡುತ್ತಿದ್ದನು. ಫೀಜು, ಪುಸ್ತಕ, ವಂತಿಗೆ ಮುಂತಾದ ನೆಪದಲ್ಲಿ ಮುಗ್ಧ ತಾಯಿಯಿಂದ ಪುಡಿಗಾಸುಗಳನ್ನು ಕಿತ್ತು ಕಾಫಿ ತಿಂಡಿಗಳನ್ನು ಸೇವಿಸಿ, ಬೀಡಿ ಸಿಗರೇಟುಗಳನ್ನು ಸೇದಿ ಸ್ವೇಚ್ಛೆಯಿಂದ ಮೆರೆಯುತ್ತಿದ್ದನು.

ಅಂತೂ ಇಂತೂ, ಏಳುತ್ತಾ ಬೀಳುತ್ತಾ, ವಯಸ್ಸು ಹದಿನಾರು ದಾಟಿದ ನಂತರ ಶಂಭು ಪ್ರೌಢಶಾಲೆಗೆ ಕಾಲಿರಿಸಿದನು. ಮಗನು ಪ್ರವರ್ಧಮಾನದ ಹೆದ್ದಾರಿಯನ್ನು ಹಿಡಿದನೆಂದು ತಾಯಿ ಸಂತೋಷ ಪಟ್ಟಳು. ಆದರೆ ಆ ಸಂತೋಷ ಬಹಳ ಕಾಲ ಉಳಿಯಲಿಲ್ಲ. ಶಂಭು ಮೊದಲೇ ಕಿತಾಪತಿಯಲ್ಲಿ ನಿಸ್ಸೀಮನಾಗಿದ್ದನು. ಪ್ರೌಢಶಾಲೆಯನ್ನು ಸೇರಿದ ನಂತರ ಕಿತಾಪತಿಯ ಜೊತೆಗೆ ಅವನ ಪುಂಡಾಟಿಕೆಯೂ ಹೆಚ್ಚಾಯಿತು. ಅವನ ಸಂಗಾತಿಗಳಾದ ಪುಂಡ ವಿದ್ಯಾರ್ಥಿಗಳೊಡನೆ ಸೇರಿಕೊಂಡು ಸಣ್ಣ ವಯಸ್ಸಿನ ವಿದ್ಯಾರ್ಥಿಗಳಿಂದ ಕಪ್ಪವನ್ನು ಕೀಳುತ್ತಿದ್ದನು.

ಪ್ರೌಡಶಾಲೆಯ ಮೊದಲನೆಯ ತರಗತಿಯಲ್ಲೇ ಶಂಭು ಮೂರು ವರ್ಷ ನೂಕಿದನು. ಈ ಮೂರು ವರ್ಷಗಳ ಅವಧಿಯಲ್ಲಿ ಅವನು ವ್ಯಾಸಂಗದಲ್ಲಿ ಪ್ರಗತಿ ಸಾಧಿಸದಿದ್ದರೂ, ಕಳ್ಳತನದಲ್ಲಿ ಪರಿಣತಿಯನ್ನು ಸಾಧಿಸಿದ್ದನು. ನಿಂಬೂರಿನ ಹೆಸರಾದ ಕೇಡಿಗಳ ಸ್ನೇಹವನ್ನು ಸಂಪಾದಿಸಿ ಅವರೊಡನೆ ಕಳ್ಳತನಕ್ಕಿಳಿದಿದ್ದನು. ಒಮ್ಮೆ ನಿಂಬೂರಿನಲ್ಲಿ ನಡೆದಿದ್ದ ದೊಡ್ಡದೊಂದು ಕಳವು ಪ್ರಕರಣದಲ್ಲಿ ಶಂಭುವಿನ ಕೈವಾಡವಿತ್ತೆಂಬ ಕಾರಣದಿಂದ ಪೋಲಿಸಿನವರು ಅವನನ್ನು ಬಂಧಿಸಿದರು. ಅವನ ತಾಯಿ ತಾನು ದುರ್ಗಾದಾಸರ ಬಂಧುವೆಂದು ಪೋಲಿಸಿನವರಲ್ಲಿ ಮೊರೆಯಿಟ್ಟಳು. ದುರ್ಗಾದಾಸರ ಬಂಧುವೆಂಬ ಕಾರಣದಿಂದಲೂ, ವಿಧ್ಯಾರ್ಥಿ ಎಂಬ ಕಾರಣದಿಂದಲೂ ಪೋಲಿಸಿನವರು ಶಂಭುವಿನ ಮೇಲೆ ಮೊಕದ್ದಮೆಯನ್ನು ಹೂಡದೆ ಎಚ್ಚರಿಸಿ ಕೈ ಬಿಟ್ಟರು.

ಕಳವು ಕೇಸಿನಿಂದ ಪಾರಾದ ಮೇಲೆ ಅವನ ತಾಯಿ ಅವನನ್ನು ಶಾಲೆಯಿಂದ ಬಿಡಿಸಿದಳು. ತರುವಾಯ ಆಕೆ ದುರ್ಗಾದಾಸರ ಬಳಿಗೆ ಹೋಗಿ ಮಗನು ದಾರಿ ತಪ್ಪಿ ಹೋಗುತ್ತಿರುವುದನ್ನು ವಿವರಿಸಿ, ಅವನಿಗೇನಾದರೊಂದು ಸರ್ಕಾರಿ ಚಾಕರಿಯನ್ನು ಕೊಡಿಸಿಕೊಡಬೇಕೆಂದು ಮೊರೆಯಿಟ್ಟಳು. ಪ್ರೌಢಶಾಲೆಯ ಮೊದಲನೆಯ ತರಗತಿಯಲ್ಲೇ ಮೂರುವರ್ಷಗಳ ಕಾಲ ಕೊಳೆತವನಿಗೆ ಸರ್ಕಾರಿ ನೌಕರಿಯೆಲ್ಲಿ ಸಿಕ್ಕಿತು! ತಾಯಿಯ ಗೋಳನ್ನು ನೋಡಲಾರದೆ ದುರ್ಗಾದಾಸರು ಪ್ರದೇಶ ಕಾಂಗ್ರೆಸ್ ಕಛೇರಿಯಲ್ಲಿ ಮಾಹೆಯಾನ ಐವತ್ತು ರೂಪಾಯಿಗಳ ಸಂಬಳವನ್ನು ಗೊತ್ತುಮಾಡಿ ಅವನನ್ನು ಗುಮಾಸ್ತನನ್ನಾಗಿ ನೇಮಿಸಿಕೊಂಡರು. ಆಗ ದುರ್ಗಾದಾಸರು ಪ್ರದೇಶ ಕಾಂಗ್ರೆಸ್ಸಿನ ಅಧ್ಯಕ್ಷರಾಗಿದ್ದರು.

ಪ್ರದೇಶ ಕಾಂಗ್ರೆಸ್ ಕಛೇರಿಗೆ ಆಗಮಿಸಿದ ನಂತರ ಶಂಭುವಿನ ಚರ್ಯೆ ದಿನೇ ದಿನೇ ಬದಲಾಯಿಸತೊಡಗಿತು. ಪಕ್ಷದ ಆಗುಹೋಗುಗಳನ್ನೂ ಪ್ರಮುಖರ ನೀತಿಗಳನ್ನೂ ಅರಿತುಕೊಳ್ಳಲು ಅವನಿಗೊಂದು ಸದವಕಾಶ ದೊರಕಿತ್ತು. ಆ ಅವಕಾಶವನ್ನು ತನ್ನ ಮೇಲ್ಮೆಗಾಗಿ ಉಪಯೋಗಿಸಿಕೊಳ್ಳಲು ಅವನು ನಿಶ್ಚಯಿಸಿದನು.

ರಾಜ್ಯದ ಕಾಂಗ್ರೆಸ್ ಪಕ್ಷದ ಕೇಂದ್ರ ಕಛೇರಿಯಲ್ಲಿ ಕೆಲಸ ಮಾಡುತ್ತಿದ್ದುದರಿಂದಲೂ, ಪ್ರದೇಶ ಕಾಂಗ್ರೆಸ್ಸಿನ ಅಧ್ಯಕ್ಷರ ಜ್ಞಾತಿಯಾಗಿದ್ದುದರಿಂದಲೂ ದಿನಗಳುರುಳಿದಂತೆಲ್ಲಾ ಶಂಭುವಿನ ಪ್ರಭಾವ ಬೆಳೆಯತೊಡಗಿತು. ಪ್ರದೇಶ ಕಾಂಗ್ರೆಸ್‌ನ ಕಛೇರಿಗೆ ಬರುತ್ತಿದ್ದ

ರಾಜ್ಯದ ಪ್ರಮುಖರನೇಕರ ಪರಿಚಯ ಅವನಿಗಾಗಿತ್ತು. ಅಲ್ಲದೆ ಮಂತ್ರಿಗಳಿಗೆ ಮತ್ತು ಉನ್ನತ ಅಧಿಕಾರಿಗಳಿಗೆ ಮನವಿಗಳನ್ನರ್ಪಿಸಸಲಿಚ್ಛಿಸಿದವರು ಶಂಭುವನ್ನು ಆಶ್ರಯಿಸುತ್ತಿದ್ದರು. ಶಂಭು ಅವರನ್ನು ಮಂತ್ರಿಗಳ ಮತ್ತು ಅಧಿಕಾರಿಗಳ ಬಳಿಗೆ ಕರೆದೊಯ್ಯುತ್ತಿದ್ದನು. ಈ ಕಾರಣದಿಂದ ಮಂತ್ರಿಗಳ ಹಲವು ಉನ್ನತ ಅಧಿಕಾರಿಗಳ ಪರಿಚಯ ಅವನಿಗಾಗಿತ್ತು.

ಮೊದಮೊದಲು ಶಂಭು ಯಾವ ಪ್ರತಿಫಲವೂ ಇಲ್ಲದೆ ತನ್ನನ್ನಾಶ್ರಯಿಸಿ ಬಂದವರಿಗೆ ಮಂತ್ರಿಗಳ ಅಥವಾ ಅಧಿಕಾರಿಗಳ ಸಹಾಯವನ್ನು ದೊರಕಿಸಿಕೊಡುತ್ತಿದ್ದನು. ಕ್ರಮೇಣ ಅವನಲ್ಲಿ ದುರಾಸೆ ಅಂಕುರಿಸಿತು. ಸ್ವಾಮಿ ಕಾರ್ಯದ ಜೊತೆಗೆ ಸ್ವಕಾರ್ಯವನ್ನೂ ಸಹ ಸಾಧಿಸಲು ಮನಸ್ಸು ಮಾಡಿದನು. ತನಗೆ ಬರುವ ಸಂಬಳ ಜೀವನಕ್ಕೆ ಸಾಲದೆಂದು ತನ್ನನ್ನಾಶ್ರಯಿಸಿ ಬರುತ್ತಿದ್ದವರಿಂದ ಬಹುಮಾನದ ರೂಪದಲ್ಲಿ ಅಷ್ಟಿಷ್ಟು ಕೇಳಲಾರಂಭಿಸಿದನು. ಕಾಲಕ್ರಮೇಣ ಬಹುಮಾನ ರೂಪದಲ್ಲಿ ಬರುತ್ತಿದ್ದ ಹಣ ಸಂಬಳಕ್ಕಿಂತ ಹೆಚ್ಚಾಯಿತು.

ಶಂಭು ಪ್ರದೇಶ ಕಾಂಗ್ರೆಸ್ ಕಛೇರಿಯನ್ನು ಸೇರಿದ ಎರಡು ವರ್ಷಗಳ ನಂತರ ದುರ್ಗಾದಾಸರು ರಾಜ್ಯ ಮುಖ್ಯಮಂತ್ರಿಯಾದರು. ಅವರ ಮುಖ್ಯಮಂತ್ರಿಯಾದೊಡನೆ ಶಂಭು ಅವರ ನಿವಾಸದಲ್ಲಿರಲು ಅಪ್ಪಣೆ ಬೇಡಿದನು. ದಾಯಾದಿಯೆಂಬ ಔದಾರ್ಯದಿಂದ ದಾಸರು ತಮ್ಮ ಮನೆಯಲ್ಲಿ ಅವನಿಗೆ ಆಶ್ರಯ ನೀಡಿದರು.

ಮುಖ್ಯಮಂತ್ರಿಗಳ ಮನೆಗೆ ಬರುತ್ತಿದ್ದ ಕಾಂಗ್ರೆಸ್ ಮುಖಂಡರ ಮತ್ತು ಅಧಿಕಾರಿಗಳ ಪರಿಚಯ ಮಾಡಿಕೊಳ್ಳಲು ಶಂಭುವಿಗೆ ಬಹಳ ಕಾಲ ಬೇಕಾಗಲಿಲ್ಲ. ಮುಖ್ಯಮಂತ್ರಿಗಳ ಮನೆಯಲ್ಲಿ ಅತಿಥಿಗಳ ಸ್ವಾಗತ ಸತ್ಕಾರಗಳಿಗೆ ಶಂಭುವೇ ಮುಂದಾಗಿರುತ್ತಿದ್ದನು. ಮುಖ್ಯಮಂತ್ರಿಗಳನ್ನು ನೋಡಲು ಬರುತ್ತಿದ್ದವರನ್ನು ಶಂಭುವೇ ಕರೆದೊಯ್ಯುತ್ತಿದ್ದನು. ಮುಖ್ಯಮಂತ್ರಿಗಳು ತನ್ನ ಚಿಕ್ಕಪ್ಪನೆಂದು ಸಾರಿಕೊಂಡು, ತಾನೊಬ್ಬ ಪ್ರಭಾವಶಾಲಿ ಎಂಬ ಭಾವನೆ ಜನರ ಮನಸ್ಸಿನಲ್ಲಿ ಮೂಡುವಂತೆ ಮಾಡುತ್ತಿದ್ದನು. ಪ್ರಮುಖ ಕಾಂಗ್ರೆಸ್ ನಾಯಕನೋಪಾದಿಯಲ್ಲಿ ಅವನು ವರ್ತಿಸುತ್ತಿದ್ದನು.

ಮುಖ್ಯಮಂತ್ರಿಗಳ ಜ್ಞಾತಿಯಾಗಿದ್ದರಿಂದಲೂ, ಅವರ ನಿಕಟ ಸಂಪರ್ಕವಿದ್ದುದರಿಂದಲೂ ಜನರು ಶಂಭುವನ್ನು ಸಹಾಯಕ್ಕಾಗಿ ಆಶ್ರಯಿಸುತ್ತಿದ್ದರು. ತನ್ನ ಬಳಿಗೆ ಬರುತ್ತಿದ್ದ ಜನರನ್ನು ಅವನು ಆಗಾಗ ಮಂತ್ರಿಗಳ ಮತ್ತು ಅಧಿಕಾರಿಗಳ ಬಳಿಗೆ ಕರೆದೊಯ್ದು ಅವರಿಂದ ಕೆಲಸ ಕಾರ್ಯಗಳನ್ನು ಮಾಡಿಸಿಕೊಡುತ್ತಿದ್ದನು. ಅವನು ಮುಖ್ಯಮಂತ್ರಿಗಳ ಬಂಧುವೆಂಬ ಕಾರಣದಿಂದ ಮಂತ್ರಿಗಳೂ, ಅಧಿಕಾರಿಗಳೂ ಅವನೊಡನೆ ಸಲಿಗೆಯಿಂದ ವರ್ತಿಸುತ್ತಿದ್ದರು.

ಶಂಭು ತನ್ನ ಹಿಂದಿನ ಚಾಳಿಯನ್ನು ಮುಂದುವರಿಸಿದನು. ಮೊದಮೊದಲು ಸಣ್ಣಪುಟ್ಟವರ ಪರವಾಗಿ ಸಣ್ಣಪುಟ್ಟ ಕೆಲಸ ಕಾರ್ಯಗಳಿಗಾಗಿ ಮಂತ್ರಿಗಳನ್ನೂ ಮತ್ತು ಅಧಿಕಾರಿಗಳನ್ನು ಆಶ್ರಯಿಸಿ ಅಲ್ಪ ಸ್ವಲ್ಪ ರುಸುಂ ಪಡೆಯುತ್ತಿದ್ದನು. ಕೊನೆಕೊನೆಗೆ

ದೊಡ್ಡ ದೊಡ್ಡವರಿಗೆ ಕಂಟ್ರಾಕ್ಟ್, ಪರ್ಮಿಟ್, ಲೈಸನ್ಸ್, ಮುಂತಾದ ದೊಡ್ಡ ದೊಡ್ಡ ಅನುಗ್ರಹಗಳನ್ನು ದೊರಕಿಸಿಕೊಟ್ಟು ಪ್ರತಿ ತಿಂಗಳಲ್ಲೂ ಸಾವಿರಗಟ್ಟಲೆ ಸೆಳೆಯುತ್ತಿದ್ದನು. ಹೀಗಾಗಿ ದುರ್ಗಾದಾಸರ ಆಳ್ವಿಕೆ ಪ್ರಾರಂಭವಾಗಿ ಮೂರು ವರ್ಷಗಳು ಮುಗಿಯುವುದರೊಳಗಾಗಿ ಶಂಭು ಒಬ್ಬ ದೊಡ್ಡ ಪುಢಾರಿಯಾಗಿ ಲಕ್ಷಾಧಿಪತಿಯಾಗಿದ್ದನು. ಲಕ್ಷಾಧಿಪತಿಯಾಗಿದ್ದರೂ ಪ್ರದೇಶ ಕಾಂಗ್ರೆಸ್ ಕಛೇರಿಯ ಗುಮಾಸ್ತ ಕೆಲಸವನ್ನು ಬಿಟ್ಟಿರಲಿಲ್ಲ.

ರಾಜ್ಯದ ಹಲವಾರು ಸಮಸ್ಯೆಗಳನ್ನು ಬಗೆಹರಿಸುವ ಕಾರ್ಯದಲ್ಲಿ ನಿರತರಾಗಿದ್ದ ದುರ್ಗಾದಾಸರಿಗೆ ಶಂಭುವಿನ ಕಾರುಬಾರುಗಳೊಂದೂ ಗೊತ್ತಾಗಿರಲಿಲ್ಲ. ತಮ್ಮ ಆಶ್ರಯವನ್ನು, ಹೆಸರನ್ನು ಶಂಭು ದುರುಪಯೋಗ ಮಾಡಿಕೊಳ್ಳುತ್ತಾನೆಂಬ ಅನುಮಾನ ಅವರಿಗೆಂದೂ ಬಂದಿರಲಿಲ್ಲ. ಬದಲಾಗಿ ಶಂಭುವಿನ ಚಾಕಚಕ್ಯತೆಗಳನ್ನೂ, ಕಾರ್ಯದಕ್ಷತೆಯನ್ನೂ ಕಂಡು ಅವರು ಸಂತೋಷಗೊಂಡಿದ್ದರು. ತಮ್ಮ ಆಶ್ರಯದಲ್ಲಿ ಬೆಳೆಯುತ್ತಿದ್ದ ಶಂಭು ಮುಂದೆ ವೈರಿಯಾಗುತ್ತಾನೆಂಬುದನ್ನು ಅವರು ಕನಸಿನಲ್ಲಿಯೂ ಯೋಚಿಸಿರಲಿಲ್ಲ. ತಾವು ಹಾಲೆರೆದು ಸಾಕುತ್ತಿದ್ದ ಹಾವಿನ ಮರಿ ಕೆಲವೇ ವರ್ಷಗಳಲ್ಲಿ ಘಟಸರ್ಪವಾಗಿ ಬೆಳೆದು ತಮ್ಮನ್ನೇ ಕಚ್ಚುತ್ತದೆಯೆಂಬ ಕಲ್ಪನೆ ಮುಗ್ಧರಾದ ಅವರಿಗೆ ಹೇಗೆ ತಾನೇ ಬಂದೀತು?

ಪ್ರಭಾವ ಹೆಚ್ಚಾಗಿ, ಕೈಯಲ್ಲಿ ಹಣವೂ ಹೆಚ್ಚಾಗಿ ಸೇರಿದ ಮೇಲೆ ಶಂಭುವಿನ ಧೈರ್ಯಸಾಹಸಗಳು ಹೆಚ್ಚಾದವು. ಒಮ್ಮೆ ಅತ್ಯಂತ ಲಾಭದಾಯಕವಾದ ಅಂತರ ರಾಜ್ಯ ಬಸ್ ಪರ್ಮಿಟ್ಟಿಗಾಗಿ ತನ್ನ ಹೆಸರಿನಲ್ಲೇ ಅರ್ಜಿಯನ್ನು ಸಲ್ಲಿಸಿದನು. ಅರ್ಜಿಯನ್ನು ಸಲ್ಲಿಸಿದ ನಂತರ ಸಂಬಂಧಪಟ್ಟ ಅಧಿಕಾರಿಯ ಬಳಿಗೆ ಹೋಗಿ ದುರ್ಗಾದಾಸರಿಗಾಗಿ ತಾನು ಅರ್ಜಿಯನ್ನು ಸಲ್ಲಿಸಿರುವುದಾಗಿಯೂ, ದಾಸರೇ ತನ್ನನ್ನು ಕಳುಹಿಸಿಕೊಟ್ಟಿರುವುದಾಗಿಯೂ ಹೇಳಿ, ತನ್ನ ಹೆಸರಿಗೆ ಪರ್ಮಿಟ್ ಪಡೆದು ಕೊಂಡನು.

ಅದುವರೆಗೆ ಬಸ್ ಸರ್ವಿಸ್ ಇಲ್ಲದವನೊಬ್ಬನಿಗೆ ಮೊಟ್ಟಮೊದಲನೆಯ ಸಾರಿ ಅತ್ಯಂತ ಲಾಭದಾಯಕ ಬಸ್ ಸರ್ವಿಸ್ ಸಿಕ್ಕಿದ್ದು ರಾಜ್ಯದ ಬಸ್ ಮಾಲೀಕರ ಅಸೂಯೆಯನ್ನು ಕೆರಳಿಸಿತು. ಅವರಲ್ಲಿ ಕೆಲವರಿಗೆ ಶಂಭು ದುರ್ಗಾದಾಸರ ಮನೆಯಲ್ಲಿರುವ ವಿಚಾರ ಗೊತ್ತಾಗಿತ್ತು. ಅವನು ಅವರ ದಾಯಾದಿ ಎಂಬ ವಿಚಾರವೂ ಗೊತ್ತಾಗಿತ್ತು. ಮುಖ್ಯಮಂತ್ರಿಯು ತನ್ನ ಬಂಧುವಾದ ಶಂಭುವಿನ ಹೆಸರಿನಲ್ಲಿ ಬಸ್ ಪರ್ಮಿಟ್ ಪಡೆದುಕೊಂಡಿದ್ದಾರೆಂದು ಕೆಲವರು ಅಲ್ಲಲ್ಲಿ ಪಿಸುಮಾತಿನ ಅಪಪ್ರಚಾರವನ್ನು ಆರಂಭಿಸಿದರು. ಒಂದೆರಡು ಪತ್ರಿಕೆಗಳಲ್ಲೂ ಬಹಿರಂಗವಾಗಿ ಆ ವಿಚಾರವನ್ನು ಪ್ರಸ್ತಾಪಿಸಲಾಗಿತ್ತು. ಆಗ ದುರ್ಗಾದಾಸರು ಕಣ್ತೆರೆದರು.

ದುರ್ಗಾದಾಸರ ಆಜ್ಞೆಯ ಮೇರೆಗೆ ಶಂಭುವಿನ ಕಾರುಬಾರುಗಳ ವಿಚಾರದಲ್ಲಿ ಒಂದು ಗುಪ್ತ ತನಿಖೆ ನಡೆಯಿತು. ತನಿಖೆ ಅಂತ್ಯದಲ್ಲಿ ಶಂಭು ದಾಸರ ಹೆಸರನ್ನು ದುರುಪಯೋಗಮಾಡಿ ಹಲವು ಅಕ್ರಮ ವ್ಯವಹಾರಗಳನ್ನು ನಡೆಸಿದ್ದನೆಂಬ ವಿಚಾರ ಬಯಲಿಗೆ ಬಂತು. ಆ ಕೂಡಲೆ ದುರ್ಗಾದಾಸರು ಶಂಭುವನ್ನು ಮನೆಯಿಂದ ಓಡಿಸಿದರು.

ಅಲ್ಲದೆ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರಾಗಿದ್ದ ಭಾರ್ಗವದಾಸರಿಗೆ ಅವನ ಇತಿಹಾಸವನ್ನು ತಿಳಿಸಿ ಕಾಂಗ್ರೆಸ್ ಕಛೇರಿಯಿಂದಲೂ ಅವನನ್ನು ಉಚ್ಚಾಟನೆ ಮಾಡಿಸಿದರು.

ಆದರೇನು! ಅಷ್ಟು ಹೊತ್ತಿಗಾಗಲೇ ಶಂಭು ಲಕ್ಷಾಧಿಪತಿಯಾಗಿದ್ದನು. ಅವನಿಗೆ ಪ್ರದೇಶ ಕಾಂಗ್ರೆಸ್ ಕಛೇರಿಯ ಗುಮಾಸ್ತನ ಕೆಲಸವೂ ಬೇಕಾಗಿರಲಿಲ್ಲ; ದುರ್ಗಾದಾಸರ ಆಶ್ರಯದ ಅವಶ್ಯಕತೆಯೂ ಇರಲಿಲ್ಲ. ಅವನು ಸ್ವತಂತ್ರವಾಗಿ ಗಣ್ಯ ವ್ಯಕ್ತಿಯಂತೆ ಬಾಳುವ ಶಕ್ತಿಯನ್ನು ಪಡೆದಿದ್ದನು. ಕೆಲವು ದಿನಗಳ ನಂತರ ಶಂಭು ತನ್ನ ಕಳ್ಳಗಂಟಿನಿಂದ ಒಂದು ಮನೆಯನ್ನೂ ಒಂದು ಗಿರಣಿಯನ್ನೂ ಕೊಂಡುಕೊಂಡು ಹೇಮಾವತಿ ನಗರದ ಗಣ್ಯಮಹನೀಯನಾದ. ಹಣವೊಂದಿದ್ದರೆ ಕೇಡಿಗಳೂ ಸಹ ಗಣ್ಯರೆನ್ನಿಸಿಕೊಳ್ಳುತ್ತಾರೆ. ಕೆಲಕಾಲದ ನಂತರ ಅವನು ದುರ್ಗಾದಾಸರಿಂದ ತನಗಾಗಿದ್ದ ಎಲ್ಲಾ ಉಪಕಾರಗಳನ್ನೂ ಮರೆತು ಅವರ ರಾಜಕೀಯ ವಿರೋಧಿಗಳೊಡನೆ ಸೇರಿ ವಿರೋಧಕೂಟವನ್ನು ರಚಿಸಲು ಮುಂದಾದನು.

* * * *

ಹೆಮ್ಮೊರನು ಪದ್ಮಗಿರಿ ಜಿಲ್ಲೆಯವನು. ಚಿಕ್ಕ ವಯಸ್ಸಿನಲ್ಲೇ ಶಾಲೆಯನ್ನು ಬಿಟ್ಟ ನಂತರ ಯಾವ ಉದ್ಯೋಗವೂ ಸಿಕ್ಕದೆ ಹೋದದ್ದರಿಂದ ದೇಶಭಕ್ತಿಯ ಸೋಗಿನಲ್ಲಿ ಕಾಂಗ್ರೆಸ್ ಸಂಸ್ಥೆಯನ್ನು ಸೇರಿದವನು. ಸ್ವರಾಜ್ಯಕ್ಕೆ ಪೂರ್ವ ಅವನು ಸ್ವಯಂ ಸೇವಕನ ಪೋಷಾಕನ್ನು ಧರಿಸಿ, ದೇಶ ಪ್ರೇಮಿಯಂತೆ ನಟಿಸಿ, ಅವರಿವರ ಮನೆಯಲ್ಲಿ ಕವಳವನ್ನು ಕತ್ತರಿಸಿ, ಉಂಡಾಡಿ ಗುಂಡನಂತಿದ್ದನು. ಹೆಮ್ಮೊರನ ಸವಾರಿ ಸತ್ಯಾಗ್ರಹದ ನೆಪದಲ್ಲಿ ಎರಡು ಬಾರಿ ಸೆರೆಮನೆಗೂ ಚಿತ್ತೈಸಿತ್ತು. ಸ್ವರಾಜ್ಯ ಬಂದ ನಂತರ ಅವನು ಕೆಲಕಾಲ ಗೌರವಸ್ಥ ರಾಜಕಾರಣಿಯಂತೆ ಓಡಾಡಿದನು. ಆದರೆ ಜೀವನ ನಿರ್ವಹಿಸುವುದು ಕಷ್ಟವಾಗಿ ಪರಿಣಮಿಸಿದ್ದರಿಂದ ತನಗೆ ಸೆರೆಮನೆಯಲ್ಲಿ ಪರಿಚಿತರಾಗಿದ್ದ ಕಾಂಗ್ರೆಸ್ ಮುಖಂಡರ ಕೈಕಾಲು ಕಟ್ಟಿದ ಪದ್ಮಗಿರಿ ಜಿಲ್ಲಾ ಕಾಂಗ್ರೆಸ್ ಕಛೇರಿಯ ಖಾಯಂ ಕಾರ್ಯದರ್ಶಿಯಾದನು.

ಹೆಮ್ಮೊರನು ಬಾಲ್ಯದಿಂದಲೂ ಪರಾನ್ನ, ಪರಾರ್ಥಗಳಿಂದಲೇ ಬೊಜ್ಜು ಬೆಳೆಸಿದವನು. ಹೆಸರಿಗೆ ತಕ್ಕಂತೆ ಸ್ಥೂಲಕಾಯ ವ್ಯಕ್ತಿ. ಕಾರ್ಯದರ್ಶಿಯಾದ ಮೇಲೆ ಜನಸಂಪರ್ಕವನ್ನು ಗಳಿಸಿ ತನ್ನ ಪ್ರಭಾವವನ್ನು ಬೆಳಸಿಕೊಂಡನು. ಶಂಭುವಿನಂತೆ ಅವನೂ ಕೂಡ ಸಹಾಯಾರ್ಥಿಗಳಾಗಿ ತನ್ನ ಬಳಿ ಸಾರುತ್ತಿದ್ದ ಜನರಿಂದ ನಾನಾ ನೆಪದಲ್ಲಿ ನಾನಾ ರೂಪದಲ್ಲಿ ಹಣವನ್ನು ಶೇಖರಿಸುತ್ತಿದ್ದನು. ಕ್ರಮೇಣ ಅವನ ದೃಷ್ಟಿ ಮೇಲ್ಮಟ್ಟದ ರಾಜಕಾರಣದ ಕಡೆಗೆ ಹರಿಯಿತು. ಜಿಲ್ಲಾ ಕಾಂಗ್ರೆಸ್ ಪ್ರಮುಖರಲ್ಲಿ ವ್ಯಾಜ್ಯವನ್ನು ಹಚ್ಚಿಟ್ಟು ಒಂದೆರಡು ವರ್ಷಗಳ ನಂತರ ತಾನೇ ಜಿಲ್ಲಾ ಕಾಂಗ್ರೆಸ್ ಸಮಿತಿಯ ಅಧ್ಯಕ್ಷನಾದನು.

ಅಧ್ಯಕ್ಷ ಪದವಿಯನ್ನೇರಿದ ಮೇಲೆ ಹೆಮ್ಮೊರನ ಅದೃಷ್ಟದ ಬಾಗಿಲು ತೆರೆದಂತಾಯಿತು. ಆಗ ದಿಲೀಪನು ರಾಜ್ಯದ ಮುಖ್ಯಮಂತ್ರಿಯಾಗಿದ್ದನು. ದಿಲೀಪನ ಆಶ್ರಯವನ್ನು ಸಂಪಾದಿಸಿ

ಅವನ ಪಟ್ಟ ಶಿಷ್ಯನಾದನು. ದಿಲೀಪನ ಬೆಂಬಲ ಸಿಕ್ಕಿದ ಮೇಲೆ ಹೆಮ್ಮೊರನ ಪ್ರಭಾವವೂ ಹೆಚ್ಚಾಯಿತು. ವರಮಾನವೂ ಹೆಚ್ಚಾಯಿತು. ತನ್ನನ್ನು ಆಶ್ರಯಿಸಿ ಬರುತ್ತಿದ್ದವರಿಂದ ನಿರ್ಲಜ್ಜೆಯಿಂದ, ನಿರ್ಭಯವಾಗಿ ಹಣವನ್ನು ಕೇಳುತ್ತಿದ್ದನು. ಒಳ್ಳೆಯ ಮಾತಿಗೆ ಮಣಿಯದಿದ್ದವರನ್ನು ಹೆದರಿಸಿ ಹಣ ಪಿಸುಗುವಂತೆ ಮಾಡುತ್ತಿದ್ದನು. ಅವನ ರೀತಿ ವಿಚಾರದಲ್ಲಿ ಯಾರಾದರೂ ಟೀಕೆ ಮಾಡಿದರೆ "ನಾನೇನು ಲಂಚ ಹೊಡೀತೀನೇನು? ನಾ ಜೈಲಿಗ್ಹೋಗಿ ತ್ಯಾಗಮಾಡೀನಿ ಅಂತ ಮಂದಿ ಕಾಣಿಕೆ ಕೊಡ್ತಾರೆ", ಎನ್ನುತ್ತಿದ್ದನು.

ದಿಲೀಪನ ಸಹಾಯದಿಂದ ಹೆಮ್ಮೊರನು ಶಾಸನಸಭೆಯ ಸದಸ್ಯನಾದನು. ಶಾಸಕನಾದ ಮೇಲೆ ಅವನನ್ನು ಹಿಡಿದು ನಿಲ್ಲಿಸುವವರೇ ಇರಲಿಲ್ಲ. ಮೊದಲೇ ಅವನಿಗೆ ತಿಂಗಳು ಒಂದು ಸಾವಿರ ರೂಪಾಯಿಗಳ ವರಮಾನವಿತ್ತು. ಶಾಸಕನಾದ ಮೇಲೆ ಅವನ ವರಮಾನ ಐದು ಸಾವಿರಕ್ಕೇರಿತು. ಮಂತ್ರಿಗಳಿಂದ ಅಥವಾ ಅಧಿಕಾರಿಗಳಿಂದ ದೊರೆಯಬೇಕಾದ ಪರಿಹಾರಕ್ಕಾಗಿ ಯಾರಾದರೂ ಅವನನ್ನಾಶ್ರಯಿಸಿದರೆ ಅವರನ್ನು ಪೂರ್ತಿಯಾಗಿ ಬೋಳಿಸಿ ಬಿಡುತ್ತಿದ್ದನು. ಅವನ ಸಹಾಯವನ್ನಪೇಕ್ಷಿಸಿದವರು. ಪದ್ಮಗಿರಿಯಿಂದ ರಾಜಧಾನಿಯವರೆಗೆ ಪ್ರಯಾಣದ ಖರ್ಚನ್ನು ಕೊಡಬೇಕಾಗಿತ್ತು. ರಾಜಧಾನಿಯಲ್ಲಿ ಅವನು ಹೇಳಿದ ಉತ್ಕೃಷ್ಟ ಹೋಟೆಲಿನಲ್ಲಿ ವಸತಿ ಸೌಕರ್ಯವನ್ನು ಏರ್ಪಡಿಸಬೇಕಾಗಿತ್ತು. ಅವನಪೇಕ್ಷಿಸಿದ ತಿಂಡಿ ತೀರ್ಥಗಳನ್ನು ಕೊಡಿಸಬೇಕಾಗಿತ್ತು. ಅವನಿಷ್ಟಪಟ್ಟ ಸಿನಿಮಾಕ್ಕೆ ಅವನನ್ನು ಕರೆದೊಯ್ಯಬೇಕಾಗಿತ್ತು. ಯಾರಾದರೂ ತಮಗಾಗಬೇಕಾದ ಕೆಲಸದ ಸಲುವಾಗಿ ಹೆಮ್ಮೊರನಿಗೆ ಟ್ಯಾಕ್ಸಿಯನ್ನು ಒದಗಿಸಿದರೆ ಅದನ್ನು ಅವರ ಖರ್ಚಿನಲ್ಲಿ ದಿನವೆಲ್ಲಾ ಉಪಯೊಗಿಸಿಕೊಳ್ಳುತ್ತಿದ್ದನು.

ಹೆಮ್ಮೊರನು ಶಾಸನಸಭೆಯ ಸದಸ್ಯನಾದಮೇಲೆ ಪದ್ಮಗಿರಿ ಜಿಲ್ಲೆಯ ಆಡಳಿತವೆಲ್ಲವೂ ಅವನು ಹೇಳಿದಂತೆ ನಡೆಯುತ್ತಿತ್ತು. ಶಾಸಕ ಹೆಮ್ಮೊರನು ಪದ್ಮಗಿರಿ ಜಿಲ್ಲೆಯ ಸರ್ವಾಧಿಕಾರಿಯಂತಿದ್ದನು. ಅಸಾಧ್ಯವೆನಿಸಿದ ಕಾರ್ಯಗಳನ್ನು ತನ್ನ ಪ್ರಭಾವದಿಂದ ಸಾಧ್ಯಗೊಳಿಸುತ್ತಿದ್ದನು. ಆ ಜಿಲ್ಲೆಯ ಶ್ರೀಮಂತರನೇಕರು ಆಗ್ರಹಕ್ಕೆ ಪಾತ್ರರಾಗಲು ಹಿಂಜರಿಯುತ್ತಿದ್ದರು. ಆದ್ದರಿಂದ ಅವನು ಬಯಸಿದಾಗಲೆಲ್ಲಾ ಬಯಸಿದಷ್ಟು ಹಣವನ್ನು ತೆತ್ತು ಅವನ ವಿಶ್ವಾಸಕ್ಕೆ ಪಾತ್ರರಾಗುತ್ತಿದ್ದರು. ಅಂತಹವರನ್ನು ಅವನು ಸದಾ ರಕ್ಷಿಸುತ್ತಿದ್ದನು. ಹೆಮ್ಮೊರನು ತನಗಾಗದವರಿಗೆ ಸಹಿಸಲಸದಳವಾದ ಉಪಟಳಗಳನ್ನು ಕೊಡುತ್ತಿದ್ದನು. ದಿಲೀಪನ ಮರಣಾನಂತರ ಅವನು ದುರ್ಗಾದಾಸರ ಆಶ್ರಯವನ್ನು ಪಡೆಯುವುದಕ್ಕಾಗಿ ಅವರ ಬಳಿ ಸುಳಿದಾಡಿದನು. ಆದರೆ ದಾಸರ ಬಳಿ ಅವನ ಬೇಳೆ ಬೇಯಲಿಲ್ಲ. ಆದ್ದರಿಂದ ಅವನು ಶಂಭು ದಾಮೋದರರನ್ನಾಶ್ರಯಿಸಿ ದಾಸರ ವಿರುದ್ಧ ಮಸಲತ್ತು ಮಾಡತೊಡಗಿದನು.

* * * *

ಕೆಮ್ಮೊರನು ನಿಂಬೂರು ಜಿಲ್ಲೆಯವನು. ಅವನು ಪುಂಡ ಮತ್ತು ವಿಷಯ ಲಂಪಟ. ಎಳೆಯ ವಯಸ್ಸಿನಲ್ಲಿಯೇ ಅವನು ಕೆಲವು ಹೆಣ್ಣು ಮಕ್ಕಳ ಬಾಳನ್ನು ಕೆಡಿಸಿದ್ದನು.

ಹಲವು ಹೊಡೆದಾಟಗಳ ಪ್ರಕರಣಗಳಲ್ಲಿಯೂ, ಕೆಲವು ಕೊಲೆ ಪ್ರಕರಣಗಳಲ್ಲಿಯೂ ಅಪರಾಧಿಯಾಗಿದ್ದನು. ಪೋಲಿಸಿನವರ ದಾಖಲೆಗಳಲ್ಲಿ ಅವನು ಪುಂಡನೆಂದು ಪರಿಗಣಿಸಲ್ಪಟ್ಟಿದ್ದನು. ಕೆಲಕಾಲದ ನಂತರ ಕೆಮ್ಮೊರನು ತನ್ನ ಪುಂಡ ಪ್ರವೃತ್ತಿಗೆ ಸಭ್ಯತೆಯ ಪೋಷಾಕನ್ನು ತೊಡಿಸುವ ಉದ್ದೇಶದಿಂದಲೂ, ಪೋಲಿಸರ ದೃಷ್ಟಿಯಲ್ಲಿ ತಾನೊಬ್ಬ ಗಣ್ಯವ್ಯಕ್ತಿಯಾಗಿರಬೇಕೆಂಬ ಉದ್ದೇಶದಿಂದಲೂ ಕಮ್ಯೂನಿಷ್ಟ್ ಪಕ್ಷಕ್ಕೆ ಸೇರಿದನು.

ಕೆಮ್ಮೊರನು ಕಾರ್ಲ್‌ಮಾರ್ಕ್ಸ್‌ನ ಸಿದ್ಧಾಂತಗಳನ್ನು ಓದಿಯೂ ಇರಲಿಲ್ಲ; ಕೇಳಿಯೂ ಇರಲಿಲ್ಲ. ಅವನಿಗೆ ಕಮ್ಯೂನಿಷ್ಟ್ ಸಿದ್ಧಾಂತವೂ ಬೇಕಾಗಿರಲಿಲ್ಲ; ಬಡಬಗ್ಗರ ಏಳಿಗೆಯೂ ಬೇಕಾಗಿರಲಿಲ್ಲ. ಅವನಿಗೆ ಬೇಕಾಗಿದ್ದುದು ಶತ್ರು ರಾಷ್ಟ್ರದ ಗೂಢಚಾರರು ಕೊಡುತ್ತಿದ್ದ ಗುಪ್ತನಿಧಿ. ಕಳ್ಳತನ ಮತ್ತು ಕಳ್ಳಭಟ್ಟಿ ವ್ಯವಹಾರಗಳಲ್ಲಿ ತೊಡಗಿರುವ ಕೇಡಿಗಳನ್ನೂ, ಕೆಲಸವಿಲ್ಲದ ಕಾಕ ಪೋಕರನ್ನು ತನ್ನ ಜೊತೆಗೆ ಸೇರಿಸಿಕೊಂಡು ರಾಜಕೀಯ ದುರಂಧರನಂತೆ ಅಭಿನಯಿಸುತ್ತಿದ್ದನು. ಶತ್ರು ರಾಷ್ಟ್ರದವರು ನಮ್ಮ ದೇಶವನ್ನು ಆಕ್ರಮಿಸಿದರೆ ಬಡವರ ಬಡತನ ನಿವಾರಣೆಯಾಗುವುದೆಂದು ಅರಿಯದ ಬಡಬಗ್ಗರಿಗೆ ಉಪದೇಶ ಮಾಡುತ್ತಿದ್ದನು.

ಕಾಲಕ್ರಮೇಣ ಅವನಂತೆಯೇ ಪುಂಡುಪ್ರವೃತ್ತಿಯುಳ್ಳ ಅವನ ತಾಲ್ಲೂಕಿನ ಕೆಲವರು ಶ್ರೀಮಂತರೂ ಸಹ ಅವನು ಜೊತೆಗೆ ಸೇರಿದರು. ಆ ಶ್ರೀಮಂತರಿಗೆ ಕಮ್ಯೂನಿಷ್ಟ್ ಸಿದ್ಧಾಂತಗಳಲ್ಲಿ ನಂಬಿಕೆಯೂ ಇರಲಿಲ್ಲ; ಬಡ ಬಗ್ಗರ ವಿಚಾರದಲ್ಲಿ ಕನಿಕರವೂ ಇರಲಿಲ್ಲ. ತಾವು ಬಡಬಗ್ಗರ ಹಿತೈಷಿಗಳೆಂಬ ಭಾವನೆ ಜನರಲ್ಲಿ ಮೂಡುವಂತೆ ಮಾಡಿ, ರಾಜಕೀಯ ಮುಖಂಡರಾಗುವ ಉದ್ದೇಶದಿಂದ ಅವರು ಕಮ್ಯೂನಿಷ್ಟ್ ಪಕ್ಷವನ್ನು ಸೇರಿದ್ದರು.

ತಮಗಾಗದವರನ್ನು ಹೊಡೆಯಿಸುವುದೂ, ಅವರ ಪೈರುಪಚ್ಚೆಗಳನ್ನು ನಾಶಪಡಿಸುವುದೂ, ಅವರ ಬಣವೆಗಳನ್ನು ಸುಡಿಸುವುದೂ ಕೆಮ್ಮೊರನ ಮತ್ತು ಅವನ ಅನುಯಾಯಿಗಳ ಅನುದಿನಗಳ ರಾಜಕಾರಣವಾಗಿತ್ತು. ಕೆಮ್ಮೊರನ ಉಪಟಳವನ್ನು ಸಹಿಸಲಾರದೆ ಪೋಲಿಸಿನವರು ಅವನ ಮೇಲೆ ಕೆಲವು ಮೊಕದ್ದಮೆಗಳನ್ನು ಹೂಡಿದರು. ರಾಜಕೀಯ ಕಾರಣಗಳಿಂದ ಪೋಲಿಸಿನವರು ತನ್ನ ಮೇಲೆ ಸುಳ್ಳು ಮೊಕದ್ದಮೆಗಳನ್ನು ಹೂಡಿದ್ದಾರೆಂದು. ಅಪಪ್ರಚಾರ ಮಾಡುತ್ತಿದ್ದನು. ಕೆಮ್ಮೊರನು ಆರ್ಭಟ ಹೆಚ್ಚಾದಂತೆಲ್ಲಾ ಅವನಿಗೆ ಪೋಲಿಸರ ಕಾಟವೂ ಹೆಚ್ಚಾಯಿತು. ಆ ಕಾಟವನ್ನು ತಪ್ಪಿಸಿಕೊಳ್ಳುವ ಉದ್ದೇಶದಿಂದ ಅವನು ದಿಲೀಪ್ ಚಂದ್ರನ ಆಶ್ರಯವನ್ನು ಪಡೆದು ಮೆತ್ತಗೆ ಕಾಂಗ್ರೆಸ್ ಪಕ್ಷಕ್ಕೆ ಸೇರಿದನು.

ಒಂದೆರಡು ವರ್ಷಗಳ ತರುವಾಯ ಕೆಮ್ಮೊರನು ದಿಲೀಪನ ಸಹಾಯದಿಂದ ಕಾಂಗ್ರೆಸ್ ಟಿಕೆಟ್ ಪಡೆದು ನಿಂಬೂರು ಜಿಲ್ಲೆಯ ಧವಳಗಿರಿ ಕ್ಷೇತ್ರದಿಂದ ಶಾಸನಸಭೆಗೆ ಚುನಾವಣೆಗೆ ನಿಂತನು. ಅವನ ಕ್ಷೇತ್ರದ ಮತದಾರರಿಗೆ ಅವನೊಬ್ಬ ಪುಂಡನೆಂದೂ, ಅಸಹ್ಯಕರ ವ್ಯಕ್ತಿ ಎಂದೂ ಗೊತ್ತಾಗಿದ್ದಿತು. ಆದರೆ ಬಹುಮಂದಿ ಮತದಾರರು ಅಜ್ಞಾನಿಗಳಾಗಿ ಅವನ ಜಾತಿಯವರೇ ಆಗಿದ್ದುದರಿಂದ ಕೆಮ್ಮೊರನಿಗೆ ಮತದಾರರ ಕಣ್ಣಿಗೆ ಮಣ್ಣೆರಚುವುದು ಕಷ್ಟವಾಗಲಿಲ್ಲ.

ಕೆಮ್ಮೊರನು ದುಃಖವಿಲ್ಲದೆ ಕಣ್ಣೀರನ್ನು ಸುರಿಸುವ ಕಲೆಯಲ್ಲಿ ಪ್ರವೀಣನಾಗಿದ್ದನು. ಹಳ್ಳಿಯ ಮುಗ್ಧ ಮಹಿಳೆಯರ ಮುಂದೆ ಮನ ಕರಗುವಂತೆ ಮಾತನಾಡಿ, ವೃದ್ಧರ ಕಾಲಿಗೆ ಬಿದ್ದು, ಒಮ್ಮೊಮ್ಮೆ ಕೃತಕ ಕಣ್ಣೀರನ್ನೂ ಸುರಿಸಿ, ಓಟುಗಳನ್ನು ಕೀಳುತ್ತಿದ್ದನು. ತನ್ನ ಜಾತಿಯ ಉದ್ಧಾರಕ್ಕಾಗಿ ತಾನು ಚುನಾವಣೆಯಲ್ಲಿ ಸ್ಪರ್ಧಿಸಬೇಕಾಯಿತೆಂದೂ, ತನಗೆ ಮತ ನೀಡದಿದ್ದರೆ ಜಾತಿಗೆ ದ್ರೋಹ ಮಾಡಿದಂತಾಗುವುದೆಂದೂ, ತನ್ನ ಜಾತಿಯ ಮತದಾರರಿಗೆ ಅಂತರಂಗವಾಗಿ ಹೇಳುತ್ತಿದ್ದನು. ಮತದಾರರು ಸುಲಭವಾಗಿ ಅವನ ಅಭಿನಯ ಕೌಶಲ್ಯಗಳಿಗೆ ಮಾರುಹೋಗುತ್ತಿದ್ದರು.

ಕೆಮ್ಮೊರನು ಶಾಸನಸಭೆಯ ಸದಸ್ಯನಾದ ಮೇಲೆ ಅವನ ರಾಜಕೀಯ ವಿರೋಧಿಗಳು ಬಾಳುವುದೇ ಕಷ್ಟವಾಯಿತು. ಅವರ ಮೇಲೆ ಸುಳ್ಳು ಮೊಕದ್ದಮೆಗಳನ್ನು ಹೊರಡಿಸುತ್ತಿದ್ದನು. ಅವರಿಗೆ ಸರ್ಕಾರದ ಸಹಾಯ ಸಿಗದಂತೆ ಮಾಡುತ್ತಿದ್ದನು. ಅವರ ಮೇಲೆ ಪುಂಡುಪೋಕರಿಗಳನ್ನು ಎತ್ತಿಕಟ್ಟುತ್ತಿದ್ದನು. ಅವನ ರಾಜಕೀಯ ವಿರೋಧಿಗಳಿಬ್ಬರ ಕೊಲೆಯ ಹಿನ್ನೆಲೆಯಲ್ಲಿ ಅವನ ಆಂತರಿಕ ಕೈವಾಡವಿತ್ತೆಂದು ಜನರು ಹೇಳುತ್ತಿದ್ದರು. ತನಗಾಗದ ಅಧಿಕಾರಿಗಳ ಮೇಲೆ ಸುಳ್ಳು ಆರೋಪಗಳನ್ನು ಹೊರಿಸಿ, ದಿಲೀಪನ ಸಹಾಯದಿಂದ ಅವರನ್ನು ವರ್ಗಾಯಿಸಿ, ಅವರ ಬದಲಿಗೆ ತನಗೆ ಬೇಕಾದ ಅಧಿಕಾರಿಗಳನ್ನು ಕರೆಯಿಸಿಕೊಳ್ಳುತ್ತಿದ್ದನು.

ಶಾಸಕ ಮಹಾಶಯ ಕೆಮ್ಮೊರನು ಲಂಚವಿಲ್ಲದೆ ಯಾವ ಕೆಲಸಕ್ಕೂ ಕೈ ಹಾಕುತ್ತಿರಲಿಲ್ಲ. ವರ್ಗಾವರ್ಗಿ ಮಾಡಿಸುವ ನೆಪದಲ್ಲಿ ಮತ್ತು ಬಡ್ತಿಕೊಡಿಸುವ ನೆಪದಲ್ಲಿ ಅಧಿಕಾರಿಗಳಿಂದ ಲಂಚವನ್ನು ಹೊಡೆಯುತ್ತಿದ್ದನು. ಕಂಟ್ರಾಕ್ಟ್, ಪರ್ಮಿಟ್, ಲೈಸನ್ಸ್ ದೊರಕಿಸಿಕೊಡುವ ನೆಪದಲ್ಲಿ ವರ್ತಕರಿಂದ ಕಮಿಷನ್ ಪಡೆಯುತ್ತಿದ್ದನು. ಕೆರೆ, ಕಾಲುವೆ, ಬಾವಿ ಮುಂತಾದ ಕೆಲಸ ಕಾರ್ಯಗಳನ್ನು ಮಾಡಿಸಿಕೊಡುವ ನೆಪದಲ್ಲಿ ಸಾರ್ವಜನಿಕರಿಂದ ವರಾಡವನ್ನು ವಸೂಲ್ಮಾಡುತ್ತಿದ್ದನು. ಸಾರ್ವಜನಿಕ ಕೆಲಸಕ್ಕಾಗಿ ತಮ್ಮಿಂದ ವಂತಿಗೆ ಪಡೆಯುವುದು ನ್ಯಾಯವಲ್ಲವೆಂದು ಅವನೆದುರು ಯಾರಾದರೂ ವಾದಿಸಿದರೆ "ತಮ್ಮಾ, ಎಲೆಕ್ಷನ್ನಾಗೆ ನನ್ನೋವು ಏಸುರೊಕ್ಕ ಖರ್ಚಾಗ್ಯವೆ ನಿಂಗೊತ್ತೇನು? ರೊಕ್ಕ ಪುಗಸಾಟೆ ಬತ್ತದೇನು? ನಂಗೂ ಖರ್ಚದೆ. ಆ ನನ್ನ ಮಕ್ಕಳು ಆಫೀಸರಿಗೂ ತಿನ್ಸಬೇಕಲ್ಲ. ನಿನ್ಕೆಲ್ಸಾ ಆಗ್ಬೇಕೂ ಅಂದ್ರೆ ರೊಕ್ಕ ಕೊಡ್ಬೇಕು" ಎನ್ನುತ್ತಿದ್ದನು.

ಕೆಮ್ಮೊರನು ತನಗಾಪ್ತರಾದವರ ಹೆಸರಿನಲ್ಲಿ ಕಂಟ್ರಾಕ್ಟ್ ಪಡೆದು, ತನಗಾಪ್ತರಾದ ಇಂಜಿನಿಯರುಗಳಿಂದ ಸುಳ್ಳು ಬಿಲ್ಲುಗಳನ್ನು ತಯಾರು ಮಾಡಿಸಿ, ಸಾರ್ವಜನಿಕ ಬೊಕ್ಕಸವನ್ನು ಕೊಳ್ಳೆ ಹೊಡೆಯುತ್ತಿದ್ದನು. ಕೆಮ್ಮೊರನ ದೃಷ್ಟಿಯಲ್ಲಿ ಸತ್ಯವಂತರಾದವರೆಲ್ಲರೂ ಕೆಟ್ಟವರಾಗಿದ್ದರು; ಅವನ ಪುಂಡಾಟಕ್ಕೆ ಅಡ್ಡಿಯಾದವರೆಲ್ಲರೂ ಅನೀತಿವಂತರಾಗಿದ್ದರು

* * * *

ಜಲೋದರನು ವಿಮಲಗಿರಿ ಜಿಲ್ಲೆಯವನು. ಅವನೊಬ್ಬ ಅನಾಗರಿಕ ಪಶು; ಕುಡುಕ ಮತ್ತು ಕೆಡುಕಿ. ಅವನು ಮೊದಲು ಸಮಾಜವಾದಿ ಪಕ್ಷಕ್ಕೆ ಸೇರಿದವನಾಗಿದ್ದನು. ನಂತರ ದಿಲೀಪನ ಕಾಲದಲ್ಲಿ ಕಾಂಗ್ರೆಸ್ಸಿಗೆ ನುಗ್ಗಿದನು. ಹೆಮ್ಮೊರನು ದೊಡ್ಡ ಷಿಕಾರಿ

ಮಾಡುವ ಹೆಬ್ಬುಲಿಯಂತಿದ್ದರೆ, ಜಲೋದರನು ಸಣ್ಣ ಪುಟ್ಟ ಪ್ರಾಣಿಗಳನ್ನು ಹಿಡಿಯುವ ಕುರ್ಕನಂತಿದ್ದನು. ಹೆಮ್ಮೊರನು ದೊಡ್ಡ ಹಡಗುಗಳನ್ನು ಲೂಟಿಮಾಡುವ ಕಡಲುಗಳ್ಳನಂತಿದ್ದರೆ, ಜಲೋದರನು ಸಣ್ಣಪುಟ್ಟದ್ದಕ್ಕೆ ಕೈಹಾಕಿ ಅಲ್ಪಸ್ವಲ್ಪ ದೋಚುವ ಕೋಳಿ ಕಳ್ಳನಂತಿದ್ದನು.

ಜಲೋದರನು ಗುಂಪುಕಟ್ಟುವುದರಲ್ಲಿ ಬಹು ಗಟ್ಟಿಗ. ಹಳ್ಳಿಗಳಲ್ಲಿ ಪಕ್ಷ ಪ್ರತಿಪಕ್ಷಗಳಿಲ್ಲದಿದ್ದರೆ ತನ್ನ ಆಟ ನಡೆಯುವುದಿಲ್ಲವೆಂಬುದನ್ನು ಅವನು ಚೆನ್ನಾಗಿ ಅರಿತಿದ್ದನು. ಗುಂಪುಗಳಿದ್ದರೆ ಯಾವುದಾದರೊಂದು ಗುಂಪು ತನ್ನನ್ನನುಸರಿಸುತ್ತದೆ ಎಂದು ಅವನು ತಿಳಿದಿದ್ದನು. ಆದ್ದರಿಂದ ಅವನು ತಾಲ್ಲೂಕಿನ ಎಲ್ಲಾ ಹಳ್ಳಿಗಳಲ್ಲೂ ಪಕ್ಷ ಪಂಗಡಗಳನ್ನು ಸೃಷ್ಟಿಸಿ, ವ್ಯಾಜ್ಯಗಳನ್ನು ಹಚ್ಚಿಟ್ಟು, ಹಳ್ಳಿಗರು ನಿರಂತರವೂ ಕೋರ್ಟು ಕಛೇರಿಗಳಿಗೆ ಅಲೆಯುವಂತೆ ಮಾಡುತ್ತಿದ್ದನು.

ತನಗಾಗದವರ ಮೇಲೆ ಸುಳ್ಳು ಮೊಕದ್ದಮೆಗಳನ್ನು ಹೂಡಿಸುವುದೂ, ತನಗಾಗದವರು ಜಮೀನುಗಳನ್ನು ಆಕ್ವೈರ್ ಮಾಡಿಸುವುದೂ, ತನಗಾಪ್ತರಾದ ಅಧಿಕಾರಿಗಳಿಂದ ತನಗಾಗದವರಿಗೆ ಕಿರುಕುಳ ಕೊಟ್ಟು ಕಾಡುವುದೂ ಜಲೋದರನ ರಾಜಕೀಯದ ದಿನಚರಿಯಾಗಿತ್ತು. ಕೆಲವರು ರಾಜಕಾರಣಿಗಳು ತಮ್ಮ ಸೇವೆ ಸದ್ಗುಣಗಳಿಂದ ಜನರ ಮನಸ್ಸನ್ನು ಒಲಿಸಿಕೊಂಡರೆ, ಜಲೋದರನು ಜನರನ್ನು ಹಿಂಸಿಸಿ, ಹೆದರಿಸಿ ತನಗೆ ಶರಣಾಗತರಾಗುವಂತೆ ಮಾಡುತ್ತಿದ್ದನು. ಜನರಿಗೆ ಕಿರುಕುಳವಿತ್ತರೆ ಅವರು ತನ್ನ ಅನುವರ್ತಿಗಳಾಗುವರೆಂಬುದು ಜಲೋದರನ ಸಿದ್ಧಾಂತ.

ಜಲೋದರನು ಮಂತ್ರಿಗಳನ್ನೂ, ಅಧಿಕಾರಿಗಳನ್ನೂ ಹೊಗಳಿ ಒಲಿಸಿಕೊಳ್ಳುವುದರಲ್ಲಿ ಬಹು ನಿಸ್ಸೀಮ. ಅವನು ಆಗಾಗ ಗಿರಾಕಿಗಳ ಖರ್ಚಿನಲ್ಲಿ ರಾಜಧಾನಿಗೆ ಹೋಗಿ ಕುಡಿದು, ತಿಂದು, ಜೂಜಾಡಿ, ಸಿನಿಮಾ ನೋಡಿ ಬರುತ್ತಿದ್ದನು. ಒಮ್ಮೆ ಜಲೋದರನು ಕುಡಿದು ಮತ್ತನಾಗಿ ರಾಜಧಾನಿಯ ರಾಜಬೀದಿಯೊಂದರಲ್ಲಿ ಓಲಾಡಿಕೊಂಡು ಹೋಗುತ್ತಿದ್ದಾಗ, ಪೋಲಿಸಿನವನ ಕೈಯಲ್ಲಿ ಸಿಕ್ಕಿ ಬಿದ್ದನು. ಆ ಪೋಲಿಸಿನವನು ಅವನ ರಟ್ಟೆಯನ್ನು ಹಿಡಿದುಕೊಂಡು,

"ಏನ್ರೀ, ಕಾಂಗ್ರೆಸ್ ಬಟ್ಟೆತೊಟ್ಟು, ನಾಚಿಕೆಯಿಲ್ದೆ ಕಂಠಮುಟ್ಟ ಕುಡ್ದು, ಹೆದ್ದಾರೀಲಿ ಎಳ್ತಾಬೀಳ್ತಾ ಹೋಗ್ತೀರಲ್ರೀ? ನಿಮ್ಗೆ ನಡೆಯೋಕೆ ರಸ್ತೇ ಸಾಲ್ದು ಪಾಪ! ಸುಸ್ತಾಗಿದೆ ಅಂತ ಕಾಣ್ತದೆ. ಹೂಂ, ಬನ್ನಿ ಪೋಲಿಸ್ ಸ್ಟೇಷನ್ನಿಗೆ ರೆಸ್ಟು ತಗೊಂಡ್ಹೋಗಿ", ಎಂದು ಅವನನ್ನು ದರದರನೆ ಎಳೆದನು.

"ಏಯ್, ನಾಯಾರು ಗೊತ್ತೇನೋ? ಎಮ್ಮೆಲೆ. ಹುಷಾರ್! ನಾಲ್ಗೆ ಹಿಡ್ದು ಮಾತಾಡು", ಎಂದು ಜಲೋದರ ಕೈ ಕೊಡಹಿದನು.

"ನೀವ್ಯಾರಾದ್ರೆ ನಂಗೇನು? ಕಾನೂನಿಗೇನೂ ಹೆಚ್ಚಲ್ಲ. ಬನ್ನಿ ಈಗ ಸ್ಟೇಷನ್ನಿಗೆ," ಎಂದು ಪೋಲಿಸಿನವನು ಅವನನ್ನು ಸ್ಟೇಷನ್ನಿಗೆ ಕರೆದೊಯ್ದನು.

ಪೋಲಿಸ್ ಸ್ಟೇಷನ್ನಿನಲ್ಲಿದ್ದ ಪೋಲಿಸ್ ಇನ್‌ಸ್ಪೆಕ್ಟರು ಜಲೋದರನ ಇಷ್ಟಿಟಿನ ಮತ್ತು ಬ್ರಾಂದಿಯ ಸ್ನೇಹಿತ. ಅವನು ಜಲೋದರನನ್ನು ನೋಡಿದೊಡನೆ ಪೋಲೀಸಿನವನನ್ನು ಕುರಿತು,

"ಯಾಕೋ ಈಡಿಯಟ್? ಇಂಥಾ ರೆಸ್ಪೆಕ್ಟೆಬಲ್ ಜನಾನ ಈ ರೀತಿ ಎಳ್ಕೊಂಡ್ ಬರ್‍ತೀಯ. ಇವರ‍್ಯಾರು ಗೊತ್ತೇನೋ?.... ಎಮ್ಮೆಲ್ಯೇ ಸಾಹೇಬರು. ನಮ್ಮ ಚೀಪ್ ಫ್ರೆಂಡ್ ಕಣಯ್ಯ. ಅವರ ಕೈ ಬಿಡು. ಹೋಗಿ, ಹೋಟ್ಲಿಂದ ಎರಡು ಸ್ಪೇಷಲ್ ಕಾಫೀ ತಂಗೊಡ್ಬಾ," ಎಂದನು

ಅನಂತರ ಇನ್‌ಸ್ಪೆಕ್ಟರು ಜಲೋದರನನ್ನು ಬಹು ಗೌರವದಿಂದ ಬರ ಮಾಡಿಕೊಂಡು ತಾನು ಕುಳಿತಿದ್ದ ಕುರ್ಚಿಯನ್ನೇ ಬಿಟ್ಟು ಕೊಟ್ಟು, "ಕ್ಷಮಿಸ್ಬೇಕು ಸಾರ್...... ಆ ಈಡಿಯೆಟ್ ನಿಮ್ಮ ವಿಚಾರ ಗೊತ್ತಾಗ್ದೆ ಈ ಸಣ್ಣಕೆಲ್ಸ ಮಾಡ್ಯಾನೆ," ಎಂದು ಮುಂತಾಗಿ ಹೇಳಿ ಅವನಿಗೆ ಕಾಫಿಯನ್ನು ಕೊಟ್ಟು ಉಪಚರಿಸಿ, ಗೌರವದಿಂದ ಕಳುಹಿಸಿಕೊಟ್ಟನು. ಜಲೋದರನು ವಾಪಸ್ಸು ಹೋಗುವಾಗ ಆ ಪೋಲಿಸಿನವನನ್ನು "ಧನ್ಗರ್...ಲೋಫರ್..." ಎಂಬುದಾಗಿ ಬೈದು ಹೊರಟು ಹೋದನು.

ಆರು ತಿಂಗಳ ತರುವಾಯ ಆ ಪೋಲಿಸಿನವನಿಗೆ ರಾಜಧಾನಿಯ ಇನ್ನೊಂದು ಸ್ಟೇಷನ್ನಿಗೆ ವರ್ಗವಾಯಿತು. ಅನಂತರ ಒಂದಾನೊಂದು ರಾತ್ರಿ ಅವನು ಒಂದು ಗಲ್ಲಿಯಲ್ಲಿ ತಿರುಗುತ್ತಿದ್ದಾಗ ಜಲೋದರನು ಅದೇ ಗಲ್ಲಿಯಲ್ಲಿದ್ದ ವೇಶ್ಯಾಮಂದಿರ ಒಂದರಿಂದ ಹೊರಬೀಳುತ್ತಿದ್ದುದನ್ನು ಕಂಡನು. ಹಿಂದೆ ಜಲೋದರನು ತನಗೆ ಅಪಮಾನ ಮಾಡಿದ್ದುದನ್ನು ಅವನು ಮರೆತಿರಲಿಲ್ಲ. ಕ್ಷಣಮಾತ್ರದಲ್ಲಿ ಅವನು ಜಲೋದರನ ಮೇಲೆರಗಿ ಅವನನ್ನು ಹಿಡಿದು, "ಬೋಳೀಮಗನೇ....... ಆ ದಿನ ಬಾಯಿಗೆ ಬಂದ್ಹಾಗೆ ಬೈತಿದ್ಯೆಲ್ಲಾ. ಈಗ ಹ್ಯಾಂಗೆ ತಪ್ಪಿಸ್ಕೋತೀಯ? ನಿನ್ನೂ ನಿನ್ನ ರಂಭೇನೂ ಸೇರ್‍ಸಿ ನಾಳೆ ಕೋರ್ಟಿಗೆ ಛಾರ್ಜ್‌ಷೀಟ್ ಹಾಕ್ತೀನಿ. ಈ ಸ್ಟೇಷನ್ ಇನ್‌ಸ್ಪಕ್ಟ್ರು ನಿನ್ ಫ್ರೆಂಡಲ್ಲ. ಬಾ ನಿನ್ಗೆ ಮಾಡ್ತೀನಿ. ಶಾಸ್ತಿ," ಎಂದು ಜಲೋದರನನ್ನು ಎಳೆಯತೊಡಗಿದನು.

"ತಪ್ಪಾಯ್ತಪ್ಪಾ ಕ್ಷಮ್ಸು. ನಿನ್ಕಾಲೀಗೆ ಬೀಳ್ತಿನಿ. ನನ್‌ಮಾನಾ ಉಳ್ಸು ಪುಣ್ಯಾತ್ಮಾ.... ನಿನ್ದಮ್ಮಯ್ಯಾ," ಎಂದು ಜಲೋದರನು ಪೋಲಿಸಿನವನ ಕಾಲು ಹಿಡಿಯಲು ಹೋದನು.

"ನಿನಗೆ ಮಾನ ಮರ‍್ಯಾದೆ ಇದ್ರೆ ತಾನೆ ಉಳ್ಸೋದು. ಬಿಡು ನನ್ಕಾಲು," ಎಂದು ಪೋಲಿಸಿನವನು ಘರ್ಜಿಸಿದನು.

"ಲೋ... ಇದೊಂದ್ಸಾರಿ ಮಾಫ್ ಮಾಡಪ್ಪಾ. ತಗೋ ನೂರ‍್ರೂಪಾಯಿ ನನ್ಬಿಡಪ್ಪಾ," ಎಂದು ಜಲೋದರನು ಅತಿ ದೈನ್ಯದಿಂದ ನುಡಿದು ನೂರು ರೂಪಾಯಿಗಳ ನೋಟನ್ನು ಅವನೆದುರು ಹಿಡಿದನು.

"ಹೂಂ...... ಯಾರತಲೇಬೋಳ್ಸಿ ಈ ನೂರ‍್ರುಪಾಯಿ ತಂದಿದ್ದಿಯೋ...ತಾ. ನಿನ್ನಂತವನೇ ಲಂಚಕ್ಕಿಳಿದಾಗ ನಾನ್ಯಾಕೆ ತಗುಬಾರದು. ಪಾಪ! ನಿಂದೇನು ತಪ್ಪು ಬಿಡು. ನಿನ್ನಂತವನ್ನ ಕಾಂಗ್ರೆಸ್ಸಿಗೆ ಸೇರ್‍ಸಿ ಎಮ್ಮೆಲ್ಲೇ ಅಂತ ಮಾಡದ್ರಲ್ಲ ಆ ಮೂರ್ಖರದ್ದು ತಪ್ಪು;

ನಿನಗೆ ಓಟುಕೊಟ್ರಲ್ಲಾ ಆ ಮುಟ್ಠಾಳ್ರದ್ದು ತಪ್ಪು. ಹೋಗು ಹಾಳಾಗಿ," ಎನ್ನುತ್ತಾ ಪೋಲಿಸಿನವನು ನೂರುರೂಪಾಯಿನ ನೋಟನ್ನು ತನ್ನ ಕಿಸೆಗೆ ಸೇರಿಸಿ ಜಲೋದರನ ಕೈ ಬಿಟ್ಟನು. ಗಾಂಢೀವನು ಹೇಮಗಿರಿ ಜಿಲ್ಲೆಯವನು. ಅವನ ತಂದೆ ಹೆಂಡದ ಇಲಾಖೆಯಲ್ಲಿ ಒಬ್ಬ ಜವಾನನಾಗಿದ್ದನು. ಗಾಂಢೀವನು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಅವನ ತಂದೆ ತೀರಿಕೊಂಡನು. ಆಗ ಗಾಂಢೀವನಿಗೆ ಹನ್ನೆರಡು ವರ್ಷಗಳ ವಯಸ್ಸು. ವಿಧವೆಯಾದ ಅವನ ತಾಯಿಯು ಹೊಟ್ಟೆ ಪಾಡಿಗಾಗಿ ಅವನ ವ್ಯಾಸಂಗವನ್ನು ನಿಲ್ಲಿಸಿ, ಅವನನ್ನು ಹೇಮಗಿರಿ ಅಸಿಸ್ಟೆಂಟ್ ಇಂಜಿನಿಯರ ಮನೆಯಲ್ಲಿ ಅಡುಗೆಯ ಕೆಲಸಕ್ಕೆ ಸೇರಿಸಿದಳು. ಎರಡು ವರ್ಷಗಳ ನಂತರ ಆ ಇಂಜಿನಿಯರಿಗೆ ವರ್ಗವಾಗಿ ಅವನ ಬದಲಿಗೆ ಆನಂದನೆಂಬ ಅಸಿಸ್ಟೆಂಟ್ ಇಂಜಿನಿಯರ್ ಹೇಮಗಿರಿಗೆ ಬಂದನು. ಹಳೆಯ ಇಂಜಿನೀಯರ ಶಿಫಾರಸನ್ನು ಮನ್ನಿಸಿ, ಆನಂದನು ಗಾಂಢೀವನನ್ನು ತನ್ನ ಮನೆಯಲ್ಲಿ ಅಡುಗೆಯ ಕೆಲಸಕ್ಕೆ ನೇಮಿಸಿಕೊಂಡನು.

ಕಾಲಕ್ರಮೇಣ, ಗಾಂಡೀವನ ಚುರುಕು ಸ್ವಭಾವ ಮತ್ತು ಕಾರ್ಯ ನಿರ್ವಾಹಕ ಶಕ್ತಿಗಳನ್ನು ಮೆಚ್ಚಿದ ಆನಂದನು, ಉತ್ತರೋತ್ತರ ತನಗೆ ಅವನಿಂದ ಅನುಕೂಲವಾಗ ಬಹುದೆಂಬ ಮುಂದಾಲೋಚನೆಯಿಂದ ಅವನನ್ನು ತನ್ನ  ಮನೆಯವರೊಬ್ಬರಂತೆ ಕಾಣುತ್ತಿದ್ದರು. ಎರಡು ವರ್ಷಗಳ ತರುವಾಯ ಆನಂದನು ಎಗ್ಸಿಕ್ಯೂಟಿವ್ ಇಂಜಿನಿಯ ರಾಗಿ ಬಡ್ತಿ ಹೊಂದಿ, ಹೊಸದಾಗಿ ನಿರ್ಮಾಣವಾಗುತ್ತಿದ್ದ ಬೆಹನೂರ್ ಪ್ರಾಜೆಕ್ಟಿಗೆ ವರ್ಗಾಯಿಸಲ್ಪಟ್ಟನು. ಬೆಹನೂರ್ ಪ್ರಾಜೆಕ್ಟು ಆರು ಕೋಟಿ ರೂಪಾಯಿಗಳ ವೆಚ್ಚದಲ್ಲಿ ನಿರ್ಮಾಣಗೊಳ್ಳುತ್ತಿದ್ದ ಒಂದು ಕಾಮಗಾರಿ. ಬೆಹನೂರಿಗೆ ಹೋಗುವಾಗ ಆನಂದನು ತನ್ನ ನೆಚ್ಚಿನ ಬಾಣಸಿಗ ಗಾಂಢೀವನನ್ನು ಜೊತೆಯಲ್ಲಿಯೇ ಕರೆದೊಯ್ದನು."

ಬೆಹನೂರ್ ಪ್ರಾಜೆಕ್ಟಿನಲ್ಲಿ ಆನಂದನು ಆನಂದವಾಗಿ ಮೇಯಲು ಅಪಾರ ಅವಕಾಶವಿತ್ತು. ಆ ಕಾಮಗಾರಿಯಲ್ಲು ಅವನು ಕಂಟ್ರಾಕ್ಟ್‌ಗಳನ್ನು ಕೊಡುವ ಅಧಿಕಾರ ಪಡೆದಿದ್ದನು. ಬೆಹನೂರಿಗೆ ಹೋಗಿ ಕೆಲವು ತಿಂಗಳುಗಳಾದ ನಂತರ ಆನಂದನು ಕೆಲವು ಲಾಭದಾಯಕ ಕಂಟ್ರಾಕ್ಟ್‌ಗಳನ್ನು ತನ್ನ ಅಡಿಗೆಯವನ ಹೆಸರಿಗೆ ಮಂಜೂರು ಮಾಡಿಸಿ, ಕೆಲಸವನ್ನೂ ತಾನೇ ಮಾಡಿಸಲಾರಂಭಿಸಿದನು. ಬಂದ ಲಾಭದಲ್ಲಿ ಕಾಲು ಭಾಗವನ್ನು ಗಾಂಢೀವನಿಗೆ ಕೊಟ್ಟು ಉಳಿದ ಹಣ ತನ್ನ ಬೊಕ್ಕಸಕ್ಕೆ ಸೇರಿಸುತ್ತಿದ್ದನು.

ಈ ರೀತಿ ಏರ್ಪಾಡು ಆನಂದನಿಗೂ ಲಾಭದಾಯಕವಾಗಿತ್ತು. ಗಾಂಢೀವನಿಗೂ ಆನಂದಕರವಾಗಿತ್ತು. ಕೇವಲ ಮೂರು ವರ್ಷಗಳೊಳಗಾಗಿ ಆನಂದನು ಎರಡು ಲಕ್ಷ ರೂಪಾಯಿಗಳ ಅಧಿಪತಿಯಾದನು; ಗಾಂಢೀವನು ಸುಮಾರು ಅರ್ಧ ಲಕ್ಷಕ್ಕೆ ಒಡೆಯನಾದನು.

ಮೂರು ವರ್ಷಗಳ ನಂತರ ಆನಂದನು ಬೇರೊಂದು ಪ್ರಾಜೆಕ್ಟಿಗೆ ಸೂಪರಿಂಟೆಂಡಿಂಗ್ ಇಂಜಿನಿಯರಾಗಿ ನೇಮಕವಾದನು. ಅಲ್ಲಿ ಗಾಂಢೀವನೂ ಅವನೂ ಗುಪ್ತ ಪಾಲುಗಾರಿಕೆಯಲ್ಲಿ ಕಂಟ್ರಾಕ್ಟ್ ಪಡೆದು ಬಂದ ಲಾಭವನ್ನು ಸಮವಾಗಿ

ಹಂಚಿಕೊಳ್ಳುತ್ತಿದ್ದರು. ಕೆಲವೇ ವರ್ಷಗಳಲ್ಲಿ ಗಾಂಢೀವನೊಬ್ಬ ಆಗರ್ಭ ಶ್ರೀಮಂತನಾದನು.

ಹಣವಂತನಾದ ಮೇಲೆ ಗಾಂಢೀವನ ದೃಷ್ಟಿ ರಾಜಕಾರಣದತ್ತ ಹರಿಯಿತು. ರಾಜಕಾರಣಕ್ಕೆ ಕಾಲಿಡುವ ಮುನ್ನ ಹುಟ್ಟು ಊರಾದ ಹೇಮಗಿರಿಯಲ್ಲಿ ಒಂದು ಆಸ್ಪತ್ರೆ ಕಟ್ಟಡದ ನಿರ್ಮಾಣಕ್ಕಾಗಿ ಸರ್ಕಾರಕ್ಕೆ ಎರಡು ಲಕ್ಷ ರೂಪಾಯಿಗಳನ್ನು ದಾನವಾಗಿ ಕೊಟ್ಟನು. ಅವನ ಈ ದಾನದಿಂದ ಸುಪ್ರೀತರಾದ ಸರ್ಕಾರದವರು, ಅವನ ಸೇವೆಯ ನೆನಪಿಗಾಗಿ ಅವನಿಗೊಂದು ಪ್ರಶಸ್ತಿಯನ್ನು ದಯಪಾಲಿಸಿದರು. ಆ ವೇಳೆಗಾಗಲೇ ಗಾಂಢೀವನು ತನ್ನ ವಾಸಕ್ಕಾಗಿ ಹೇಮಗಿರಿಯಲ್ಲಿ ಒಂದು ದೊಡ್ಡ ಸೌಧವನ್ನು ನಿರ್ಮಿಸಿದ್ದನು.

ತಾನು ಜವಾನನ ಮಗನಾಗಿ ಹುಟ್ಟಿದ ಹೇಮಗಿರಿಯಲ್ಲಿಯೇ ಪ್ರಥಮ ಪ್ರಜೆಯಾಗಬೇಕೆಂಬ ಆಸೆ ಅಂಕುರಿಸಿತು. ಕೆಲಕಾಲದ ನಂತರ ಹೇಮಗಿರಿ ಪುರಸಭೆಗೆ ನಡೆಯಲಿದ್ದ ಚುನಾವಣೆಗೆ ಗಾಂಢೀವನು ಸ್ಪರ್ಧಿಸಿದನು. ಅವನ ಚುನಾವಣಾ ತಂತ್ರ ಬಹಳ ಸ್ವಾರಸ್ಯವಾದುದು. ಅವನು ಉಳಿದ ಸ್ಪರ್ಧಿಗಳಂತೆ ಸದ್ದು ಗದ್ದಲಗಳ ಪ್ರಚಾರದ ಗೊಡವೆಗೆ ಹೋಗದೆ ನಿಶ್ಯಬ್ಧವಾಗಿ ಓಟಿನ ಬೇಟೆಯಾಡುತ್ತಿದ್ದನು. ರಾತ್ರಿಯ ಹೊತ್ತು ಬಡಬಗ್ಗರ ಕೇರಿಗೆ ಹೋಗಿ ಪುರುಷರಿಗೆ ತಲಾ ಐದುರೂಪಾಯಿಗಳಂತೆ ನಗದು ಹಣವನ್ನೂ, ಸ್ತ್ರೀಯರಿಗೆ ತಲಾ ಒಂದೊಂದು ಕುಪ್ಪಸದ ಬಟ್ಟೆಯನ್ನೂ ಕೊಟ್ಟು ಅವರನ್ನು ತನ್ನ ಕಡೆಗೆ ಒಲಿಸಿಕೊಳ್ಳುತಿದ್ದನು.

ಚುನಾವಣೆ ಮುಗಿದು ಫಲಿತಾಂಶ ಹೊರಬಿದ್ದಾಗ ಗಾಂಢೀವನು ಎಲ್ಲರಿಗಿಂತಲೂ ಹೆಚ್ಚು ಮತಗಳನ್ನು ಗಳಸಿ ಜಯಭೇರಿ ಹೊಡೆದಿದ್ದನು. ನಗರಸಭೆ ಸದಸ್ಯನಾದ ಮೇಲೆ ಗಾಂಢೀವನ ದೃಷ್ಟಿ ಅಧ್ಯಕ್ಷ ಪೀಠದ ಕಡೆಗೆ ಹೊರಳಿತು. ಹಣದಿಂದ ಯಾವ ಕಾರ್ಯವನ್ನಾದರೂ ಸಾಧಿಸಬಹುದೆಂದು ಅವನ ಅದುವರೆಗಿನ ಅನುಭವದಿಂದ ಸ್ಪಷ್ಟವಾಗಿತ್ತು. ಪುರಸಭೆಯ ಇಪ್ಪತ್ತು ಜನ ಸದಸ್ಯರ ಪೈಕಿ ಹನ್ನೊಂದು ಜನರನ್ನು ಹಣದಿಂದ ವಶಪಡಿಸಿಕೊಂಡರೆ ತಾನು ಅಧ್ಯಕ್ಷನಾಗುವುದು ಖಚಿತವೆಂದು ಭಾವಿಸಿದನು.

ಕೆಲವು ದಿನಗಳ ನಂತರ ಪುರಸಭೆಯ ಅಧ್ಯಕ್ಷ ಮತ್ತು ಉಪಾಧ್ಯಕ್ಷರ ಚುನಾವಣೆಯ ವೇಳಾಪಟ್ಟಿಯ ಹೊರಬಿದ್ದಿತು. ಅಧ್ಯಕ್ಷ ಸ್ಥಾನಕ್ಕೆ ಗಾಂಢೀವನೂ, ಕಮಲಾಕರನೆಂಬ ಗಣ್ಯವ್ಯಕ್ತಿಯೊಬ್ಬನೂ ಸ್ಪರ್ಧಿಸಿದರು. ಕಮಲಾಕರನು ಹೇಮಗಿರಿ ಪಟ್ಟಣದಲ್ಲಿ ಅತ್ಯಂತ ಜನಾನುರಾಗಿಯಾಗಿದ್ದವನು. ಪುರಸಭೆಯ ಬಹುಮಂದಿ ಸದಸ್ಯರು ಅವನಿಗೆ ಮತನೀಡುವ ನಿರೀಕ್ಷೆಯಿತ್ತು. ಕಮಲಾಕರನು ಅಧ್ಯಕ್ಷನಾಗುವುದು ಖಂಡಿತವೆಂದು ಜನರು ಭಾವಿಸಿದ್ದರು. ತನ್ನಂತಹ ಜನಾನುರಾಗಿಯ ವಿರುದ್ಧ ಗಾಂಢೀವನು ಸ್ಪರ್ಧಿಸಿದ್ದು ಕಮಲಾಕರನಿಗೆ ಆಶ್ಚರ್ಯವೆನಿಸಿತು.

ಅಧ್ಯಕ್ಷ ಚುನಾವಣೆಯ ಹಿಂದಿನ ದಿನ ಗಾಂಢೀವನು ಹನ್ನೊಂದು ಜನ ಸದಸ್ಯರಿಗೆ ಹನ್ನೊಂದು ಸಾವಿರ ರೂಪಾಯಿಗಳನ್ನು ಹಂಚಿದನು. ಮರುದಿನ ಚುನಾವಣೆ ನಡೆಯಿತು. ಸತ್ಯಸಂಧನೂ, ಜನಾನುರಾಗಿಯೂ ಆಗಿದ್ದ ಕಮಲಾಕರನು ಸೋತನು. ಭ್ರಷ್ಟನೂ,

ಅನಾಮಧೇಯನೂ ಆಗಿದ್ದ ಗಾಂಢೀವನು ಗೆದ್ದನು. ಪ್ರಥಮ ಪ್ರಜೆಯಾಗಲು ಪ್ರತಿಭೆಯಾಗಲೀ, ಪ್ರಜಾನುರಾಗವಾಗಲೀ ಬೇಕಿಲ್ಲವೆಂಬುದನ್ನು ಗಾಂಢೀವನು ತೋರಿಸಿಕೊಟ್ಟಿದ್ದನು.

ಗಾಂಢೀವನು ಹೇಮಗಿರಿಯ ಪ್ರಥಮ ಪ್ರಜೆಯಾದ ಮೇಲೆ ಅವನ ದೃಷ್ಟಿ ಕಾಂಗ್ರೆಸ್ ರಾಜಕಾರಣದ ಕಡೆಗೆ ಹರಿಯಿತು. ಹೆಚ್ಚು ಕಾಲಾವಕಾಶವಿಲ್ಲದೆ ಕಾಂಗ್ರೆಸ್ ಸದಸ್ಯನಾದನು. ಆ ನಂತರ ಆಗ ತಾನೆ ಗುಂಪುರಾಜಕಾರಣದಿಂದ ಮೇಲಕ್ಕೇರುತ್ತಿದ್ದ ಶಂಭು ದಾಮೋದರರ ಸ್ನೇಹವನ್ನು ಸಂಪಾದಿಸಿ ಅವರ ಕೂಟದ ಪ್ರಮುಖ ಸದಸ್ಯನಾದನು. ಹಿಂದೆ ಹೇಮಗಿರಿ ಪಟ್ಟಣದಲ್ಲಿ ಅನಾಮಧೇಯ ಬಾಣಸಿಗನಾಗಿದ್ದ ಗಾಂಢೀವ ಊರಿನ ಪ್ರಥಮ ಪ್ರಜೆಯಾಗಿ ರಾಜಕೀಯದ ಮುಂದಿನ ಹಂತಗಳ ಕನಸನ್ನು ಕಾಣುತ್ತಾ ಮುಂದೆ ಸಾಗಿದ್ದನು.

* * * *

ಕುಬೇರ ಪಟವಾರನು ಬಹುಶಃ ದೇಶ ವಿಭಜನೆಯಾದ ಕಾಲದಲ್ಲಿ ಉತ್ತರದ ಕಡೆಯಿಂದ ಹೇಮಾವತಿಗೆ ಬಂದು ನೆಲೆಸಿದವನಾಗಿರಬೇಕು. ಇವನ ಊರು ಕೇರಿಗಳ ವಿಚಾರ ಹಲವರಿಗೆ ತಿಳಿದಿರಲಿಲ್ಲ. ಹೇಮಾವತಿಗೆ ಬಂದು ನೆಲೆಸಿದ ತರುಣದಲ್ಲಿ ಎರಡು ಸಾರಿಗೆ ಲಾರಿಗಳನ್ನು ಓಡಿಸುತ್ತಿದ್ದನು. ಆ ನಂತರ ಹೇಗೋ ದಿಲೀಪನ ಅಳಿಯನ ಸ್ನೇಹವನ್ನು ಗಳಿಸಿ, ಅವನ ಮೂಲಕ ದಿಲೀಪನ ಕೃಪಾಶ್ರಯವನ್ನು ಪಡೆದನು. ದಿಲೀಪನ ಕೃಪೆಗೆ ಪಾತ್ರನಾದಮೇಲೆ ಪಟವಾರನ ಗ್ರಹಗಳು ಅನುಕೂಲವಾಗಿ ಚಲಿಸತೊಡಗಿದವು.

ಒಂದೆರಡು ವರ್ಷಗಳ ನಂತರ ಪಟವಾರನು ದಿಲೀಪನು ಸಹಾಯದಿಂದ ಹಲವು ಬಸ್ ಸರ್ವಿಸುಗಳ ಮಾಲೀಕನಾದನು. ದಿಲೀಪನು ಕೇಳಿದಾಗಲೆಲ್ಲಾ ಪಟವಾರನು ಹಣವನ್ನು ಕೊಡುತ್ತಿದ್ದನು; ಅದಕ್ಕೆ ಪ್ರತಿಯಾಗಿ ದಿಲೀಪನು ಪಟವಾರನಿಗೆ ಲಾಭದಾಯಕ ಬಸ್ ಪರ್ಮಿಟ್‌ಗಳನ್ನು ಕೊಡಿಸುತ್ತಿದ್ದನು. ಹೀಗಾಗಿ ಕೆಲವೇ ವರ್ಷಗಳಲ್ಲಿ ಪಟವಾರನು ನೂರಾರು ವಾಹನಗಳ ಒಡೆಯನಾಗಿ ಆಗರ್ಭ ಶ್ರೀಮಂತನಾದನು.

ದಿಲೀಪನ ಅನೀರಿಕ್ಷಿತ ಮರಣದಿಂದ ಪಟವಾರನ ಸಾರಿಗೆ ವ್ಯವಹಾರಕ್ಕೆ ಏಕಾಏಕಿ ಬ್ರೇಕ್ ಹಾಕಿದಂತಾಯಿತು. ದಿಲೀಪನ ಕಾಲದಲ್ಲಿ ಅಧಿಕಾರಿಗಳು ಪಟವಾರನಿಗೆ ಹೆದರಿ ನಡೆಯುತ್ತಿದ್ದರು. ಅವನು ಹೇಳಿದ್ದೆಲ್ಲಾ ನಡೆಯುತ್ತಿತ್ತು; ಕೇಳಿದ್ದೆಲ್ಲಾ ಸಿಕ್ಕುತ್ತಿತ್ತು. ಅವನು ಕಾನೂನಿನ ಬಲೆಗೆ ಸಿಕ್ಕದ ದೊಡ್ಡಮೀನಾಗಿದ್ದ. ದುರ್ಗಾದಾಸರ ಆಡಳಿತ ಪ್ರಾರಂಭವಾದ ನಂತರ ಪಟವಾರನ ಆಟ ನಡೆಯದಂತಾಯಿತು.

ದುರ್ಗಾದಾಸರು ಮುಖ್ಯಮಂತ್ರಿಯಾದ ಒಂದು ವರ್ಷದ ತರುವಾಯ ಒಂದು ಅಂತರ ರಾಜ್ಯ ಬಸ್ ಪರ್ಮಿಟ್ಟಿಗಾಗಿ ಪಟವಾರನು ಅವರನ್ನು ಆಶ್ರಯಿಸಿದನು. ದಾಸರಿಗೆ ಬೇಕಾದವರಿಂದ ಹೇಳಿಸಿದ್ದಲ್ಲದೆ ಪಟವಾರನು ಸ್ವತಃ ಅಂಗಲಾಚಿ ಬೇಡಿಕೊಂಡನು. ಪಟವಾರನು ತಮ್ಮನ್ನು ಬಹು ವಿಧವಾಗಿ ಹಲವು ಸಾರಿ ಪೀಡಿಸಿದ್ದರಿಂದ ಬೇಸರಗೊಂಡಿದ್ದ

ದುರ್ಗಾದಾಸರು ಒಂದು ದಿನ, "ಕಾನೂನು ಪ್ರಕಾರ ಬಸ್ ಪರ್ಮಿಟ್ ಕೊಡುವ ಅಧಿಕಾರ ನನಗಿಲ್ಲ. ಇಂತಹ ವ್ಯವಹಾರಗಳಿಗೆ ನೀವು ನನ್ನ ಬಳಿಗೆ ಬರಬಾರದು" ಎಂದು ಆಗ್ರಹ ಪೂರ್ವಕವಾಗಿ ನುಡಿದರು. ದುರ್ಗಾದಾಸರ ಈ ಉತ್ತರದಿಂದ ಕುಪಿತನಾದ ಪಟವಾರ, ಶಂಭು ದಾಮೋದರರೊಡನೆ ಸೇರಿಕೊಂಡನು.

* * * *

ಮಹೋದರ ಹೇಮಾವತಿ ನಗರದ ವಾಸಿ. ಅವನು ರಾಜಧಾನಿಯ ಶ್ರೀಮಂತರೆಲ್ಲೆಲ್ಲಾ ಶ್ರೀಮಂತನೆನಿಸಿಕೊಂಡಿದ್ದನು. ಮಹೋದರನಿಗೆ ರಾಜಧಾನಿಯಲ್ಲಿ ಆರು ಸಿನಿಮಾ ಮಂದಿರಗಳಿದ್ದುವು. ಜೊತೆಗೆ ಅವನೊಬ್ಬ ಪ್ರಮುಖ ಕಂಟ್ರಾಕ್ಟರನಾಗಿದ್ದನು. ಅವನೊಂದು ಪ್ರಮುಖ ದಿನಪತ್ರಿಕೆಯನ್ನೂ ಹೊರಡಿಸುತ್ತಿದ್ದನು.

ಮಹೋದರನು ದಿಲೀಪನ ಪರಮ ಮಿತ್ರನಾಗಿ ಅವನ ಬಲಭುಜದಂತಿದ್ದನು. ದಿಲೀಪನ ರಾಜಕಾರಣಕ್ಕಾಗಿ ಮಹೋದರನು ಯಥೇಚ್ಛವಾಗಿ ಹಣವನ್ನು ಕೊಡುತ್ತಿದ್ದನು. ಅದಕ್ಕೆ ಪ್ರತಿಯಾಗಿ ದಿಲೀಪನು ಅವನಿಗೆ ಹಲವು ಅನುಗ್ರಹಗಳನ್ನು ದಯಪಾಲಿಸಿದ್ದನು. ದಿಲೀಪನು ಮುಖ್ಯಮಂತ್ರಿಯಾಗಿದ್ದಾಗ ಮಹೋದರನು ರಾಜಧಾನಿಯಲ್ಲಿ ಇನ್ನೊಂದು ಸಿನಿಮಾ ಮಂದಿರವನ್ನು ಕಟ್ಟಿಸುವ ಸಲುವಾಗಿ ಮಕ್ಕಳ ಆಟಕ್ಕೆ ಮೀಸಲಾಗಿಟ್ಟಿದ್ದ ಸರ್ಕಾರಿ ಜಾಗವನ್ನು ತನಗೆ ಕೊಡಿಸಿಕೊಡಬೇಕೆಂದು ಅರ್ಜಿಯನ್ನು ಸಲ್ಲಿಸಿದ್ದನು.

ದಿಲೀಪನು ಆ ಅರ್ಜಿಯನ್ನು ಸಂಬಂಧಪಟ್ಟ ಅಧಿಕಾರಿಗೆ ಕಳುಹಿಸಿ, ಆ ನಂತರ ಮಹೋದರನಿಗೆ ಅನುಕೂಲವಾದ ವರದಿಯನ್ನು ಕಳುಹಿಸಿಕೊಡಬೇಕೆಂದು ಗುಪ್ತವಾಗಿ ಆ ಅಧಿಕಾರಿಗೆ ಆದೇಶ ನೀಡಿದ್ದನು. ಆ ಗುಪ್ತ ಸೂಚನೆಗನುಗುಣವಾಗಿ ಆ ಅಧಿಕಾರಿಯು ಜಾಗವನ್ನು ಮಹೋದರನಿಗೆ ಕೊಡಬಹುದೆಂದು ಸರ್ಕಾರಕ್ಕೆ ಶಿಫಾರಸ್ಸು ಮಾಡಿದ್ದನು. ಆದರೆ ಸರ್ಕಾರಿ ಆಜ್ಞೆಯಾಗುವುದರೊಳಗಾಗಿ ದಿಲೀಪನು ಮೃತಪಟ್ಟನು.

ದುರ್ಗಾದಾಸರು ಮುಖ್ಯಮಂತ್ರಿಯಾದ ಮೇಲೆ ಮಹೋದರನು ಅವರಲ್ಲಿಗೆ ಹೋಗಿ ತಾನು ಅಪೇಕ್ಷಿಸಿದ್ದ ಜಾಗವನ್ನು ತನಗೆ ಕೊಡಿಸಿಕೊಡಬೇಕೆಂದು ಪ್ರಾರ್ಥಿಸಿದ್ದನು. ದಾಸರಿಗೆ ಮಹೋದರನ ಇತಿಹಾಸ ಗೊತ್ತಿತ್ತು. ಆದ್ದರಿಂದ ತಾವೇ ಜಾಗವನ್ನು ನೋಡಬೇಕೆಂದು ನಿರ್ಧರಿಸಿದರು. ಸೂಕ್ತ ಪರಿಶೀಲನೆಯಾದ ಮೇಲೆ ತೀರ್ಮಾನವನ್ನು ಕೈಗೊಳ್ಳುವುದಾಗಿ ದಾಸರು ಮಹೋದರನಿಗೆ ತಿಳಿಸಿದರು. ಕೆಲವು ದಿನಗಳ ನಂತರ ಸ್ವತಃ ದುರ್ಗಾದಾಸರೇ ಮಹೋದರನು ಕೇಳಿದ್ದ ಜಾಗವನ್ನು ನೋಡಿದರು. ಜಾಗವನ್ನು ನೋಡಿದ ಮೇಲೆ ಅವರು ಅಚ್ಚರಿಗೊಂಡರು. ಮಕ್ಕಳ ಆಟಕ್ಕೆ ಮೀಸಲಾಗಿದ್ದ ಜಾಗವನ್ನು ಖಾಸಗಿ ವ್ಯಕ್ತಿಯೊಬ್ಬನಿಗೆ ಸಿನಿಮಾ ಮಂದಿರದ ನಿರ್ಮಾಣಕ್ಕಾಗಿ ಕೊಡಲು ಒಳಸಂಚು ನಡೆಸಿದ್ದು ಸ್ವಾಭಾವಿಕವಾಗಿ ಅವರನ್ನು ಅಚ್ಚರಿಗೊಳಿಸಿತು.

ಆ ನಂತರ ದುರ್ಗಾದಾಸರು ಆ ಜಾಗವನ್ನು ಕೊಡಲಾಗುವುದಿಲ್ಲವೆಂದು ಮಹೋದರನಿಗೆ ಉತ್ತರ ಕಳುಹಿಸಿದರು. ಈ ಉತ್ತರದಿಂದ ಮಹೋದರನಿಗೆ ದುರ್ಗಾದಾಸರ ಮೇಲೆ ಅಪರಿಮಿತವಾದ ಅಸಮಾಧಾನವಾಯಿತು. ದಿಲೀಪನ ಕಾಲದಲ್ಲಿ

ಇಡೀ ಸರ್ಕಾರವೇ ಮಹೋದರರ ಮಾತಿನಂತೆ ನಡೆಯುತ್ತಿತ್ತು. ಅದೇ ಸರ್ಕಾರ ದುರ್ಗಾದಾಸರ ಕಾಲದಲ್ಲಿ ಅವನ ಅಲ್ಪ ಬೇಡಿಕೆಯೊಂದನ್ನು ನಿರಾಕರಿಸಿದ್ದು ಮಹೋದರನನ್ನು ಸ್ವಾಭಾವಿಕವಾಗಿ ಕೆರಳಿಸಿತು. ತನ್ನಂತಹ ಆಗರ್ಭ ಶ್ರೀಮಂತನೊಬ್ಬನ ಅಲ್ಪ ಬೇಡಿಕೆಯನ್ನು ನಿರಾಕರಿಸಿದ ಮುಖ್ಯಮಂತ್ರಿ ಅಧಿಕಾರದಲ್ಲಿರಬಾರದೆಂದು ಮಹೋದರನು ಸಂಕಲ್ಪ ಮಾಡಿದನು. ಕುಪಿತನಾದ ಅವನು ಶಂಭು ದಾಮೋದರರ ದುಷ್ಟ ದಂಡಿನ ದಳವಾಯಿಯಾಗಿ ದುರ್ಗಾದಾಸರ ವಿರುದ್ಧ ಕತ್ತಿಯನ್ನು ಮಸೆಯಲಾರಂಭಿಸಿದನು. ಅನಂತರ ಮಹೋದರನ ದಿನಪತ್ರಿಕೆಯ ಪುಟಗಳೆಲ್ಲವೂ ದುರ್ಗಾದಾಸರ ಅವಹೇಳನದ ಕತೆಗಳಿಂದಲೇ ತುಂಬಿರುತ್ತಿದ್ದುವು.

## ೩. ದುರಾಕ್ರಮಣ

ದುರ್ಗಾದಾಸರು ಮುಖ್ಯಮಂತ್ರಿಯಾದ ನಂತರ ಅವರ ಸ್ಥಾನದಲ್ಲಿ ಭಾರ್ಗವದಾಸರೆಂಬ ಅಪ್ಪಟ ಗಾಂಧೀಭಕ್ತರೊಬ್ಬರು ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರಾಗಿದ್ದರು. ಭಾರ್ಗವದಾಸರು ಸ್ವಾತಂತ್ರ್ಯ ಸಂಗ್ರಾಮದ ವೀರರೂ, ಅಪ್ರತಿಮ ದೇಶಭಕ್ತರೂ ಜನರ ಮೆಚ್ಚಿನ ನಾಯಕರೂ ಆಗಿದ್ದರು. ಅವರ ಅಧ್ಯಕ್ಷ ಪಟ್ಟದ ಅವಧಿಯು ಮುಗಿಯುತ್ತಾ ಬಂದಿದ್ದುದರಿಂದ ಪ್ರದೇಶ ಕಾಂಗ್ರೆಸ್ ಸಮಿತಿಗೂ, ಅದರ ಕಾರ್ಯಮಂಡಳಿಗೂ ಹೊಸದಾಗಿ ಚುನಾವಣೆ ನಡೆಯಬೇಕಾಗಿತ್ತು. ಮರುವರ್ಷ ರಾಜ್ಯದಲ್ಲಿ ಸಾರ್ವತಿಕ ಚುನಾವಣೆ ನಡೆಯಬೇಕಾಗಿದ್ದುದರಿಂದ ಪ್ರದೇಶ ಕಾಂಗ್ರೆಸ್ ಚುನಾವಣೆಗಳಿಗೆ ಹೆಚ್ಚಿನ ಮಹತ್ವ ಬಂದಿತ್ತು. ಯಾಕೆಂದರೆ ಹೊಸದಾಗಿ ಆರಿಸಿ ಬರಲಿರುವ ಪ್ರದೇಶ ಕಾಂಗ್ರೆಸ್ ಸಮಿತಿಯ ಸದಸ್ಯರೇ ಚುನಾವಣಾ ಸಮಿತಿಯನ್ನು ರಚಿಸಬೇಕಾಗಿತ್ತು. ಆ ರೀತಿ ರಚಿಸಲ್ಪಟ್ಟ ಚುನಾವಣಾ ಸಮಿತಿಯೇ ಸಾರ್ವತ್ರಿಕ ಚುನಾವಣೆಗೆ ಕಾಂಗ್ರೆಸ್ ಉಮೇದುವಾರರನ್ನು ಆರಿಸಬೇಕಾಗಿತ್ತು.

ಮೇಲ್ಕಂಡ ಕಾರಣಗಳಿಂದ ಚುನಾವಣಾ ಸಮಿತಿಯನ್ನು ಆಕ್ರಮಿಸಿಕೊಳ್ಳುವ ಉದ್ದೇಶದಿಂದ ಪ್ರದೇಶ ಕಾಂಗ್ರೆಸ್ ಚುನಾವಣೆಗಳಲ್ಲಿ ತೀವ್ರ ಪೈಪೋಟಿ ನಡೆದಿತ್ತು. ಶಂಭು ದಾಮೋದರರೂ, ಅವರಿಬ್ಬರ ಅನುಯಾಯಿಗಳೂ ಚುನಾವಣೆಯಲ್ಲಿ ತಮ್ಮ ಗುಪ್ತ ಕೈವಾಡವನ್ನು ನಡೆಯಿಸುತ್ತಿದ್ದರು. ಆ ಮೊದಲೇ ಅವರು ಸಾಕಾದಷ್ಟು ಪ್ರಮಾಣದಲ್ಲಿ ತಾವು ಹೇಳಿದಂತೆ ಕೇಳುವ ಪ್ರಾಥಮಿಕ ಸದಸ್ಯರನ್ನು ಸೇರಿಸಿದ್ದರು. ಚುನಾವಣೆಗಾಗಿ ತಮಗಾಪ್ತರಾದ ಕಂಟ್ರಾಕ್ಟರುಗಳಿಂದಲೂ, ವರ್ತಕರುಗಳಿಂದಲೂ ಹಣವನ್ನು ಸಂಗ್ರಹಿಸಿದ್ದರು.

ಶಂಭುವೂ, ದಾಮೋದರನೂ ಸಂಸ್ಥಾನದಾದ್ಯಂತ ಗುಪ್ತವಾಗಿ ಸಂಚರಿಸಿ ಪ್ರತಿಯೊಂದು ಚುನಾವಣಾ ಕ್ಷೇತ್ರದಲ್ಲೂ ತಮ್ಮ ಗುಂಪಿನ ಉಮೇದುವಾರರನ್ನು ನಿಲ್ಲಿಸುವ ವ್ಯವಸ್ಥೆ ಮಾಡಿದರು. ಚುನಾವಣೆಗಳಲ್ಲಿ ಕೆಲವೆಡೆ ಹಣದ ಚಲಾವಣೆ ನಡೆಯುತ್ತಿದ್ದರೆ, ಕೆಲವೆಡೆ ಜಾತೀಯತೆಯ ಪುಸಲಾವಣೆ ನಡೆದಿತ್ತು. ಇವೆರಡೂ ಸಾಧ್ಯವಾಗದ ಕಡೆಗಳಲ್ಲಿ ಶಂಭು ದಾಮೋದರರು ಮೋಸ ವಂಚನೆಗಳನ್ನು ಆಚರಿಸಿದ್ದರು.

ಚುನಾವಣೆ ಶಾಸ್ತ್ರ ಮುಗಿಯಿತು. ಶಂಭು ದಾಮೋದರರ ತಾಳಕ್ಕೆ ಸರಿಯಾಗಿ ಕುಣಿಯತಕ್ಕವರೇ ಹೆಚ್ಚು ಸಂಖ್ಯೆಯಲ್ಲಿ ಆರಿಸಿ ಬಂದಿದ್ದರು. ಪ್ರಥಮ ಪ್ರಯತ್ನದಲ್ಲೇ ದುಷ್ಟ ಶಿಖಾಮಣಿಗಳು ಜಯಭೇರಿಯನ್ನು ಹೊಡೆದಿದ್ದರು. ರಾಜ್ಯದ ಆಡಳಿತದಲ್ಲಿ ನಿರತರಾಗಿದ್ದ ದುರ್ಗಾದಾಸರಿಗಾಗಲಿ ಮುಗ್ಧರಾದ ಭಾರ್ಗವದಾಸರಿಗಾಗಲಿ ಶಂಭು

ದಾಮೋದರರು ಚುನಾವಣೆಗಳಲ್ಲಿ ನಡೆಯಿಸಿದ್ದ ಗುಪ್ತ ಕೈವಾಡ ಗೊತ್ತಾಗಲೇ ಇಲ್ಲ. ಚುನಾವಣೆಯಲ್ಲಿ ಗೆದ್ದು ಶಂಭು ದಾಮೋದರರು ಮುಂದೆ ನಡೆಯಬೇಕಾಗಿದ್ದ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರ ಚುನಾವಣೆಯಲ್ಲಿಯೂ ಸಹ ತಮ್ಮ ಕೈಚಳಕವನ್ನು ತೋರಿಸಲು ಹವಣಿಸುತ್ತಿದ್ದರು.

* * * *

ಸಂಜೆ ನಾಲ್ಕು ಗಂಟೆಯ ಸಮಯ. ರಾಜಧಾನಿ ಕಾಂಗ್ರೆಸ್ ಭವನದಲ್ಲಿ ಎಂದೂ ಇಲ್ಲದ ಗಡಿಬಿಡಿ. ಆದಿನ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರ ಚುನಾವಣೆ ನಡೆಯಬೇಕಾಗಿತ್ತು. ರಾಜ್ಯದ ನಾನಾ ಭಾಗಗಳಿಂದ ಅಧ್ಯಕ್ಷರ ಆಯ್ಕೆಗಾಗಿ ಪ್ರತಿನಿಧಿಗಳು ಆಗಮಿಸಿದ್ದರು. ಕಾಂಗ್ರೆಸ್ ಭವನದ ಸಭಾಂಗಣದಲ್ಲಿ ಮತ್ತು ಹೊರಗಡೆ ಅಂಗಳದಲ್ಲಿ ಕಾಂಗ್ರೆಸ್ ಕಾರ್ಯಕರ್ತರು ಅಲ್ಲಲ್ಲಿ ಗುಂಪು ಸೇರಿ ಮಾತನಾಡುತ್ತಿದ್ದರು. ಕೆಲವೆಡೆ ಪಿಸುಮಾತಿನ ಸಂಭಾಷಣೆ ಜರುಗಿದ್ದರೆ, ಮತ್ತೆ ಕೆಲವೆಡೆ ಬಿರುಸಾದ ವಾಗ್ಯುದ್ಧ ನಡೆದಿತ್ತು. ಕೆಲವೆಡೆ ಶಾಂತರೀತಿಯಲ್ಲಿ ಮತದಾರರನ್ನು ಒಲಿಸಿಕೊಳ್ಳುವ ಪ್ರಯತ್ನ ನಡೆಯುತ್ತಿದ್ದರೆ, ಮತ್ತೆ ಕೆಲವೆಡೆ ವೃದ್ಧರಿಂದ ಪಕ್ಷವು ಬೆಳೆಯಲಾರದೆಂದೂ, ಬಿಸಿರಕ್ತದ ಉತ್ಸಾಹಶಾಲಿಯೊಬ್ಬರನ್ನು ಆರಿಸಬೇಕೆಂದೂ ಬಹಿರಂಗ ಘೋಷಣೆ ನಡೆಯುತ್ತಿತ್ತು. ಕೆಲವರು ಭಾರ್ಗವದಾಸರ ಸೇವೆಯನ್ನು ಪ್ರಶಂಸಿಸುತ್ತಿದ್ದರೆ, ಮತ್ತೆ ಕೆಲವರು ದಾಮೋದರನ ಸಾಹಸ ಪ್ರವೃತ್ತಿಯನ್ನು ಹೊಗಳುತ್ತಿದ್ದರು.

ಅಂದಿನ ಚುನಾವಣೆಯಲ್ಲಿ ಪ್ರದೇಶ ಕಾಂಗ್ರೆಸ್ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಗಳಾರೆಂಬುದು ಅಲ್ಲಿ ನೆರೆದಿದ್ದ ಜನರ ಮಾತುಕತೆಗಳಿಂದಲೇ ಸ್ಪಷ್ಟವಾಗಿತ್ತು. ದುರ್ಗಾದಾಸರೂ, ಅವರ ಅನುಯಾಯಿಗಳೂ ಭಾರ್ಗವದಾಸರನ್ನೇ ಪುನಃ ಅಧ್ಯಕ್ಷರನ್ನಾಗಿ ಆರಿಸಬೇಕೆಂಬ ಪ್ರಯತ್ನದಲ್ಲಿ ತೊಡಗಿದ್ದರು. ಅವರ ವಿರೋಧ ಗುಂಪಿನವರು ದಾಮೋದರನನ್ನು ಅಧ್ಯಕ್ಷರನ್ನಾಗಿ ಮಾಡಬೇಕೆಂಬ ಸನ್ನಾಹದಲ್ಲಿದ್ದರು. ಚುನಾವಣೆ ಪ್ರಾರಂಭವಾಗಲು ಕೇವಲ ಒಂದು ಗಂಟೆ ಕಾಲವಿತ್ತು. ಆ ಸಮಯದಲ್ಲಿ ಕಾಂಗ್ರೆಸ್ ಕಾರ್ಯಕರ್ತರಿಬ್ಬರು ಸಭಾಂಗಣದ ಒಂದು ಮೂಲೆಯಲ್ಲಿ ಕುಳಿತು ಸಂಭಾಷಣೆಯಲ್ಲಿ ತೊಡಗಿದ್ದರು.

ರಾಜಕೀಯ ಚದುರಂಗದಾಟದ ಮರ್ಮವನ್ನರಿಯದ ಹೇಮಗಿರಿ ಜಿಲ್ಲೆಯ ಹಳ್ಳಿಯೊಂದರಿಂದ ಬಂದಿದ್ದ ಪ್ರತಿನಿಧಿ ಗಂಗಾಧರನು ರಾಜಕೀಯದ ಆಳ ಅಗಲಗಳನ್ನು ಚೆನ್ನಾಗಿ ಅರಿತಿದ್ದ ರಾಜಧಾನಿಯ ಭಾಸ್ಕರನನ್ನು ಕುರಿತು, "ಏನ್ರೀ, ಹ್ಯಾಂಗದರ್‍ರೀ ಹವಾಮಾನ? ಈ ಸಾರೇನೂ ಒಮ್ಮತದ ಎಲೆಕ್ಷನ್ ಆಗ್ತದೋ ಹ್ಯಾಂಗ?"

"ಅವಿರೋಧ ಚುನಾವಣೆಯೆಲ್ಲಿ ಬಂತು? ಇಲ್ಲಿರೋ ವಾತಾವರಣ ನೋಡಿದ್ರೆ ನಿಮಗೆ ಗೊತ್ತಾಗೋದಿಲ್ಲೇನು? ದಾಮೋದರನ್ನ ತರ್ಬೇಕೂ ಅಂತ ಶಂಭು ಓಡಾಡ್ತಾ ಇದ್ದಾನೆ. ಭಾರ್ಗವದಾಸರನ್ನೇ ಪುನಃ ಆರಿಸ್ಬೇಕೂ ಅಂತ ನಮ್ಮ ಮುಖ್ಯಮಂತ್ರಿಗಳು ಪ್ರಯತ್ನ ನಡೆಸ್ತಾರೆ."

“ಭಾರ್ಗವದಾಸರು ಅಗದಿ ಉತ್ತಮ ಮನುಷ್ಯ ಅಂತ ನಮ್ಮಲ್ಲಿ ಮಂದಿ ಅಂತಾರ.”

“ಹೌದು ನಿಜ.”

“ಹಂಗಾರೆ ಅವರನ್ನ ಯಾಕೆ ಬದಲಿ ಮಾಡ್ತಾರೆ?”

“ನೀವು ಬಹಳಾ ಮುಗ್ಧರಂತೆ ಮಾತಾಡ್ತಾ ಇದ್ದೀರಿ. ಸ್ವಾರ್ಥ ಸಾಧಕರಿಗೆ ಸತ್ಯಸಂಧರು ಯಾಕ್ರೀಬೇಕು? ಅವರಿಗೆ ಅವರಂತಾ ಸ್ವಾರ್ಥ ಸಾಧಕರೇಬೇಕು.”

“ಅವ ಯಾರ್ರೀ ದಾಮೋದರಾಂದ್ರೆ? ಅವನ ಹಕೀಕತ್ತೇ ನಮ್ಗೆ ಇಲ್ಲೀತನಕ ಗೊತ್ತಿಲ್ಲಪ್ಪ.”

“ನಿಮಗ್ಯಾಕೆ ನಮಗೂ ಸಹ ಅವನ ಇತಿಹಾಸ ಇತ್ತೀಚಿನವರೆಗೂ ಗೊತ್ತಿರಲಿಲ್ಲ. ಅವ ಹಿಂದಿನ ಮುಖ್ಯಮಂತ್ರಿ ದಿಲೀಪನ ಶಿಷ್ಯ. ಕಳ್ಳ ವ್ಯಾಪಾರ ಮಾಡಿ ಕಳ್ಳದುಡ್ಡು ಮಾಡ್ದ ಕದೀಮ ಅಂತ ನಮಗೆ ಗೊತ್ತಾಗಿತ್ತು. ಈಗ ನೋಡಿದ್ರೆ ಪಾಲಿಟಿಕ್ಸಿಗೆ ಇಳಿದಾನೆ.”

“ಹಂಗ್ಯಾರೆ ಅವನ ಕತೀ ದೊಡ್ಡ ಕತೀ ಅನ್ನಿ.”

“ದೊಡ್ಡ ಕತೇನೆ. ಅವ ಮೊದಲು ಬಡವ. ಒಂದು ಬಾರ್ ಮ್ಯಾನೇಜರ್ ಆಗಿದ್ದ”

“ಬಾರ್ ಅಂದ್ರೆ ಏನದು? ನಮ್ಮಕಡೀ ತೊಗಲಿಗೆ ಬಾರ್ ಅಂತೀವಿ.”

“ಬಾರ್ ಅಂದ್ರೆ, ಬ್ರಾಂದಿ, ವಿಸ್ಕಿ, ಬೀರು, ವಗೈರೆ ಮಾರಾಟ ಮಾಡುವ ಅಂಗಡಿ.”

“ಸೆರೆದ ಅಂಗಡೀ ಅನ್ರಲಾ”

“ಬಾರ್ ಮಾಲೀಕ ರೇಸ್ ಚಟಕ್ಕೆ ಬಿದ್ದು ಪಾಪರಾದ. ದಾಮೋದರ ಅವನ ದುಡ್ಡು ಲಪಟಾಯಿಸಿ ಲಕ್ಷಾಧಿಪತಿಯಾದ.”

“ರೇಸ್ ಅಂದ್ರೇನದೂ?”

“ಈ ಜನಕ್ಕೆ ಹೇಳೋದೇ ಕಷ್ಟ. ರೇಸೆಂದ್ರೆ ಕುದುರೆ ಜೂಜು ಅಂತ.”

“ಓ....ತಿಳೀತ್ರಿ ಕುದ್ರಿ ಓಡಾಡ್ಸೂದು ಅಂತ. ನಮ್ಕಡೀಗೆ ಇಷ್ಟು ಇಂಗ್ಲೀಷಿಲ್ರಿ. ಅವ ಯಾರ್ರೀ ಶಂಭೂ ಅಂದ್ರೆ?”

“ಅವೊಬ್ಬ ಗೂಂಡಾ. ಅವ ದುರ್ಗಾದಾಸರಿಂದಲೇ ಮೇಲಕ್ಕೆ ಬಂದು ಈಗವ್ರ ಮೇಲೆ ಕತ್ತಿ ಕಟ್ಯಾನೆ.”

“ಏನ್ರೀ.........ಗಾಂಧಿ ಮುತ್ಯಾನ ಕಾಲದಾಗೆ ಏನ್ ಕಾಂಗ್ರೆಸ್‌ರ್ರೀ ಅದುಯಂತಾ ಚಲೋದು. ಯಂತಂತಾ ದೊಡ್ಡ ಮಂದೀ ಇದ್ರು. ಈಗ್ಯಂತಾ ಕೆಟ್ಟ ಮುಂಡೇಮುಕ್ಳು ಸೇರ್ಕೊಂಡಾರೆ. ಯಂತಾಕಾಲ ಬಂತ್ರೀ? ನಮ್ಮಂತೋರು ಇದ್ರಾಗೆ ಇದ್ದು ಏಗೋದು ಕಠಿಣೈತಿ. ಮುಖ್ಯಮಂತ್ರಿಗಳು ಬರಾಕೆ ಹತ್ಯಾರೆ. ಸಭಾ ಶುರು ಆಗ್ತೈತಿ. ನಡ್ರಿ ಹೋಗೋಣ.”

* * * *

ಐದು ಗಂಟೆಗೆ ಸರಿಯಾಗಿ ಪ್ರದೇಶ ಕಾಂಗ್ರೆಸ್ ಸಮಿತಿಯ ಸರ್ವಸದಸ್ಯರ ಸಭೆ ಆರಂಭವಾಯಿತು. ಸ್ವಾಗತ ಮುಂತಾದ ಸಾಂಪ್ರದಾಯಿಕ ಕಾರ್ಯಗಳು ಮುಗಿದ

ಮೇಲೆ ದುರ್ಗಾದಾಸರು ಎದ್ದು ನಿಂತು ಹಿಂದಿನಿಂದ ನಡೆದು ಬಂದ ಸಂಪ್ರದಾಯದಂತೆ ಪ್ರದೇಶ ಕಾಂಗ್ರೆಸ್ ಅಧ್ಯಕ್ಷರ ಆಯ್ಕೆ ಸರ್ವಾನುಮತದಿಂದ ಆಗಬೇಕೆಂದೂ, ಕಾಂಗ್ರೆಸ್ಸಿನ ಹಿತದೃಷ್ಟಿಯಿಂದ ನಿಷ್ಠಾವಂತರಾದ ಭಾರ್ಗವದಾಸರನ್ನೇ ಮತ್ತೊಮ್ಮೆ ಒಮ್ಮತದಿಂದ ಆರಿಸಬೇಕೆಂದೂ ನೆರೆದಿದ್ದ ಪ್ರತಿನಿಧಿಗಳನ್ನು ಪ್ರಾರ್ಥಿಸಿದರು.

ಆಗ ದಾಮೋದರನ ಗುಂಪಿಗೆ ಸೇರಿದ್ದ ಅನಾಮಧೇಯ ಅಸಂಸ್ಕೃತ ಸದಸ್ಯನೊಬ್ಬನು, "ಮುಖ್ಯಮಂತ್ರಿ ಪದವಿ ದುರ್ಗಾದಾಸರ ಜ್ಹಾಗೀರಿ ಆಗಬಾರ್ದು. ಹೊಸಬ್ರು ಬರ್ಲಿ. ಚುನಾವಣೆ ನಡೀಲೇಬೇಕು. ಒಮ್ಮತ ಗಿಮ್ಮತ ಇಲ್ಲಿ ನಡೆಯೂದಿಲ್ಲ," ಎಂದು ಗಟ್ಟಿಯಾಗಿ ಅರಚಿದನು. ಅವನ ಮಾತು ಮುಗಿಯುವುದರೊಳಗಾಗಿ ಅವನು ಕೂಗಿದ ಧಾಟಿಯಲ್ಲಿಯೇ ಇನ್ನೂ ಕೆಲವರು ಗೂಂಡಾ ಸದಸ್ಯರು ಗಟ್ಟಿಯಾಗಿ ಕೂಗಿ ಚುನಾವಣೆ ನಡೆಯಲೇಬೇಕೆಂದು ಬೊಬ್ಬೆ ಇಟ್ಟರು.

ಸಭೆಯಲ್ಲಿದ್ದ ವಾತಾವರಣವನ್ನು ನೋಡಿ ದುರ್ಗಾದಾಸರು ಚಕಿತರಾದರು; ಭಾರ್ಗವದಾಸರು ಬೆಚ್ಚಿಬಿದ್ದರು. ತಮ್ಮ ಸಲಹೆಗೆ ಅಷ್ಟೊಂದು ವಿರೋಧ ಬರುವುದೆಂದು ದುರ್ಗಾದಾಸರು ಊಹಿಸಿರಲಿಲ್ಲ. ಪ್ರದೇಶ ಕಾಂಗ್ರೆಸ್ ಸಮಿತಿ ತಮ್ಮ ಅಂಕೆಯಲ್ಲಿಲ್ಲವೆಂಬ ಭಾವನೆ ಮೊಟ್ಟ ಮೊದಲನೆಯ ಬಾರಿ ಅವರಿಗಾಯಿತು. ಸಭೆಯಲ್ಲಿದ್ದ ವಾತಾವರಣವನ್ನು ಗಮನಿಸಿದ ಅವರು ಮತ್ತೇನೂ ಹೇಳದೆ ಸುಮ್ಮನಾದರು.

ಚುನಾವಣೆ ನಡೆಯಿತು. ಪುಂಡು ಪೋಕರಿಗಳ ಮುಖಂಡ ದಾಮೋದರನು ಗೆದ್ದನು; ಸತ್ಯ ಅಹಿಂಸೆಗಳ ಪ್ರತಿರೂಪದಂತಿದ್ದ ಭಾರ್ಗವದಾಸರು ಸೋತರು. ಸೋತ ಭಾರ್ಗವದಾಸರು ನಿಟ್ಟುಸಿರು ಬಿಟ್ಟರು. ದುರ್ಗಾದಾಸರು ಕೋಪದಿಂದ ಕೆರಳಿದರು. ಆದರೂ ಅವರಿಬ್ಬರೂ ಸೌಜನ್ಯಕ್ಕನುಗುಣವಾಗಿ ದಾಮೋದರನನ್ನು ಅಭಿನಂದಿಸಿದರು. ದಾಮೋದರನು ತನ್ನ ಭಾಷಣದಲ್ಲಿ ತನ್ನ ಜಯಕ್ಕೆ ರಾಜ್ಯದ ಜನತೆಯ ವಿಶ್ವಾಸ, ಬೆಂಬಲಗಳೇ ಕಾರಣವೆಂದು ಹೇಳಿಬಿಟ್ಟನು. ತಾನು ಕಾಂಚಾಣ ಕೃತ್ರಿಮಗಳಿಂದ ಗೆದ್ದು ಬಂದಿರುವುದನ್ನು ಮರತೇಬಿಟ್ಟಿದ್ದನು.

ಅಧ್ಯಕ್ಷ ಚುನಾವಣೆಯ ಜೊತೆಗೆ ಕಾರ್ಯಮಂಡಳಿಯ ಸದಸ್ಯರ ಚುನಾವಣೆಯೂ ನಡೆದಿತ್ತು. ಕಾರ್ಯ ಮಂಡಳಿಗೆ ಶಂಭು ದಾಮೋದರರ ಕಡೆಯವರೇ ಅಧಿಕ ಸಂಖ್ಯೆಯಲ್ಲಿ ಆರಿಸಿ ಬಂದಿದ್ದರು. ಅಧ್ಯಕ್ಷ ದಾಮೋದರನು ಶಂಭುವನ್ನು ಪ್ರದೇಶ ಕಾಂಗ್ರೆಸ್ ಸಮಿತಿಯ ಪ್ರಧಾನ ಕಾರ್ಯದರ್ಶಿಯನ್ನಾಗಿ ನೇಮಕ ಮಾಡಿರುವುದಾಗಿ ಘೋಷಿಸಿದನು. ಯಾವ ಕಾಂಗ್ರೆಸ್ ಭವನದಲ್ಲಿ ಹಿಂದೆ ಗುಮಾಸ್ತನಾಗಿ ಕೆಲಸ ಮಾಡುತ್ತಿದ್ದನೋ ಅದೇ ಭವನದಲ್ಲಿ ಪ್ರದೇಶ ಕಾಂಗ್ರೆಸ್ ಸಮಿತಿಯ ಪ್ರಧಾನ ಕಾರ್ಯದರ್ಶಿಯಾಗಿ ಅಂದು ಶಂಭು ಅಧಿಕಾರ ಸ್ವೀಕರಿಸಿದನು.

ಚುನಾವಣೆ ಮುಗಿದ ನಂತರ ಗಂಗಾಧರ ಭಾಸ್ಕರನನ್ನು ಕುರಿತು, "ನೀವ್ ದಾಮೋದರನ ಸಲುವಾಗಿ ಕಂಡಾಬಟ್ಟಿ ಹೇಳದ್ರಿ, ಅವ ಬಲ್ ಪಾಡಾಗಿ ಕಾಣ್ತಾನೆ. ಅವನ ಮಾರಿ ಹಸುಗೂಸಿನ ಮಾರೀ ಹಂಗೆ ಕಾಣ್ತದಲ್ರೀ", ಎಂದು ನುಡಿದನು.

"ಅವ ಮೆತ್ತನೆ ಕಳ್ಳ; ಯಾವಾಗಲೂ ನಗ್ತಾನೇ ಇರ್ತಾನೆ. ಅವನ ಆಳಾನ ಆ ಪರಮಾತ್ಮನೂ ಸಹಾ ಅಳೀಲಾರ, ಅಂತೂ ದುಷ್ಟರು ದುರಾಕ್ರಮಣದಿಂದ ಕಾಂಗ್ರೆಸ್ ಹಿಡದೆ ಬಿಟ್ಟರು," ಎಂದು ಭಾಸ್ಕರ ನುಡಿದನು

* * * *

ಶ್ರಾವಣ ಮಾಸ ಕಾಲಿಟ್ಟಿದ್ದರೂ ಮಳೆಯ ಸೂಚನೆ ಇನ್ನೂ ಕಾಣಬರುತ್ತಿರಲಿಲ್ಲ. ಮಧ್ಯಾಹ್ನದ ಬಿಸಿಲು ರಣಗುಡುತ್ತಿತ್ತು. ನಗರದ ಕಾರ್ಖಾನೆಗಳಿಂದ ಹೊರಗೆ ಬಂದ ಕಪ್ಪು ಹೊಗೆಯು ಬಿಸಿಲಿನ ಬೇಗೆಯಿಂದ ನಗರವು ನಿಟ್ಟಿಸಿರು ಬಿಡುತ್ತಿರುವುದೋ ಎಂಬಂತೆ ತೋರುತ್ತಿತ್ತು. ರಸ್ತೆಯ ಇಕ್ಕೆಲದಲ್ಲಿದ್ದ ಧೂಳಿ ದೂಸರಿತ ಸಾಲು ಮರಗಳು ಬಿಸಿಲಿನ ಬಗೆಗೆ ಒಣಗಿನಿಂತಿದ್ದವು. ನಗರದ ಮುಖ್ಯ ರಸ್ತೆಯೊಂದರ ಬದಿಯಲ್ಲಿ ದೊಡ್ಡ ಕಲ್ಲು ಕಟ್ಟಡವೊಂದು ನಿಂತಿತ್ತು. ಅದು ನಗರದ ಸೂಪರಿಂಟೆಂಡಿಂಗ್ ಇಂಜಿನಿಯರ್ ಆನಂದನ ಕಛೇರಿ. ಬಿಳಿಯ ಸಮವಸ್ತ್ರವನ್ನು ಧರಿಸಿದ್ದ ಕಛೇರಿಯ ಜವಾನರು ಕಛೇರಿಯ ಮುಂದಿದ್ದ ಸಾಲು ಮರಗಳ ಕೆಳಗೆ ಗುಂಪು ಸೇರಿ ಬೀಡಿಸೇದುತ್ತಾ ಹರಟುತ್ತಿದ್ದ ವೈಖರಿಯನ್ನು ನೋಡಿದರೆ ಇಂಜಿನಿಯರ್ ಸಾಹೇಬರು ಕಛೇರಿಗೆ ಇನ್ನೂ ಚಿತ್ತೈಸಿಲ್ಲವೆನ್ನುವುದು ವ್ಯಕ್ತವಾಗುತ್ತಿತ್ತು.

ಕಛೇರಿಯ ಕೆಲಸಕ್ಕೆ ಹಾಜರಾಗಿದ್ದ ನೌಕರರ ಪೈಕಿ ಹಲವರು ಚಹಾ ಸೇವನೆಗಾಗಿ ಹೊರಗೆ ಹೋಗಿದ್ದರು. ಕೆಲವರು ಕಛೇರಿಯಲ್ಲೇ ಕುಳಿತು ಹರಟೆಹೊಡೆಯುತ್ತದ್ದರು. ಒಳಗಿನ ಕೊಠಡಿಯೊಂದರಲ್ಲಿ ಎರಡನೆಯ ದರ್ಜೆಯ ಗುಮಾಸ್ತರಿಬ್ಬರು ಮೇಜಿನ ಎದುರುಬದುರಾಗಿ ಕುಳಿತು ಸ್ವಾರಸ್ಯಪೂರ್ಣ ಸಂಭಾಷಣೆಯಲ್ಲಿ ತೊಡಗಿದ್ದರು.

"ಏನಯ್ಯ ಶಂಕರನಾರಾಯಣ, ಗಂಟೆ ಮೂರಾಯಿತು. ಸಾಹೇಬರಿನ್ನೂ ಯಾಕೋ ಆಫೀಸಿಗೆ ಚಿತ್ತೈಸಿಲ್ಲ. ಊರಾಗಿದ್ದಾರೋ....ಟೂರ್ ಹೋಗ್ಯಾರೋ.....ಏನು ವಿಷಯಾ ಅನ್ನೋದು ತಿಳೀಲಿಲ್ವೆ?," ಎಂದು ಗುಮಾಸ್ತ ಸುಂದರೇಶ ಗೆಳೆಯ ಶಂಕರನಾರಾಯಣನನ್ನು ಕುರಿತು ಪ್ರಶ್ನಿಸಿದನು.

"ಸುಂದರೂ,......ಅವರು ಯಾವಾಗಲಯ್ಯಾ, ಸಮಯಕ್ಕೆ ಸರಿಯಾಗಿ ಆಫೀಸಿಗೆ ಬಂದದ್ದು ? ಊಟ ಮಾಡಿ, ಪಟ್ಟಾಗಿ ನಿದ್ದೆ ಹೊಡೆದು, ಮತ್ತೆ ಕಾಫಿ ಕುಡಿದು ನಿಧಾನವಾಗಿ ಅಲ್ಲವೋ ಅವರು ಆಫೀಸಿಗೆ ಬರುವುದು. ಇವತ್ತು ಹೆಚ್ಚು ಮಾಡಿ ಅವರು ಭಾವೀ ಚೀಫ್ ಮಿನಿಸ್ಟರು ಭೇಟಿಗೆ ಹೋಗಿರಬಹುದು ಎಂದು ಕಾಣುತ್ತದೆ.

"ಅವರ್ಯಾರಪ್ಪ ಭಾವೀ ಚೀಫ್ ಮಿನಿಸ್ಟರು?"

"ನೀನು ಬೆಳಗ್ಗೆ ಪೇಪರ್ ನೋಡಲಿಲ್ಲವೊ?"

"ನೋಡಿದೆ, ಆದ್ರೆ ಅದ್ರಲ್ಲಿ ಭಾವೀ ಚೀಫ್ ಮಿನಿಸ್ಟರ ವಿಚಾರ ಏನೂ ಇರಲಿಲ್ಲವಲ್ಲ."

"ನೀನು ಪೇಪರ್ ದೂರದಿಂದ ನೋಡಿದೆಯೋ, ಅಥವಾ ಓದಿ ನೋಡಿದೆಯೋ?"

"ಓದಿಯೇ ನೋಡಿದೆ ಕಣಯ್ಯಾ"

"ಬಹುಶಃ ಪೇಪರ್ ಓದುತ್ತಿರುವಾಗ ನಿನ್ನ ಕಣ್ಣು ಸಮ ಇರಲಿಲ್ಲ ಎಂತ ಕಾಣುತ್ತದೆ ಅಥವಾ ನಿನ್ನ ಬುದ್ಧಿಸ್ಥಿಮಿತ ಇರಲಿಲ್ಲವೋ ಏನೋ?"

"ಕಣ್ಣೂ ಸರಿಯಾಗಿತ್ತು, ಬುದ್ಧಿನೂ ನೆಟ್ಟಗಿತ್ತು. ವಿಷಯ ಏನು ಹೇಳಬಾರ್ದ್ವ?"

"ಅಲ್ಲವೋ ಬಕರಾ, ದಾಮೋದರ ಕಾಂಗ್ರೆಸ್ ಪ್ರೆಸಿಡೆಂಟ್ ಆಗಿ ಎಲೆಕ್ಟ್ ಆದ ಸಮಾಚಾರ ಪೇಪರಿನಲ್ಲಿ ಹೆಡ್ ಲೈಲಿನಲ್ಲಿ ಇದ್ದಿತಲ್ಲವೋ?"

"ಹೌದು, ನೋಡಿದೆ ಆದರೆ, ಫ್ಯೂಚರ್ ಚೀಫ್ ಮಿನಿಸ್ಟರ ವಿಚಾರ ಅದರಲ್ಲೆಲ್ಲಿತ್ತೋ ಮುಟ್ಠಾಳ?"

"ನಾನು ಮುಟ್ಠಾಳನೋ, ನೀನೊ? ಕಾಂಗ್ರೆಸ್ ಪ್ರೆಸಿಡೆಂಟ್ ಆದ ಮೇಲೆ ಅದರ ನೆಕ್ಸ್ಟ್ ಸ್ಟೆಪ್ಪು ಮುಖ್ಯಮಂತ್ರಿ ಅಲ್ಲವೋ? ನಿರಂಜನದಾಸರು, ದಿಲೀಪಚಂದ್ರ, ದುರ್ಗಾದಾಸರು, ಇವರೆಲ್ಲಾ ಇದೇ ಕ್ರಮದಲ್ಲಿ ತಾನೇ ಮುಖ್ಯಮಂತ್ರಿಗಳಾಗಿ ಬಂದದ್ದು? ಹಾಗೇಯೇ ಈಗಲೂ ಸಹ ದಾಮೋದರ ಚೀಫ್ ಮಿನಿಸ್ಟರಾಗುವುದು. ನೆಕ್ಸ್ಟ್ ಇಯರಲ್ಲವೇ ಜನರಲ್ ಎಲೆಕ್ಷನ್ನು? ಆ ಎಲೆಕ್ಷನ್ನಿಗೆ ಟಿಕೆಟ್ ಎನ್ನುವ ವರ ನೀಡುವ ದೇವತೆ ದಾಮೋದರ ಅಲ್ಲವೋ? ಅವನಿಗೆ ಬೇಕಾದವರಿಗೆಲ್ಲಾ ಟಿಕೆಟ್ ಕೊಡುತ್ತಾನೆ. ಟಿಕೆಟ್ ಪಡೆದವರು ಅವನನ್ನೇ ಚೀಫ್ ಮಿನಿಸ್ಟರ್ ಮಾಡುತ್ತಾರೆ. ಇಷ್ಟು ಗೊತ್ತಾಗಲಿಲ್ಲವೋ ನಿನ್ನ ತೋರ ಬುದ್ಧಿಗೆ?"

"ಆ... ಇಗ ಅರ್ಥವಾಯಿತಮ್ಮಾ, ಅರ್ಥವಾಯಿತು. ಅಲ್ಲಯ್ಯಾ ಆ ಬಡ್ಡೀಮಗ ದಾಮೋದರ ಮುಖ್ಯಮಂತ್ರಿ ಆಗೋದು ಅಂದ್ರೆ ಎಲ್ಲಾರು ಉಂಟೆ? ಅವ ಕಳ್ಳರ ಗುರು. ಕಳ್ಳಸಾರಾಯಿ ಮಾರಿ ಯಾರ್ಯಾರಿಗೋ ಟೋಪಿ ಹಾಕಿದ ಕದೀಮ. ಅಂತವನ್ನ ಜೈಲಿಗೆ ಹಾಕೋದು ಬಿಟ್ಟು ಈ ಕಾಂಗ್ರೆಸ್ ಘಟಿಂಗರೆಲ್ಲಾ ಸೇರಿ ಕಾಂಗ್ರೆಸ್ ಪ್ರೆಸಿಡೆಂಟ್ ಮಾಡಿ ಕೂಡಿಸಿದ್ರಲಯ್ಯಾ. ಏನು ಹೇಳಬೇಕು?"

"ಹೇಳುವುದು ಇಲ್ಲ ಕೇಳುವುದು ಇಲ್ಲ. ಮುಂದೆ ಅವನೇ ನಮಗೆ ಚೀಫ್ ಮಿನಿಸ್ಟರ್. ನಾನು ಬೇಕಾದರೆ ಬೆಟ್ಟು ಮಾಡುತ್ತೇನೆ."

"ಆ ಲೋಫರ್ ಚೀಫ್ ಮಿನಿಸ್ಟರಾದರೆ ಅವನಿಗೆ ನಾವೆಲ್ಲಾ ಸಲಾಮು ಹೊಡೆಯ ಬೇಕಲ್ಲಯ್ಯಾ?.... ಎಂಥಾ ಕಾಲ ಬಂತಪ್ಪಾ"

"ನಿನಗೆ ಸರ್ಕಾರಿ ಕೆಲಸ ಬೇಕೆಂದರೆ ಸಲಾಮೂ ಹೊಡೆಯಬೇಕು, ಭಕ್ತೀ ಸಹ ತೋರಿಸಬೇಕು. ಮಂತ್ರಿಯಾದವರಿಗೆ; ಸಭ್ಯತೆ, ಸತ್ಯಸಂಧತೆ ಮುಂತಾದ ಸದ್ಗುಣ ಇರಲೇಬೇಕಂತ ಯಾವ ಕಾನೂನಿನಲ್ಲಿ ಉಂಟು ಹೇಳು? ದಾಮೋದರ ಆದರೂ ಚಿಂತೆ ಇಲ್ಲ. ಅವನ ಜನರಲ್ ಸೆಕ್ರೆಟರಿ ಶಂಭು ಬಂದರೆ ನಾವು ಏನು ಮಾಡುವ ಹಾಗುಂಟು?"

" ಆ ಧೂರ್ತನೂ ಮಂತ್ರಿಯಾಗ್ತಾನೆ ಅಂತಿಯಾ....?"

"ಜನರಲ್ ಸೆಕ್ರೆಟರಿ ಆದ ಬಳಿಕ ಮಂತ್ರಿಯಾಗುವುದರಲ್ಲಿ ಏನು ಆಶ್ಚರ್ಯ ಉಂಟು.?"

"ಅಲ್ಲಯ್ಯಾ.... ಶಂಕರು, ನಾವು ಬಡ ಗುಮಾಸ್ತರು, ಹೊಟ್ಟೇಗೆ ಸಾಲ್ದೆ ನಾಕಾಣೆ ಎಂಟಾಣೆ ತಗೊಂಡ್ರೆ ಜನ ಬಾಯಿಬಡ್ಕೊಳ್ತಾರೆ. ದಾಮೋದರನಂತಾ ಶಂಭುನಂತಾ ಲಂಚಕೋರರು ಅಧಿಕಾರಕ್ಕೆ ಬಂದರೆ ಯಾರೂ ಏನೂ ಮಾತಾಡೋದೆ ಇಲ್ಲವಲ್ಲಯ್ಯಾ?"

"ಅಂತವರಿಗೆ ನಮ್ಮ ಜನ ಹೂಮಾಲೆ ಹಾಕಿ ಮೆರವಣಿಗೆ ಮಾಡಿಸುತ್ತಾರೆ; ಪೇಪರಿನವರು ಅವರನ್ನು ಹಾಡಿ ಹೊಗಳುತ್ತಾರೆ. ಹ್ಯಾಗಿದೆ ಗೊತ್ತುಂಟೊ?"

"ಇದಕ್ಕೆಲ್ಲಾ ರೆಮಿಡಿ ಏನಯ್ಯಾ?"

"ಭಗವಂತ ಕಣ್ಣು ಬಿಡಬೇಕು."

"ಭಗವಂತ ಕಣ್ಣು ಮುಚ್ಚಿದ್ದಾನೆ ಅನ್ನು. ಇರಬಹುದು. ಈ ಅಸಹ್ಯ ನೋಡಲಾರ್ದೆ ಭಗವಂತ ಕಣ್ಣುಮುಚ್ಚಿಕೊಂಡಿದ್ರೂ ಮುಚ್ಕೊಂಡಿರಬಹ್ದು. ಹೋಗಲಿ ಬಿಡು, ನಾನು ನೀನೂ ಬಡ ಗುಮಾಸ್ತರು. ಏನ್ ತಾನೆ ಮಾಡೋಕೆ ಸಾಧ್ಯ. ಹಾಗಂತ ನಮ್ಮ ಸಾಹೇಬರು ದಾಮೋದರನ ಭೇಟಿಗೆ ಹೋಗಿರಬಹುದು ಅಂತ ಹೇಳಿದಲ್ಲಾ ಶಂಕರೂ,..... ಯಾಕೆ ಹೋಗಿರಬಹುದು?"

"ಮತ್ಯಾಕೆ, ಪಾಕೆಟ್ಟು ಮಾಡಲಿಕ್ಕೆ ನಮ್ಮ ಸಾಹೇಬರು ಬೆಹನೂರ್ ಪ್ರಾಜೆಕ್ಟಿನಲ್ಲಿ ಎಕ್ಸಿಕ್ಯುಟೀವ್ ಇಂಜಿನಿಯರ್ ಆಗಿದ್ದಾಗ ಬ್ಹಾಳಾ ಲೂಟಿ ಮಾಡಿದ್ದರಂತೆ. ಆಗ ದೀಲೀಪ್ ಚಂದ್ರ ಚೀಫ್ ಮಿನಿಸ್ಟರ್. ಈ ತೋಳಕ್ಕೆ ಸರಿಯಾದ ಆ ತೋಳ. ಈ ತೋಳ ತಿಂದದ್ದನ್ನೆಲ್ಲಾ ಆ ತೋಳ ಮುಚ್ಚಿಹಾಕಿತ್ತು. ದುರ್ಗಾದಾಸರು ಮುಖ್ಯಮಂತ್ರಿಯಾದ ಮೇಲೆ ವಿಚಾರ ಬಯಲಿಗೆ ಬಂತು. ಅವರು ನಮ್ಮ ಸಾಹೇಬರ ಮೇಲೆ ಎನ್‌ಕ್ವೈಯರಿ ಶುರು ಮಾಡಿಸಿದ್ದಾರೆ. ಅದಕ್ಕೆ ಫ್ಯೂಚರ್ ಭಾವೀ ಚೀಫ್ ಮಿನಿಸ್ಟರನ್ನ ಪಾಕೆಟ್ ಮಾಡಿಕೊಂಡರೆ ಲಾಭವಲ್ಲವೊ?"

"ಇರಬಹುದು, ಇರಬಹುದು ನಮ್ಮ ಸಾಹೇಬರು ದಾಮೋದರನ ಪಾಲಿಟಿಕ್ಸ್‌ಗೆ ನಾಲ್ಕೈದು ಸಾವಿರ ರೂಪಾಯಿ ಕೊಟ್ರೂ ಕೊಡಬಹುದು. ಬೇಕಾದಷ್ಟು ಹೊಡೆದು ಕೂಡಿಟ್ಟಾರೆ,"

ಅಷ್ಟರಲ್ಲಿ ಕಛೇರಿಯ ಹೊರಭಾಗದಲ್ಲಿ ಸಾಹೇಬರ ಕಾರಿನ ಹಾರನ್ ಶಬ್ದವಾಗುವುದನ್ನು ಕೇಳಿದ ಶಂಕರನಾರಾಯಣ ಕಿಟಕಿ ಇಣಿಕಿನೋಡಿ "ಹೌದ ಸುಂದರೂ, ಸಾಹೇಬರು ಬಂದರು ಮಾರಾಯ, ಬ್ಹಾಳಾ ಹಸನ್ಮುಖಿಗಳಾಗಿ ಚಿತ್ತೈಸಿದ್ದಾರೆ. ದಾಮೋದರನ ಫೇವರ್ ಸಿಕ್ಕಿರುವಂತೆ ತೋರುತ್ತದೆ. ಇನ್ನು ಮಾತು ನಿಲ್ಲಿಸುವ," ಎಂದು ಹೇಳಿ ಕಛೇರಿಯ ದಾಸ್ತಾವೇಜುಗಳನ್ನು ಮೇಜಿನ ಮೇಲೆ ಹರಡಿಕೊಂಡು ಕೆಲಸದಲ್ಲಿ ಮಗ್ನನಾದವಂತೆ ನಟಿಸಿದನು. ಸುಂದರೇಶನೂ ಅದೇ ರೀತಿ ನಟಿಸಲಾರಂಭಿಸಿದನು.

# ೪. ದಿಗ್ಭ್ರಮೆ

ದಾಮೋದರನು ಪ್ರದೇಶ ಕಾಂಗ್ರೆಸ್ ಅಧ್ಯಕ್ಷನಾದ ಮೇಲೆ ಹೇಮಾವತಿ ರಾಜ್ಯದ ರಾಜಕಾರಣವು ದಿನೇ ದಿನೇ ಕಲುಷಿತವಾಗುತ್ತಿತ್ತು. ಅಹಿತ ಪೈಪೋಟಿಯ ಪ್ರವಾಹ ಎಲ್ಲೆಮೀರಿ ಹರಿಯುತ್ತಿತ್ತು. ಶಂಭು ದಾಮೋದರರು ರಾಜ್ಯದ ಎಲ್ಲಾ ಕಡೆಗಳಲ್ಲಿಯೂ ತಮ್ಮ ವರ್ಚಸ್ಸನ್ನು ಬೆಳೆಸುವ ಸಲುವಾಗಿ ಸಕಲ ಪ್ರಯತ್ನಗಳನ್ನೂ ಮಾಡುತ್ತಿದ್ದರು. ದಿನಗಳು ಕಳೆದಂತೆಲ್ಲಾ ಪ್ರದೇಶ ಕಾಂಗ್ರೆಸ್ಸಿಗೂ ಸರ್ಕಾರಕ್ಕೂ ಭಿನ್ನಾಭಿಪ್ರಾಯ ಬೆಳೆಯ ತೊಡಗಿತ್ತು. ಬಿನ್ನಾಭಿಪ್ರಾಯ ಹೆಚ್ಚಾದಂತೆಲ್ಲಾ ದುರ್ಗಾದಾಸರ ಮೇಲೆ ಅಪಪ್ರಚಾರವೂ ಹೆಚ್ಚಾಗುತ್ತಾ ಬಂದಿತ್ತು. ಶಂಭು, ಗೋಬೆಲ್ಸ್ ಮಾದರಿಯಲ್ಲಿ ರಾಜ್ಯದ ಮೂಲೆ ಮೂಲೆಗಳಲ್ಲೂ ದುರ್ಗಾದಾಸರ ವಿರುದ್ಧ ಜನರನ್ನು ಎತ್ತಿ ಕಟ್ಟುವ ಕಾರ್ಯದಲ್ಲಿ ತೊಡಗಿದನು.

ಮಹೋದರನ ಪತ್ರಿಕೆಯು ಮೊದಲೇ ದುರ್ಗಾದಾಸರ ಮೇಲೆ ವಿಷದ ಕಿಡಿಗಳನ್ನು ಕಾರುತ್ತಿತ್ತು. ದಾಮೋದರನು ಅಧ್ಯಕ್ಷನಾದ ಮೇಲೆ ಆ ಕಿಡಿಯು ಉರಿಯುವ ಜ್ವಾಲೆಯೇ ಆಗಿತ್ತು. ದುರ್ಗಾದಾಸರ ಅಪನಿಂದೆಗಾಗಿಯೇ ಮಹೋದರನು ತನ್ನ ಪತ್ರಿಕೆಯನ್ನು ಮೀಸಲಾಗಿಟ್ಟಿದ್ದನು. ಅಧ್ಯಕ್ಷ ಚುನಾವಣೆಯಾದ ಮೇಲೆ ಶಂಭುವಿನ ಸಲಹೆಯಂತೆ ಸಹ ಒಂದು ದಿನಪತ್ರಿಕೆಯನ್ನು ಹೊರಡಿಸುತ್ತಿದ್ದನು. ದಾಮೋದರನನ್ನೂ, ಶಂಭುವನ್ನೂ ಹೊಗಳುವುದು ದುರ್ಗಾದಾಸರನ್ನು ತೆಗಳುವುದು ಆ ಪತ್ರಿಕೆಯ ಧ್ಯೇಯವಾಗಿತ್ತು. ಇಷ್ಟೂ ಸಾಲದೆ ಶಂಭು ಎಲ್ಲಾ ಜಿಲ್ಲೆಗಳಲ್ಲೂ ದುರ್ಗಾದಾಸರ ಪ್ರಭಾವವನ್ನು ತಗ್ಗಿಸಲು ಮತ್ತು ಆರು ಕಾಸುಗಳ ಪುಡಿ ಪತ್ರಿಕೆಗಳನ್ನು ಹೊರಡಿಸುವ ಏರ್ಪಾಟು ಮಾಡಿದ್ದನು.

ಸಮಯ ಸನ್ನಿವೇಶಗಳನ್ನು ಉಪಯೋಗಿಸಿಕೊಂಡು ಶಂಭು ಸ್ವತಃ ದುರ್ಗಾದಾಸರ ಮೇಲೆ ಪಿಸುಮಾತಿನ ಅಪಪ್ರಚಾರವನ್ನು ಕೈಗೊಂಡಿದ್ದನು. ಸಣ್ಣ ಪುಟ್ಟ ಕೂಟಗಳಲ್ಲಿ "ನಮ್ಮಚಿಕ್ಕಪ್ನ ಗುಟ್ಟು ನಂಗೊತ್ತಿಲ್ಲೇನು . ಸಣ್ಣ ಪುಟ್ಟದ್ದಕ್ಕೆ ಕೈ ಹಾಕೋದಿಲ್ಲ. ದೊಡ್ಡ ದೊಡ್ಡ ಐಟಮ್ಮು ಸಿಕ್ರೆ ಬಿಡೂದಿಲ್ಲ. ನಮ್ಮ ಚಿಕ್ಕಿ ಹತ್ರ ಏನಿಲ್ಲಾಂದ್ರೂ ಐದಾರು ಲಕ್ಷ ರೂಪಾಯಿ ಬೆಳ್ಳಿ ಬಂಗಾರಾನೇ ಅದೆ. ನಾನವರ ಮನೇಲೆ ಇದ್ನಲ್ಲ," ಎಂದು ದುರ್ಗಾದಾಸರ ಸಚ್ಚರಿತ್ರೆಯ ಹಾಲಿಗೆ ಹುಳಿಯನ್ನು ಹಿಂಡುತ್ತಿದ್ದನು.

ಶಂಭು ದುರ್ಗಾದಾಸರ ಮನೆಯಲ್ಲಿದ್ದಿದ್ದೂ ನಿಜ; ದಾಸರು ಅವನ ಚಿಕ್ಕಪ್ಪನಾಗಿದ್ದದ್ದೂ ನಿಜ. ಆದ್ದರಿಂದ ಅವನ ಮಾತನ್ನು ಕೇಳಿದ ಜನರು ಅವನ ಮಾತು ನಿಜವಿದ್ದರೂ ಇರಬಹುದೆಂದು ಭಾವಿಸುತ್ತಿದ್ದರು. ಇವೆಲ್ಲಾ ಕಾರಣಗಳಿಂದ ಮುಖ್ಯಮಂತ್ರಿ ಪದವಿಯು ದುರ್ಗಾದಾಸರ ಪಾಲಿಗೆ ಮುಳ್ಳಿನ ಹಾಸಿಗೆಯಾಗಿ ಪರಿಣಮಿಸುತ್ತಾ ಬಂದಿತ್ತು.

ಅಧ್ಯಕ್ಷರ ಚುನಾವಣೆಯಾದ ನಂತರ ರಾಜ್ಯದ ಕಾಂಗ್ರೆಸ್ ರಾಜಕಾರಣಿಗಳು ರಾಜಕಾರಣದ ಗಾಳಿ ಎತ್ತ ಬೀಸುತ್ತದೆ ಎಂಬುದನ್ನು ಅರಿತವರಾಗಿ ತಮ್ಮ ನಿಲುವು ಒಲವುಗಳನ್ನು ನಿಧಾನವಾಗಿ ಬದಲಾಯಿಸ ತೊಡಗಿದರು. ಮುಂದೆ ನಡೆಯಲಿದ್ದ ಸಾರ್ವತ್ರಿಕ ಚುನಾವಣೆಯಲ್ಲಿ ಕಾಂಗ್ರೆಸ್ಸಿನ ಪರವಾಗಿ ಸ್ಪರ್ಧಿಸುವ ಉಮೇದುವಾರರನ್ನು ಆರಿಸುವ ಕಾಂಗ್ರೆಸ್ ಚುನಾವಣಾ ಸಮಿತಿಗೆ ಸೇರಿದ್ದೆಂಬುದನ್ನೂ, ಆ ಸಮಿತಿಯ ರಚನೆ ಮತ್ತು ಅದರ ತೀರ್ಮಾನಗಳಲ್ಲಿ ಶಂಭು ದಾಮೋದರರ ಪಾತ್ರ ಪ್ರಧಾನವಾಗಿರುತ್ತದೆ ಎಂಬುದನ್ನೂ ಆ ರಾಜಕಾರಣಿಗಳು ಗಮನಿಸಿದ್ದರು. ಈ ಕಾರಣದಿಂದ ರಾಜ್ಯದ ಆದ್ಯಂತ ಚುನಾಯಿತ ಸಂಸ್ಥೆಗಳಲ್ಲಿ ಸದಸ್ಯರಾಗಿದ್ದವರೂ ಮುಂದೆ ಸದಸ್ಯರಾಗಿದ್ದವರೂ, ಮುಂದೆ ಸದಸ್ಯರಾಗಲು ಹವಣಿಸುತ್ತಿದ್ದವರೂ ಮೆಲ್ಲಮೆಲ್ಲಗೆ ಶಂಭು ದಾಮೋದರರ ಬಳಿ ಸುಳಿದಾಡತೊಡಗಿದರು.

ಅಧಿಕಾರದಲ್ಲಿರುವವರ ಬಾಲ ಬಡುಕರಾಗಿ ಸದಾ ಅವರ ಪರಾಕುಗಳನ್ನು ಹೇಳಿಕೊಂಡು, ಅವರಿಂದ ಲೈಸನ್ಸ್ ಪರ್ಮಿಟ್, ಕಾಂಟ್ರಾಕ್ಟ್, ಮುಂತಾದ ಅನುಗ್ರಹಗಳನ್ನು ಪಡೆಯುತ್ತಿದ್ದ ಜನರು ಹೊಸದಾಗಿ ಕಾಂಗ್ರೆಸ್ಸಿನ ಅಧಿಕಾರ ಗದ್ದುಗೆಯನ್ನೇರಿದ ಶಂಭು ದಾಮೋದರರಿಂದ ಮುಂದೆ ತಮಗೆ ಅನುಗ್ರಹವು ದೊರಕಬಹುದೆಂಬ ಆಸೆಯಿಂದ ಸ್ವಯಂ ಪ್ರೇರಿತರಾಗಿ ಶಂಭುವಿಗೂ, ದಾಮೋದರನಿಗೂ ಅವರ ರಾಜಕಾರಣಕ್ಕಾಗಿ ಯಥೇಚ್ಛವಾಗಿ ಹಣವನ್ನು ನೀಡುತ್ತಿದ್ದರು. ದುರ್ಗಾದಾಸರ ಅಚ್ಚುಮೆಚ್ಚಿನ ಶಿಷ್ಯರೆನಿಸಿಕೊಂಡು ಅವರನ್ನು ಬಾಯಿತುಂಬಾ ಹೊಗಳುತ್ತಿದ್ದ ಕೆಲವರು ರಾಜಕಾರಣಿಗಳೂ ಸಹ ಕೇವಲ ಮೂರು ನಾಲ್ಕು ತಿಂಗಳುಗಳೊಳಗಾಗಿ ಶಂಭು ದಾಮೋದರರ ಶಿಷ್ಯರಾದರು.

ಸರ್ಕಾರದ ಅಧಿಕಾರವರ್ಗದಲ್ಲಿ ಲಂಚಕೋರರಾಗಿದ್ದ ಅಧಿಕಾರಿಗಳು ದುರ್ಗಾದಾಸರ ಕಟ್ಟುನಿಟ್ಟಿನ ಆಡಳಿತದಿಂದ ಬೇಸತ್ತು ಹೋಗಿದ್ದರು. ಶಂಭು ದಾಮೋದರರು ಅಧಿಕಾರಕ್ಕೆ ಬಂದರೆ ಆ ಕಟ್ಟು ಸಡಿಲವಾಗಿ ತಮ್ಮ ಕೈಗಳನ್ನು ಇಷ್ಟವಿಲ್ಲದ್ದಷ್ಟು ಮುಂದೆ ಚಾಚಬಹುದೆಂಬ ಭಾವನೆಯಿಂದ ಆ ಅಧಿಕಾರಿಗಳು ಅವರಿಬ್ಬರ ಕಿಂಕರರೋಪಾದಿಯಲ್ಲಿ ವರ್ತಿಸುತ್ತಿದ್ದರು. ಅವರಿಬ್ಬರು ಹೇಳಿದುದನ್ನು ಶಿರಸಾವಹಿಸಿ ನಡೆಸಿಕೊಡುತ್ತಿದ್ದರು.

ಹೀಗಾಗಿ ಕೇವಲ ಕೆಲವೇ ತಿಂಗಳುಗಳಲ್ಲಿ ದುರ್ಗಾದಾಸರು ಮುಖ್ಯಮಂತ್ರಿಯಾಗಿದ್ದರೂ ಸಹ, ರಾಜ್ಯದ ರಾಜಕಾರಣದಲ್ಲಿ ಶಂಭು ದಾಮೋದರರ ಕೈವಾಡ ಮತ್ತು ಪ್ರಭಾವಗಳೇ ಹೆಚ್ಚಾಗಿದ್ದವು. ಸಾರ್ವತ್ರಿಕ ಚುನಾವಣೆಗಳಿಗೆ ಇನ್ನು ಕೇವಲ ಏಳೆಂಟು ತಿಂಗಳ ಅವಧಿ ಮಾತ್ರ ಉಳಿದಿತ್ತು. ಮುಂದಿನ ತಿಂಗಳು ರಾಜ್ಯದ ಕಾಂಗ್ರೆಸ್ ಚುನಾವಣಾ ಸಮಿತಿಯ ರಚನೆ ಆಗಬೇಕಾಗಿತ್ತು. ಚುನಾವಣಾ ಸಮಿತಿಗೆ ತಮ್ಮ ಗುಂಪಿನವರನ್ನೇ ಆರಿಸಿ ತರುವುದಕ್ಕಾಗಿ ಶಂಭು ದಾಮೋದರರೂ, ಅವರ ಅನುಯಾಯಿಗಳೂ ನಾನಾ ವಿಧವಾದ ಹಂಚಿಕೆ ಪಿತೂರಿಗಳಲ್ಲಿ ತೊಡಗಿದ್ದರು. ತನ್ನ

ಕುಟಿಲತನದಿಂದ ಅಧ್ಯಕ್ಷ ಪದವಿಯನ್ನು ಗೆದ್ದಿದ್ದ ದಾಮೋದರನಿಗೆ ಈ ಕಾರ್ಯ ಅಸಾಧ್ಯವಾದುದೇನೂ ಆಗಿರಲಿಲ್ಲ.

* * * *

ರಾತ್ರಿ ಹತ್ತು ಗಂಟೆಯ ಸಮಯ. ಶಂಭು ತನ್ನ ಭವನದ ಹೊರ ಭಾಗದಲ್ಲಿ ಶತಪಥ ತಿರುಗುತ್ತಾ ಯಾರನ್ನೋ ನಿರೀಕ್ಷಿಸುತ್ತಿದ್ದನು. ಅವನು ಹೆಚ್ಚು ಹೊತ್ತು ಕಾಯಬೇಕಾಗಿರಲಿಲ್ಲ. ಸ್ವಲ್ಪ ಹೊತ್ತಿನಲ್ಲೇ ದೊಡ್ಡದೊಂದು ಕಾರು ಅವನ ಮನೆಯ ಮುಂದೆ ಬಂದು ನಿಂತಿತು. ದಾಮೋದರನು ಆ ಕಾರಿನಿಂದಿಳಿದನು. ಶಂಭು ಮನೆಗೆ ಬಂದ ಮಿತ್ರನನ್ನು ಸ್ವಾಗತಿಸಿ ತನ್ನ ಏಕಾಂತ ಕೊಠಡಿಗೆ ಕರೆದೊಯ್ದನು. ಧೂರ್ತರಿಬ್ಬರೂ ಆಪ್ತಾಲೋಚನೆಯಲ್ಲಿ ತೊಡಗಿದರು.

"ಏನಯ್ಯಾ ಶಂಭು, ಕೆಲಸ ಕಾರ್ಯ ಎಲ್ಲಾ ಸಲೀಸಾಗಿ ನಮ್ಮ ಪ್ಲಾನ್ ಪ್ರಕಾರ ನಡೀತಾ ಇದೆ ತಾನೆ?"

"ನಾ ಇರಾಗ ನಿಂಗ್ಯಾಕಯ್ಯ ಚಿಂತೆ? ಆ ದಾಸನ ಸಮಾಧಿಗೆ ಎಲ್ಲಾ ಸಿದ್ಧ ಮಾಡೀನಿ. ಮತ್ತೇನು ಸಮಾಚಾರ ಹೇಳು."

"ನಾ ಈಗ ಬಂದಿದ್ದು ಎಲೆಕ್ಷನ್ ಕಮಿಟಿ ವಿಚಾರ ಮಾತಾಡೋಕೇಂತ."

"ಎಲೆಕ್ಷನ್ ಕಮಿಟೀಗೆ ನಮ್ಮ ಕಡೆ ಯಾರಾರರ್ನ ನಿಲ್ಲಿಸ್ಬೇಕೂ ಅಂತ ಮಾಡೀಯ?"

"ನಮ್ಮ ಕಡೆ ಘಟಾನುಘಟಿಗಳೆಲ್ಲಾ ಇದ್ದಾರಲ್ಲ.... ಹೆಮ್ಮೆಾರ, ಕೆಮ್ಮೆಾರ ಜಲೋಧರ, ಗಾಂಢೀವ ವಗೈರೆ. ನಾನೂ ನೀನೂ ಹ್ಯಾಗಿದ್ರೂ ಇದ್ದೇ ಇರ್ತೀವಿ."

"ನಮ್ಮಿಬ್ಬರ ಮನಸ್ಸು ಒಂದೇ ದಾರೀಲಿ ಹೋಗ್ತಾ ಇದೆ ನೋಡು. ನಾನು, ಅದೇ ರೀತಿ ಯೋಚನೆ ಮಾಡ್ತಾ ಇದ್ದೆ."

"ವೈಸ್ ಮೆನ್ ಥಿಂಕ್ ಅಲೈಕ್." ಶಂಭೂ, ನಾನೂ ನೀನೂ ಒಂದೇ ದೋಣೀಲಿ ಕಾಲಿಟ್ಟೀವಿ. ಮುಳುಗಿದ್ರೆ ಇಬ್ಬರೂ ಮುಳುಗ್ತೀವಿ, ದಡ ಸೇರಿದ್ರೆ ಇಬ್ರೂ ಸೇರ್ತೀವಿ. ಬ್ಹಾಳ ಎಚ್ಚರಿಕೆಯಿಂದ ಮುಂದುವರೀಬೇಕು ಗೊತ್ತಾಯ್ತೇನು? ನಾವು ಮಾಡೋದ್ನೆಲ್ಲಾ ಬೇರೇವರಿಂದಲೇ ಮಾಡಿಸ್ಬೇಕು. ನಾವು ಮಾತ್ರ ಬಹಳ ಸಭ್ಯರಂತೆ ತೋರಿಸ್ಕೊಳ್ಬೇಕು. ನಮ್ಮ ಗುಂಪಿಗೆ ನಮಗಿಂತ ಬುದ್ಧಿವಂತರನ್ನ ಯಾರನ್ನು ಸೇರಿಸ್ಲೇಬಾರ್ದು. ಆ ಮಡಿ ಕಾಂಗ್ರೆಸ್‌ನವರಿದ್ದಾರೆ ನೋಡು ಗಾಂಧಿ ಭಕ್ತರು, ಅವರನ್ನ ಮಾತ್ರ ಹತ್ರ ಸೇರಿಸ್ಲೇಬಾರ್ದು. ಏನಾದ್ರೂ ದುಶ್ಚಾಳಿ ಇದ್ದವರಾದ್ರೆ ನಾವ್ ಹೇಳ್ದಾಗೇ ಕೇಳ್ಕೊಂಡು ಬಿದ್ದಿರ್ತಾರೆ. ನಮ್ಜಾತಿ ಜನಗಳಿಗೆ, ನಮ್ಮಿಂದ್ಲೇ ಅವರ ಉದ್ಧಾರ ಅನ್ನೋ ಭಾವನೆ ಬರೂಹಾಗೆ ಮಾಡ್ಬೇಕು."

"ನೀನೂ ಬ್ಹಾಳಾ ಕಿಲಾಡಿ ಕಣಯ್ಯಾ. ನಾನೇ ಕಿಲಾಡಿ ಅಂತ ಮಾಡಿದ್ದೆ. ನೀನು ಕಿಲಾಡಿ ಕಿಟ್ಟ ಕಣಯ್ಯಾ. ಇನ್ನೊಂದು ವಿಚಾರ ನೀ ಮರ್ತೀಯಾಂತ ಕಾಣ್ತದೆ. ಆ ಹೋಂ ಮಿನಿಸ್ಟ್ರು ನಮ್ಮ ಗುಂಪಿಗೇ ಸೇರ್ದಾಗ ಅವನಿಗೆ ಎಲೆಕ್ಷ್ಟ ಕಮಿಟೀಲಿ ಒಂದು ಸೀಟು ಕೊಡ್ತೀವಿ ಅಂತ ಪ್ರಾಮಿಸ್ ಮಾಡಿದ್ವಿ, ಗಾಂಢೀವನ ಬದ್ಲು ಹೋಂ ಮಿನಿಸ್ಟ್ರನ್ನ ನಿಲಿಸ್ಬೇಕು."

"ಹೌದು, ಹೌದು ಮರ್ತಿದ್ದೆ. ನೀ ಜ್ಞಾಪ್ಕ ಮಾಡಿದ್ದು ಒಳ್ಳೇದೇ ಆಯ್ತು. ಪಾಪ ಆ ಹೋಂ ಮಿನಿಸ್ಟ್ರು, ಆ ದಾಸನ ಬಿಟ್ಟು ನಮ್ಮ ಕಡೇಗೆ ಬಂದಾನೆ. ಅದನ್ನ ನಾವ್ ಮರೀಬಾರ್ದು. ಇನ್ನೊಂದು ವಾರದೊಳ್ಗೆ ಕೆಲವು ವ್ಹೆಯಿಕಲ್ಸ್ ಗೊತ್ಮಾಡಿ, ಪಿ.ಸಿ.ಸಿ. ಮೆಂಬರುಗಳನ್ನೆಲ್ಲಾ ಕಾಂಟ್ಯಾಕ್ಟ್ ಮಾಡ್ಬೇಕು. ಅವರವ್ರ ಯೋಗ್ಯತೆಗೆ ತಕ್ಕಂತೆ ಅವರವ್ರ ಮೂಗಿಗೆ ಆಸೆ ತುಪ್ಪ ಸವರ್ಬೇಕು. ಕೆಲವರಿಗೆ ಟಿಕೆಟ್ ಆಸೆ; ಕೆಲವರಿಗೆ ದುಡ್ಡಿನ ಆಸೆ; ಉಳಿದವರಿಗೆ ಬೇರ್ಬೇರೆ ಆಸೆ. ನೀ ಕದೀಮ. ನಿಂಗೇನು ನಾ ಹೇಳ್ಕೊಡಬೇಕೇನು?"

"ಅದೆಲ್ಲಾ ನನಗ್ಬಿಡಪ್ಪ. ನಾನೋಡ್ಕೋತೀನಿ."

"ಏನಯ್ಯಾ ಶಂಭು, ಮನೀಗೆ ಬಂದ ಅತಿಥಿಗಳಿಗೆ ತಿಂಡಿ, ತೀರ್ಥ ಕೊಡೋ ಪದ್ಧತಿ ಏನಾದ್ರೂ ಇಟ್ಕೊಂಡಿದ್ದೀಯೋ ಇಲ್ಲವೋ?"

"ನಿಂಗೇನು ತಿಂಡಿ ಬೇಕೋ, ತೀರ್ಥಬೇಕೋ?"

"ತಿಂಡಿನೂ ಬೇಕು, ತೀರ್ಥನೂ ಬೇಕು"

"ತೀರ್ಥ, ಸ್ಥಳದ್ದು ಬೇಕೋ, ಪರಸ್ಥಳದ್ದು ಬೇಕೋ?"

"ಸ್ಥಳದ ತೀರ್ಥಕ್ಕೆ ನಿನ್ಹತ್ರ ಯಾಕಯ್ಯಾ ಬರ್ಬೇಕ್ ನಾನು."

"ಏ, ಬಾಯ್..... ನೋಡು ಆಲ್ಮೈರಾದಲ್ಲಿ ಮೊನ್ನೆ ತಂದ ಬಾಟ್ಲು ೪ ಇವೆಯಲ್ಲಾ, ತಂತೀ ಸುತ್ತಿದ್ದು. ಎರಡು ತಗೊಂಡ್ಬಾ. ಹಾಗೇ ನಾಲ್ಕು ಸೋಡಾ ಬಾಟ್ಲು ತಗೊಂಡ್ಬಾ. ಹಾಗೇ.... ಅಡಿಗೇವನಿಗೆ ಚಿಕನ್ ಪ್ರಿಪರೇಶನ್ ತರಾಕ್ಕೆ ಹೇಳು," ಎಂದು ಶಂಭು ಹೇಳಿದನು.

ನಿಮಿಷ ಮಾತ್ರದಲ್ಲಿ ಸೇವಕನು ಶಂಭುವಿನ ಅಣತಿಯಂತೆ ಸೀಸೆಗಳನ್ನೂ, ಲೋಟಾಗಳನ್ನೂ ತಂದು ಮೇಜಿನ ಮೇಲಿರಿಸಿದನು. ಅಡುಗೆಯವನು ದಾಮೋದರನಿಗೆ ಸಿದ್ಧಪಡಿಸಿದ್ದ ಭಕ್ಷ್ಯವನ್ನು ತಂದಿಟ್ಟನು.

"ಓಹೋ..... ಇದೆಲ್ಲಯ್ಯಾ ನಿನಗೆ ಸಿಗ್ತು. ಪ್ಯಾರಿಸ್ ಮಾಲು!" ಎಂದು ಹೇಳುತ್ತಾ ದಾಮೋದರ ಮಧ್ಯದ ಸೀಸೆಯ ಮುಚ್ಚಳವನ್ನು ತೆಗೆದನು.

"ವಿದೇಶಿ ಮಾಲು ತರ್ಸೋನು ನೀನೊಬ್ಬನೇ ಅಂತ ಮಾಡಿದ್ದೇನು. ನನಗೂ ತಂದು ಕೊಡೋವ್ರು ಇದ್ದಾರೆ. ಅಲ್ಲಯ್ಯಾ, ನಿನ್ನ ಬಾರ್ ಏನ್ಮಾಡ್ದೆ ದಾಮೋದರ?"

"ನಾನು ಪಿ. ಸಿ. ಸಿ. ಚೀಫ್ ಆದ್ಮೇಲೆ, ನನ್ಗೂ ನನ್ಮಗನಿಗೂ ಪಾರ್ಟೀಷನ್ ಮಾಡದ್ಹಾಗೆ ಮಾಡಿ, ಬಾರ್ ಲೈಸನ್ಸ್ ಅವನ ಹೆಸರಿಗೆ ಟ್ರಾನ್ಸ್‌ಫರ್ ಮಾಡ್ಸಿದ್ದೀನಿ. ಸರೀತಾನೆ?"

"ಸರೀ ಕಣಯ್ಯ. ಅದಕ್ಕೇ ನಿನ್ನನ್ನು ಕಿಲಾಡಿ ಕಿಟ್ಟ ಅಂದದ್ದು ನಾನು" ಸ್ನೇಹಿತರಿಬ್ಬರೂ ಮಧ್ಯರಾತ್ರಿಯವರೆಗೂ ಕಂಠಪೂರ್ತಿ ಮಧ್ಯವನ್ನು ಸೇವಿಸಿ ಒಬ್ಬರನೊಬ್ಬರು ಅಗಲಿದರು.

* * * *

ಮುಖ್ಯಮಂತ್ರಿ ದುರ್ಗಾದಾಸರ ನಿವಾಸ. ಮನೆ ಸಣ್ಣದಾಗಿ ಸರಳ ರೀತಿಯಲ್ಲಿ ಸಜ್ಜುಗೊಳಿಸಿದ್ದರೂ, ಒಪ್ಪವಾಗಿ ಸುಂದರವಾಗಿತ್ತು. ಮನೆಯ ಮುಂದಿದ್ದ ಹೂದೋಟವೂ,

ಸುತ್ತಲಿದ್ದ ಕಿರು ಉದ್ಯಾನವನವೂ ಮನೆಗೆ ಶೋಭೆಯನ್ನಿತ್ತಿದ್ದವು. ಸಂಜೆ ಐದು ಗಂಟೆಯ ಸಮಯ. ದುರ್ಗಾದಾಸರೂ, ಅವರ ಮಂತ್ರಿ ಮಂಡಲದ ಹಿರಿಯ ಮಂತ್ರಿಗಳೂ, ಭಾರ್ಗವದಾಸರೂ ಉದ್ಯಾನವನದ ಒಂದು ಮೂಲೆಯಲ್ಲಿ ಕುಳಿತು ಹಿಂದಿನ ದಿನ ನಡೆದ ಕಾಂಗ್ರೆಸ್ ಚುನಾವಣಾ ಸಮಿತಿಯ ಆಯ್ಕೆಯ ಪರಿಣಾಮವನ್ನು ಕುರಿತು ಮಾತನಾಡುತ್ತಿದ್ದರು.

ಹಿಂದಿನ ದಿನ ನಡೆದ ಚುನಾವಣಾ ಸಮಿತಿಯ ಆಯ್ಕೆಯಲ್ಲಿ ಶಂಭು ದಾಮೋದರರ ಕೈಗೊಂಬೆಗಳಂತೆ ಇದ್ದವರೇ ಹೆಚ್ಚು ಸಂಖ್ಯೆಯಲ್ಲಿ ಆರಿಸಿ ಬಂದಿದ್ದರು. ದುರ್ಗಾದಾಸರ ಗುಂಪಿಗೆ ಸೇರಿದವರ ಪೈಕಿ, ದುರ್ಗಾದಾಸರು ಮತ್ತು ಭಾರ್ಗವದಾಸರು ವಿನಹ ಉಳಿದವರೆಲ್ಲರೂ ಆ ಚುನಾವಣೆಯಲ್ಲಿ ಪರಾಜಿತರಾಗಿದ್ದರು. ಶಂಭು, ದಾಮೋದರರ ಕುಟಿಲೋಪಾಯಗಳ ಮುಂದೆ ದುರ್ಗಾದಾಸರ ಸಾಹಸ ಸಾರ್ಥಕವಾಗಿರಲಿಲ್ಲ. ಚುನಾವಣಾ ಸಮಿತಿಗೆ ನಡೆದ ಚುನಾವಣೆಯ ಫಲಿತಾಂಶದಿಂದ ರಾಜ್ಯದ ರಾಜಕೀಯ ಭವಿಷ್ಯ ಯಾರ ಕೈಯ್ಯಲ್ಲಿದೆಯೆಂಬ ವಿಚಾರ ಸ್ಪಷ್ಟವಾಗಿ ಎಲ್ಲರಿಗೂ ಅರಿವಾಗಿತ್ತು. ದುರ್ಗಾದಾಸರ ಕಡೆಯವರಿಗೆ ಕಾಂಗ್ರೆಸ್ ಟಿಕೆಟ್ ದೊರೆಯುವುದು ದುರ್ಲಭವೆಂದು ರಾಜ್ಯದ ಜನರು ಮನಗಂಡಿದ್ದರು. ದುರ್ಗಾದಾಸರ ಎದೆಗುಂದದಿದ್ದರೂ ಅವರ ಹಿಂಬಾಲಕರನೇಕರು ಕಳೆಗುಂದಿದ್ದರು. ಇನ್ನು ಕೆಲವೇ ತಿಂಗಳುಗಳಲ್ಲಿ ಸಾರ್ವತ್ರಿಕ ಚುನಾವಣೆ ನಡೆಯಬೇಕಾಗಿತ್ತು.

ಆ ದಿನ ಸಂಜೆ ದುರ್ಗಾದಾಸರೂ, ಅವರ ಸ್ನೇಹಿತರೂ ತಮ್ಮ ಮುಂದಿನ ಧೋರಣೆ ಏನೆಂಬುದನ್ನು ನಿರ್ಧರಿಸುವ ಸಲುವಾಗಿ ಉದ್ಯಾನವನದಲ್ಲಿ ಸೇರಿದ್ದರು. ದುರ್ಗಾದಾಸರು ಅರವತ್ತು ವರ್ಷಗಳನ್ನು ದಾಟಿದ್ದರೂ ಧೃಡಕಾಯರಾಗಿದ್ದರು. ಗೌರವ ವರ್ಣದ, ನಿರ್ಮಲ ನೋಟದ, ಅಪೂರ್ವ ವರ್ಚಸ್ಸಿನ ಅವರನ್ನು ನೋಡಿದೊಡನೆ ಯಾರಿಗಾದರೂ ಅವರ ವಿಚಾರದಲ್ಲಿ ಗೌರವ ಮೂಡಿ ಬರುವಂತಿತ್ತು. ಭಾರ್ಗವದಾಸರು ಎಪ್ಪತ್ತು ವರ್ಷಗಳ ವೃದ್ಧರಾಗಿದ್ದರು. ಅವರು ನಿಜವಾದ ಗಾಂಧೀ ಭಕ್ತರೆಂಬುದನ್ನು ಅವರ ವ್ಯಕ್ತಿತ್ವವೇ ಸಾರುತ್ತಿತ್ತು.

ಅಮರಚಂದ್, ದುರ್ಗಾದಾಸರ ಸಂಪುಟದ ಹಿರಿಯ ಸದಸ್ಯರಾಗಿದ್ದರು. ಅವರು ಸೌಮ್ಯ ಸ್ವಭಾವದ ಮಿತ ಭಾಷಿಗಳಾಗಿದ್ದರೂ, ಸಾತ್ವಿಕ ಕೆಚ್ಚು ಕೆರಳಿದಾಗ ಶೂರಾಗ್ರಣಿಯಂತೆ ವರ್ತಿಸತಕ್ಕ ವ್ಯಕ್ತಿ. ಅವರು ಸುರೂಪಿಯಲ್ಲದಿದ್ದರೂ ಅವರು ಮುಖಭಾವ ಸಾತ್ವಿಕ ವರ್ಚಸ್ಸಿನಿಂದ ಹೊಳೆಯುತ್ತಿತ್ತು.

ಪ್ರತಾಪ್ ರಾಜ್, ಹೆಸರಿಗೆ ತಕ್ಕಂತೆ ಪ್ರತಾಪಶಾಲಿಯಾದ ವ್ಯಕ್ತಿ. ಆತನೂ ಸಹ ದುರ್ಗಾದಾಸರ ಸಂಪುಟದಲ್ಲಿ ಸಚಿವನಾಗಿದ್ದನು. ವಯಸ್ಸು ಐವತ್ತು ದಾಟಿದ್ದರೂ ಪ್ರತಾಪರಾಜನು ಜಟ್ಟಿಯಂತೆ ಕಾಣುತ್ತಿದ್ದನು. ಅವನ ಪೌರುಷದ ವ್ಯಕ್ತಿತ್ವ ಅವನ ಮನೋದಾರ್ಢ್ಯವನ್ನು ಸೂಚಿಸುತ್ತಿತ್ತು. ಅಂತರಾಳದಲ್ಲಿ ಸ್ನೇಹ ಮತ್ತು ಸದ್ಭಾವಗಳಿಂದ ಕೂಡಿದ್ದರೂ, ಹೊರ ನೋಟಕ್ಕೆ ಕ್ರೂರಿಯಂತೆ ಕಾಣುತ್ತಿದ್ದನು. ಅವನ ದಿಟ್ಟ ನೋಟವು

ಸಾಮಾನ್ಯ ಜನರಿಗೆ ಭಯವನ್ನು ಹುಟ್ಟಿಸುವಂತಿತ್ತು. ಪ್ರತಾಪ ರಾಜ್ ಇತರರಿಗೆ ಕೇಡೆಣಿಸುವವನಲ್ಲ. ಆದರೆ ಯಾರಾದರೂ ತನಗೆ ಕೇಡೆಣಿಸುವ ಮಾರ್ಗದಲ್ಲಿ ಕಾಲಿಟ್ಟರೆ ಅವರ ಕಾಲುಗಳನ್ನು ಮುರಿಯಲು ಅವನು ಹಿಂಜರಿಯುತ್ತಿರಲಿಲ್ಲ.

ಕುಶಲ ಪ್ರಶ್ನೆಗಳಾದ ಮೇಲೆ ದುರ್ಗಾದಾಸರು ಮಾತನ್ನಾರಂಭಿಸಿ, "ನಿನ್ನೆ ನಡೆದ ಚುನಾವಣೆಯಿಂದ ನನಗಂತೂ ದಿಗ್ಭ್ರಮೆಯಾಗಿದೆ. ಈ ರಾಜ್ಯದ ಕಾಂಗ್ರೆಸ್ ಇಷ್ಟೊಂದು ಅಧೋಗತಿಗೆ ಇಳಿಯುತ್ತದೆಯೆಂದು ನಾನು ಕನಸಿನಲ್ಲಿಯೂ ಕಂಡಿರಲಿಲ್ಲ. ಶಂಭು, ದಾಮೋದರ, ಹೆಮ್ಮೊರ, ಕೆಮ್ಮೊರ ಮುಂತಾದವರು ಚುನಾವಣಾ ಸಮಿತಿಯ ಸದಸ್ಯರಾಗುವುದೆಂದರೆ ಈ ರಾಜ್ಯಕ್ಕೂ ಅವಮಾನ; ಕಾಂಗ್ರೆಸ್ಸಿಗೂ ಅವಮಾನ. ಕಾಂಗ್ರೆಸ್ಸಿನ ಅಧಃಪತನದ ನಾಂದಿ ಎಂದೇ ಹೇಳಬೇಕು. ಇಂದು ನಿರಂಜನದಾಸರು ಬದುಕಿದ್ದರೆ ನಿರಶನ ವ್ರತದಿಂದ ಅಸುವನ್ನು ನೀಗುತ್ತಿದ್ದರು. ಕಳೆದ ಕೆಲವು ತಿಂಗಳುಗಳಿಂದ ಶಂಭು, ದಾಮೋದರರು ನನಗೆ ಹಲವು ವಿಧವಾಗಿ ಕಿರುಕುಳಗಳನ್ನು ಕೊಡುತ್ತಾ ಬಂದಿದ್ದಾರೆ. ನಿನ್ನೆ ನಡೆದ ಚುನಾವಣೆಯ ದೆಸೆಯಿಂದ ಅವರ ಪ್ರಭಾವ, ಪ್ರಾಬಲ್ಯಗಳು ಹೆಚ್ಚಾಗುತ್ತವೆ. ಮುಂದೇನು ಮಾಡಬೇಕೆಂಬುದನ್ನು ನಾವು ನಿರ್ಧರಿಸಬೇಕಾಗಿದೆ," ಎಂದು ನುಡಿದರು.

"ನಾವು ಕೆಲವು ಕಾಲದಿಂದ ಕಾಂಗ್ರೆಸ್ಸಿನ ಭವಿಷ್ಯದ ವಿಚಾರದಲ್ಲಿ ಚಿಂತೆಗೊಳಗಾಗಿದ್ದೇನೆ. ಈಗಿರುವ ಹೊಲಸು ವಾತಾವರಣದಲ್ಲಿ ನಾವು ಚುನಾವಣೆಯಲ್ಲಿ ಭಾಗವಹಿಸಿ, ಅಹಿತ ಪೈಪೋಟಿಯ ಸುಳಿಯಲ್ಲಿ ಸಿಕ್ಕಿ ಹೊಲಸಾಗುವುದಕ್ಕಿಂತ ತಾತ್ಕಾಲಿಕವಾಗಿ ಕೆಲವು ವರ್ಷಗಳು ರಾಜಕಾರಣದಿಂದ ದೂರವಿರುವುದೇ ಸರಿ ಎಂದು ತೋರುತ್ತದೆ," ಎಂದು ಅಮರ ಚಂದ್ ನುಡಿದರು.

"ನನಗೂ ಹಾಗೆಯೇ ಅನ್ನಿಸುತ್ತದೆ. ಆ ಧೂರ್ತರೊಡನೆ ಪೈಪೋಟಿ ನಡೆಸಬೇಕೆಂದರೆ ನಾವು ಅವರಿಗಿಂತಲೂ ಕೆಳಮಟ್ಟಕ್ಕೆ ಇಳಿಯಬೇಕು. ಆ ರೀತಿ ಮಾಡಿದರೆ ನಾವು ಅವರಿಗಿಂತಲೂ ಹೆಚ್ಚಿನ ಧೂರ್ತರಾಗುತ್ತೇವೆ. ಆದ್ದರಿಂದ ಜನರಿಗೆ ಆ ಧೂರ್ತರ ಇತಿಹಾಸ ತಿಳಿಯುವವರೆಗೆ ಕೆಲಕಾಲ ಸುಮ್ಮನಿರುವುದು ಒಳ್ಳೆಯದು," ಎಂದು ಭಾರ್ಗವದಾಸರು ನುಡಿದರು.

"ಭಾರ್ಗವದಾಸರ ಮತ್ತು ಅಮರಚಂದರ ಮಾತುಗಳನ್ನು ಕೇಳಿ ನನಗಂತೂ ಆಶ್ಚರ್ಯವಾಗಿದೆ. ಭಾರ್ಗವದಾಸರು ಸ್ವಾತಂತ್ರ್ಯ ಸಂಗ್ರಾಮದ ಹುಲಿ ಎನಿಸಿಕೊಂಡವರು. ಅಂದು ನಾನಿನ್ನೂ ಹುಡುಗ. ಅವರ ವೀರಾವೇಶದ ಭಾಷಣಗಳನ್ನು ಕೇಳಿ ನಾನು ಅಂದು ಪುಳಕಿತನಾಗಿದ್ದೆ. ಅವರಾಡುತ್ತಿದ್ದ ಮಾತುಗಳು ನನ್ನಲ್ಲಿ ದೇಶಭಕ್ತಿ ಉಕ್ಕಿ ಹರಿಯುವಂತೆ ಮಾಡುತ್ತಿದ್ದುವು. ಇಂದು ಅವರಾಡಿದ ಮಾತುಗಳಿಂದ ಮಂಕು ಹಿಡಿದವನಾಗಿದ್ದೇನೆ. ಭಾರ್ಗವದಾಸರಂತಹ ವೀರರ ಬಾಯಿಂದ ಇಂತಹ ಮಾತುಗಳು ಬರಬಾರದಾಗಿತ್ತು. ಅಮರಚಂದರ ಮಾತುಗಳೂ ಕೂಡ ನನಗೆ ಹಿಡಿಸಲಿಲ್ಲ," ಎಂದು ಪ್ರತಾಪ್‌ರಾಜ್ ಗುಡುಗಿದನು.

" ಪ್ರತಾಪ್, ಜನತೆಗಾಗಿ ನಾವು ರಾಜಕಾರಣದಲ್ಲಿರಬೇಕು. ಇಂದಿನ ಪರಿಸ್ಥಿತಿಯನ್ನು ನೋಡಿದರೆ ಜನತೆಗೆ ನಮ್ಮಂಥವರು ಬೇಕಿಲ್ಲವೆಂದು ತೋರುತ್ತದೆ. ಜನರು ಶಂಭು, ದಾಮೋದರರಂತಹ ವ್ಯಕ್ತಿಗಳನ್ನು ಬಯಸುತ್ತಿರುವಾಗ ನಾವೇಕೆ ರಾಜಕಾರಣದಲ್ಲಿ ಇನ್ನೂ ತೊಳಲಬೇಕು," ಎಂದು ಅಮರ್‌ಚಂದ್ ನುಡಿದರು.

"ಅಮರ್‌ಚಂದ್, ನೀವು ಹೇಳುವುದು ನನಗೆ ಎಳ್ಳಷ್ಟೂ ಅರ್ಥವಾಗುವುದಿಲ್ಲ. ದುರ್ಗಾದಾಸರೂ, ಅವರ ಕಡೆಯವರೂ ರಾಜಕಾರಣದಲ್ಲಿರ ಬಾರದೆಂದು ಜನತೆ ಹೇಳಿಲ್ಲ. ದುರ್ಗಾದಾಸರಿಗೆ ಜನಸಾಮಾನ್ಯರ ಬೆಂಬಲವಿದೆ; ಕಾಂಗ್ರೆಸ್ ಕಾರ್ಯಕರ್ತರ ಸಹಕಾರವಿದೆ; ಕಾಂಗ್ರೆಸ್ ವರಿಷ್ಠರ ಆಶೀರ್ವಾದವಿದೆ. ಇನ್ನೇನು ಬೇಕು?"

"ಪ್ರತಾಪ್, ಇತ್ತೀಚಿನ ರಾಜಕಾರಣದಲ್ಲಿ ದುಷ್ಟರೂ, ಭ್ರಷ್ಟರೂ ಅಟ್ಟಹಾಸದಿಂದ ಮೆರೆಯುತ್ತಿರುವುದಕ್ಕೆ ಜನರೇ ಬಹಳ ಮಟ್ಟಿಗೆ ಕಾರಣವೆಂಬುದನ್ನು ನೀನು ಮರೆತಿರುವಂತೆ ಕಾಣುತ್ತದೆ. ಕಾಂಗ್ರೆಸ್ ವರಿಷ್ಠರಿಗೆ ದುರ್ಗಾದಾಸರ ಮೇಲೆ ವಾತ್ಸಲ್ಯವೇನೋ ಇದೆ. ಆದರೆ ಶಂಭು, ದಾಮೋದರರಿಗೆ ಬಹುಮತವಿದೆಯೆಂಬ ವಿಚಾರ ಅವರಿಗೆ ತಿಳಿದ ಬಳಿಕ ಪರಿಸ್ಥಿತಿ ಬದಲಾವಣೆಯಾಗುತ್ತದೆ."

"ಅಮರ್‌ಚಂದ್, ಇಂದಿನ ಹೊಲಸಿಗೆ ಜನ ಸಾಮಾನ್ಯರನ್ನೇಕೆ ಹೊಣೆ ಮಾಡುವಿರಿ? ಅವರು ನಿಸ್ಸಹಾಯಕರು. ಶಂಭು, ದಾಮೋದರರು ವಾಮ ಮಾರ್ಗದಿಂದ ಕಾಂಗ್ರೆಸ್ ಸಮಿತಿಗಳನ್ನು ಆಕ್ರಮಿಸಿಕೊಂಡರೆ ಜನರೇನು ಮಾಡುತ್ತಾರೆ.?"

"ಪ್ರತಾಪ್, ದಾಮೋದರನು ಅಧ್ಯಕ್ಷನಾದಂದಿನಿಂದ ಈ ರಾಜ್ಯದಲ್ಲಿ ಆಗಿರುವ ಬದಲಾವಣೆಗಳನ್ನು ನೀನು ಗಮನಿಸಿಲ್ಲವೆಂದು ತೋರುತ್ತದೆ. ಶಂಭು, ದಾಮೋದರರು ಅಧಮರೆಂಬುದನ್ನು ಕಾಂಗ್ರೆಸ್ಸಿಗರೂ ಅರಿತಿದ್ದಾರೆ; ಜನರು ಅರಿತಿದ್ದಾರೆ. ಆದರೆ ಅವರು ಹೋದೆಡೆಗಳಲ್ಲೆಲ್ಲಾ ಸಂಭ್ರಮದ ಸ್ವಾಗತಗಳೂ, ವಿಜೃಂಭಣೆಯ ಮೆರವಣಿಗೆಗಳೂ, ವಿಶೇಷ ಔತಣಗಳೂ ದೊರಕುತ್ತಿರುವುದು ನಿನಗೆ ಗೊತ್ತಿಲ್ಲವೇ? ಕೆಲವು ಪತ್ರಿಕೆಗಳು ಆ ಧೂರ್ತರಲ್ಲಿಲ್ಲದ ಸದ್ಗುಣಗಳನ್ನು ಹಾಡಿ ಹೊಗಳುತ್ತಿಲ್ಲವೆ? ಹಿಂದೆ ನಮ್ಮ ಹಿಂಬಾಲಕರಾಗಿದ್ದವರು ಇಂದು ಆ ಧೂರ್ತರ ಬೆನ್ನು ಹಿಡಿದಿರುವುದು ನಿನಗೆ ಗೊತ್ತಿಲ್ಲವೆ? ನಮ್ಮ ಗೃಹ ಮಂತ್ರಿಗಳು ಇಂದು ಏನಾಗಿದ್ದಾರೆ?. ಅವರು ದಾಮೋದರನ ಕಡೆಗೆ ಮೆಲ್ಲಗೆ ಜಾರಿ ಹೋಗಿದ್ದಾರೆ."

"ಅಮರ್‌ಚಂದ್, ಜನ ಸಾಮಾನ್ಯರು ಇಂದೂ ಕೂಡ ದುರ್ಗಾದಾಸರನ್ನು ದೇವರಂತೆ ಕಾಣುತ್ತಾರೆಂಬುದನ್ನು ನೀವು ಮರೆಯಬಾರದು."

"ಹೌದು, ಹೌದು ಪ್ರತಾಪ್ ಜನರೇನು ಮಾಡುತ್ತಾರೆಂಬುದನ್ನು ನಾವು ಅನುಭವ ದಿಂದ ತಿಳಿದಿದ್ದೇವೆ. ಹಣ ಕೊಟ್ಟವರಿಗೆ, ಹೆಂಡ ಕುಡಿಸಿದವರಿಗೆ, ತಮ್ಮ ಓಟನ್ನು ಕೊಡುತ್ತಾರೆ. ನೂರು ಉಪಕಾರಗಳನ್ನು ಪಡೆದವರು, ನೂರೊಂದನೆ ಉಪಕಾರ ದೊರೆಯದಿದ್ದರೆ, ಹಿಂದಿನ ಉಪಕಾರಗಳನ್ನೆಲ್ಲಾ ಮರೆತು, ಉಪಕಾರ ಮಾಡಿದವರ ಮೇಲೆ ತಿರುಗಿ ಬೀಳುತ್ತಾರೆ. ಗೆದ್ದೆತ್ತಿನ ಬಾಲವನ್ನು ಹಿಡಿಯುವ ಜನರನ್ನು ವೃಥಾ ಹೊಗಳಬೇಡಿ"

"ಹಾಗಾದರೆ ಜನರೆಲ್ಲಾ ಕೆಟ್ಟು ಹೋಗಿದ್ದಾರೇನು?"

"ಹಾಡಿದ್ದೇ ಹಾಡೋ ಕಿಸುಬಾಯಿ ದಾಸ ಎನ್ನುವ ಹಾಗೆ, ನೀನು ಪುನಃ ಅದೇ ಪಲ್ಲವಿಯನ್ನು ಹಾಡುತ್ತಾ ಇದ್ದೀಯ. ಅನ್ಯಾಯ ಅಸಡ್ಡಾಳಗಳನ್ನು ಕಂಡು ನಮ್ಮ ರಕ್ತ ಬಿಸಿಯಾಗುವುದೇ ಇಲ್ಲ. ಅಸತ್ಯ, ಅನೀತಿಗಳನ್ನು ನೋಡಿ ಅವರ ಸಾತ್ವಿಕ ಕೆಚ್ಚು ಕೆರಳುವುದೇ ಇಲ್ಲ. ಏನೋ ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ, ಗಾಂಧೀಜಿಯವರ ಕೃಪೆಯಿಂದ ನಮ್ಮ ರಕ್ತ ಸ್ವಲ್ಪ ಬಿಸಿಯಾಗಿತ್ತು. ಈಗ ಅದು ಮತ್ತೆ ತಣ್ಣಗಾಗಿ ಹೇಡಿತನದಿಂದ ಹೆಪ್ಪುಗಟ್ಟಿ ಹೋಗಿದೆ. ನಮ್ಮ ಜನರಿಗೆ ಕ್ಷಾತ್ರಗುಣ ಕಡಿಮೆ; ಸನ್ನಿವೇಶಕ್ಕೆ ಅನುಗುಣವಾಗಿ ನುಸುಳಿಕೊಳ್ಳುವ ಕುಯುಕ್ತಿ ಹೆಚ್ಚು. ಅಧಿಕಾರದಲ್ಲಿದವರನ್ನು ಹೊಗಳಿ, ಅವರಿಂದ ಏನಾದರೂ ಗಿಟ್ಟಿಸಿಕೊಳ್ಳುವುದರಲ್ಲಿ ನಮ್ಮವರು ನಿಸ್ಸೀಮರು."

"ಇನ್ನೂ ಇದೆಯೋ ಮುಗಿಯಿತೋ?"

"ಇನ್ನೂ ಹೇಳುವುದಿದೆ ಕೇಳು. ನಮ್ಮ ದೇಶದ ಇತಿಹಾಸವನ್ನು ಸ್ಮರಿಸಿಕೊ. ಪರಕೀಯರು ನಮ್ಮ ದೇಶದ ಮೇಲೆ ದಂಡೆತ್ತಿ ಬಂದಾಗಲೆಲ್ಲಾ ದೇಶದ್ರೋಹಿಗಳು ಕೆಲವರು ಸ್ವಾರ್ಥ ಸಾಧನೆಗಾಗಿ, ಅಥವಾ ತಮಗಾಗದವರ ಮೇಲಿನ ದ್ವೇಷ ಸಾಧನೆಗಾಗಿ, ಶತ್ರುಗಳೊಡನೆ ಸಾಮಿಲಾಗಿ ಅವರನ್ನು ಸ್ವಾಗತಿಸಿದರು. ಬುದ್ಧಿವಂತರೆನಿಸಿಕೊಂಡಿದ್ದ ಕೆಲವರು ಮೊದಲಿನಿಂದಲೂ ಎಂಜಲಿನ ಆಸೆಗಾಗಿ ಆತ್ಮ ಗೌರವವನ್ನು ತೊರೆದು, ಅಧಿಕಾರದಲ್ಲಿದ್ದವರ ಹೊಗಳುಭಟ್ಟರಂತೆ ವರ್ತಿಸಿದ್ದಾರೆ. ಈ ದೇಶದಲ್ಲಿ ಇಂದೇನು ನಡೆದಿದೆ? ಶತ್ರು ರಾಷ್ಟ್ರದವರು ಈ ದೇಶವನ್ನು ಕಬಳಿಸಲು ಹವಣಿಸುತ್ತಿದ್ದಾರೆ. ನಮ್ಮವರೇ ಕೆಲವರು ಸಿದ್ಧಾಂತದ ಸೋಗಿನಲ್ಲಿ ಶತ್ರು ರಾಷ್ಟ್ರದ ನಿಲುವನ್ನು ಸಮರ್ಥಿಸುತ್ತಿದ್ದಾರೆ. ಇದಕ್ಕಿಂತ ಹೆಚ್ಚಿನ ದೇಶದ್ರೋಹವುಂಟೇ? ನನ್ನನ್ನು ವೃಥಾ ಕೆರಳಿಸಬೇಡ ಪ್ರತಾಪ್."

"ಅಮರಚಂದ್, ನೀವು ನಿಜವಾಗಿಯೂ ನನ್ನನ್ನು ಕೆರಳಿಸಿದ್ದೀರಿ. ಈ ದೇಶದ ಪ್ರೌಢ ಇತಿಹಾಸವನ್ನೂ, ಪುರಾತನ ಸಂಸ್ಕೃತಿಯನ್ನೂ ತುಚ್ಛೀಕರಿಸಿ ಮಾತನಾಡು ತ್ತಿದ್ದೀರಿ. ಪ್ರಪಂಚದ ಅನೇಕ ದೇಶಗಳು ಅನಾಗರೀಕತೆಯ ಮಬ್ಬಿನಲ್ಲಿ ತೊಳಲುತ್ತಿದ್ದಾಗ ನಮ್ಮಲ್ಲಿ ಅತ್ಯುನ್ನತ ನಾಗರೀಕತೆ ಬೆಳಗುತ್ತಿತ್ತೆಂಬುವನ್ನು ನೀವು ಮರೆಯಬಾರದು. ಸ್ವಾತಂತ್ರ್ಯ ಸಂಗ್ರಾಮದ ಕಾಲದಲ್ಲಿ ನಮ್ಮ ಜನರು ಗಾಂಧೀಜೀಯವರು ನಾಯಕತ್ವ ದಲ್ಲಿ ಒಗ್ಗಟ್ಟಾಗಿ ಆಂಗ್ಲೇಯರನ್ನು ಓಡಿಸಲಿಲ್ಲವೇನು? ಈಚೆಗೆ ಪಾಕೀಸ್ಥಾನೀಯರೂ, ಚೀನೀಯರೂ ನಮ್ಮ ದೇಶದ ಮೇಲೆ ದಂಡೆತ್ತಿ ಬಂದಾಗಲೆಲ್ಲ ನಮ್ಮ ಜನರು ಒಟ್ಟಾಗಿ ವೀರಾವೇಶದಿಂದ ಹೋರಾಡಿ ಅವರನ್ನು ಬಡಿದೋಡಿಸಲಿಲ್ಲವೇನು?"

"ಪ್ರತಾಪ್, ನಾನು ಈ ದೇಶದ ಇತಿಹಾಸವನ್ನಾಗಲೀ, ಸಂಸ್ಕೃತಿಯನ್ನಾಗಲಿ ಅಲ್ಲಗಳೆಯಲಿಲ್ಲ. ನಮ್ಮಲ್ಲಿರುವ ನ್ಯೂನತೆಗಳನ್ನು ಪ್ರಸ್ತಾಪಿಸಿದೆ. ಇಂದಿನ ನ್ಯೂನತೆ ಗಳನ್ನು ಮರೆತು, ಹಿಂದಿನ ವೈಭವಗಳನ್ನು ಸ್ಮರಿಸಿಕೊಳ್ಳುವುದು ದೇಶಪ್ರೇಮಿಯ ಲಕ್ಷಣವಲ್ಲ."

ಅದುವರೆಗೆ ಮೌನವಾಗಿ ಕುಳಿತಿದ್ದ ಭಾರ್ಗವದಾಸರು ತಮ್ಮ ಮೌನವನ್ನು ಕೊನೆಗಾಣಿಸಿ, "ಪ್ರತಾಪ್, ನಿನ್ನ ಮತ್ತು ಅಮರ್‌ಚಂದರ ಮಾತುಗಳನ್ನು ಕುತೂಹಲದಿಂದ

ಕೇಳುತ್ತಿದ್ದೆ. ನೀವಿಬ್ಬರೂ ದೀರ್ಘವಾದ ಉಪನ್ಯಾಸಗಳನ್ನೇ ಮಾಡಿದ್ದೀರಿ. ಉಪನ್ಯಾಸದ ಬದಲು ಕಾರ್ಯತಃ ಮುಂದೇನು ಮಾಡಬೇಕೆಂಬುದನ್ನು ಸ್ಪಷ್ಟವಾಗಿ ಮತ್ತು ಸಂಕ್ಷಿಪ್ತವಾಗಿ ಹೇಳಿಬಿಡಿ", ಎಂದು ಪ್ರತಾಪರಾಜನ ಮುಖವನ್ನು ನೋಡಿದರು.

"ಸ್ವಾಮಿ, ಭಾರ್ಗವದಾಸರೇ, ನನ್ನ ಅಭಿಪ್ರಾಯ ಇಷ್ಟೇ. ರಾಜ್ಯದ ಹಿತದೃಷ್ಟಿಯಿಂದ ನಾವು ಆ ದುಷ್ಟರೊಡನೆ ಹೋರಾಡಲೇಬೇಕು; ಅವರು ತಲೆ ಎತ್ತದಂತೆ ಅವರನ್ನು ತುಳಿಯಲೇಬೇಕು."

"ಪ್ರತಾಪ್, ಆ ದುಷ್ಟರೊಡನೆ ಹೋರಾಡುವುದು ಸುಲಭವಲ್ಲ. ಅವರಿಗೆ ಲಾಭಕೋರರ ಮತ್ತು ಲಂಚಕೋರರ ಆಶ್ರಯವಿದೆ; ಪುಂಡು ಪೋಕರಿಗಳ ಸಹಕಾರವಿದೆ. ನಮಗೆ ಯಾವ ಬೆಂಬಲವೂ ಇಲ್ಲ. ಸಾಲದುದಕ್ಕೆ ಈ ರಾಜ್ಯದ ಜನರೂ ನಿಸ್ಸಹಾಯಕರಂತೆ ವರ್ತಿಸುತ್ತಿದ್ದಾರೆ. ಇಂತಹ ಸನ್ನಿವೇಶದಲ್ಲಿ ಏನು ತಾನೆ ಮಾಡಲು ಸಾಧ್ಯ?"

"ಸ್ವಾಮಿ, ನಾವು ನಾಲ್ಕು ವರ್ಷಗಳಿಗೆ ಮೇಲ್ಪಟ್ಟು ಅಧಿಕಾರ ನಡೆಯಿಸಿದ್ದೇವೆ. ಹಣವಿದ್ದವರ ಬೆಂಬಲವನ್ನು ಪಡೆಯಬಾರದೆಂದು ನಮ್ಮ ಮೇಲೆ ಯಾರೂ ಪ್ರತಿಬಂಧಕಾಜ್ಞೆಯನ್ನು ಹೊರಡಿಸಿರಲಿಲ್ಲ. ನಮ್ಮ ಸ್ಥಾನಮಾನಗಳನ್ನುಪಯೋಗಿಸಿಕೊಂಡು ನಮ್ಮ ಬುಡವನ್ನು ಭದ್ರಮಾಡಿಕೊಳ್ಳದಿದ್ದರೆ ಆ ತಪ್ಪು ನಮ್ಮ ಮಂತ್ರಿಗಳದ್ದೇ ಹೊರತು ನಮ್ಮದಲ್ಲ. ನಮ್ಮ ಮುಖ್ಯಮಂತ್ರಿಗಳು ವೇದಾಂತಿಗಳಂತೆ ರಾಜಕಾರಣ ಮಾಡಿದ್ದರಿಂದ ಇಂದು ಅವರೂ, ಅವರ ಹಿಂಬಾಲಕರೂ ವನವಾಸಕ್ಕೆ ಹೋಗುವ ದುರ್ಗತಿ ಬಂದಿದೆ. ಈಗಲೂ ಕಾಲ ಮಿಂಚಿಲ್ಲ. ತಾವೂ, ದುರ್ಗಾದಾಸರೂ ನನಗೆ ಅಪ್ಪಣೆಯನ್ನಿತ್ತರೆ, ಇನ್ನು ಮೂರು ತಿಂಗಳೊಳಗಾಗಿ ವಿರೋಧ ಗುಂಪಿನ ಪುಂಗಿಯನ್ನು ಉಸಿರಾಡದಂತೆ ಮಾಡಬಹುದು."

"ಪ್ರತಾಪ್, ನಿಮ್ಮ ಮುಖ್ಯಮಂತ್ರಿಗಳು ಲಂಚಕ್ಕೆ ಕೈಯೊಡ್ಡಿದ್ದರೆ ಸುಲಭವಾಗಿ ಲಕ್ಷಾಧಿಪತಿಯಾಗಬಹುದಾಗಿತ್ತು. ಗುಂಪು ರಾಜಕಾರಣಕ್ಕಾಗಿ ಕೋಟಿ ರೂಪಾಯಿಗಳನ್ನು ಕೊಡಿಸಬಹುದಾಗಿತ್ತು. ಅವರು ವೇದಾಂತಿಗಳು ನಿಜ. ಅಲ್ಲದೆ ಸಮರ್ಥ ಆಡಳಿತಗಾರರೂ ಹೌದು. ಇಂದಿನ ವಾತಾವರಣದಲ್ಲಿ ಸತ್ಯಸಂಧರು ಎಷ್ಟೇ ಸಮರ್ಥರಾಗಿದ್ದರೂ ನಿಷ್ಪ್ರಯೋಜಕರೆನಿಸಿಕೊಳ್ಳುತ್ತಾರೆ. ತಾವೂ ತಿಂದು, ನಮ್ಮವರಿಗೂ ತಿನ್ನಿಸುವವರು ಗಟ್ಟಿಗರೆನಿಸಿಕೊಳ್ಳುತ್ತಾರೆ. ದೇವರಿಗೂ, ಜನರಿಗೂ ಅಂಜಿ ನಡೆಯುವವರು ಅಂಜುಬುರುಕರೆನಿಸಿಕೊಳ್ಳುತ್ತಾರೆ; ಎಲ್ಲಾ ಬಿಟ್ಟವರು ಧೀರರೆನಿಸಿಕೊಳ್ಳುತ್ತಾರೆ. ಕಾಲಮಹಿಮೆ!"

ಅವರಿಬ್ಬರ ಮಾತಿನ ಮಧ್ಯೆ ದುರ್ಗಾದಾಸರು ಪ್ರವೇಶಿಸಿ, "ಪ್ರತಾಪ್, ವೃಥಾ ಮಾತುಗಳ ಮಳೆಯನ್ನು ಸುರಿಸಿದರೆ ಏನು ಪ್ರಯೋಜನ? ಏನು ಮಾಡಬೇಕೆಂಬುದನ್ನು ಸ್ಪಷ್ಟವಾಗಿ ಹೇಳಿಬಿಡು", ಎಂದರು

"ಸ್ವಾಮಿ ದುರ್ಗಾದಾಸರೇ, ಈ ರಾಜ್ಯದ ಜನತೆ ತಮ್ಮನ್ನು ದೇವರಂತೆ ಆರಾಧಿಸುತ್ತಾ ಇದೆ. ತಮ್ಮಲ್ಲಿ ಅಧಿಕಾರವಿದೆ. ರಾಜ್ಯದ ಕಲ್ಯಾಣಕ್ಕಾಗಿ ಜನ ಸಾಮಾನ್ಯರ ಮೇಲ್ಮೆಗಾಗಿ

ತಮ್ಮನ್ನು ನಂಬಿದವರ ರಕ್ಷಣೆಗಾಗಿ ತಮ್ಮ ಶಕ್ತಿ ಸಾಹಸಗಳನ್ನು ಉಪಯೋಗಿಸಬೇಕೆಂದು ಮನವಿ ಮಾಡುತ್ತಾ ಇದ್ದೇನೆ."

"ಅದೇನು ಮಾಡಬೇಕೆಂಬುದನ್ನು ಹೇಳಪ್ಪಾ".

"ಕಾರ್ಯವಾಸಿ ಕತ್ತೆ ಕಾಲು ಕಟ್ಟು ಎಂಬಂತೆ, ಸಮಯ ಬಂದಾಗ ಎಲ್ಲರ ಸಹಾಯವನ್ನೂ ಪಡೆಯಬೇಕು. ರಾಜಕಾರಣದಲ್ಲಿ ವಿಪರೀತ ಆದರ್ಶವೂ ಸಲ್ಲದು; ಅನಾವಶ್ಯಕ ಬಿಗುಮಾನವೂ ಸಲ್ಲದು. ಕೆಲವು ಕಾರಣಗಳಿಂದ ಕೆಮ್ಮೀರ, ಹೆಮ್ಮೀರ, ಜಲೋದರ, ಮಹೋದರ, ಪಟವಾರ, ಇವರು ತಮ್ಮ ಮೇಲೆ ಕುಪಿತರಾಗಿ ಶಂಭು ದಾಮೋದರರ ಕೂಟಕ್ಕೆ ಸೇರಿದ್ದಾರೆ. ಅವರನ್ನು ನಮ್ಮ ಕಡೆಗೆ ಒಲಿಸಿಕೊಂಡರೆ ನಮ್ಮ ಕಾರ್ಯ ಕೈಗೂಡುತ್ತದೆ. ಅವರಿಗೆ ಬೇಕಾದುದು ಅವರ ಹಿತ; ಜನಹಿತವಲ್ಲ; ಅವರು ಬಯಸುವುದನ್ನು ಅಲ್ಪ ಸ್ವಲ್ಪ ಕೊಟ್ಟರೆ, ಅವರು ತಮ್ಮ ಆಜ್ಞಾಧಾರಕರಾಗುತ್ತಾರೆ. ತಾವು ಮನಸ್ಸು ಮಾಡಬೇಕು."

"ಮನಸ್ಸು ಮಾಡಿ, ಏನು ಮಾಡಬೇಕೆಂಬುದನ್ನು ಹೇಳಿ ಬಿಡು."

"ಹೆಮ್ಮೀರನನ್ನೂ ಕೆಮ್ಮೀರನನ್ನೂ ಕರೆಸಿ, ಅವರಿಬ್ಬರಿಗೂ ಎರಡು ಬೋರ್ಡುಗಳ ಅಧ್ಯಕ್ಷಗಿರಿಯನ್ನು ಕೊಟ್ಟರೆ, ಅವರಿಬ್ಬರೂ ಸುಪ್ರೀತರಾಗುತ್ತಾರೆ. ಜಲೋದರನು ಅವನ ಊರಿನ ಸಮೀಪ ಇಪ್ಪತ್ತು ಎಕರೆ ಭೂಮಿಯನ್ನು ಕೊಡಿಸಿಕೊಡಬೇಕೆಂದು ಈ ಹಿಂದೆ ತಮ್ಮನ್ನು ಪ್ರಾರ್ಥಿಸಿದ್ದನು. ತಾವು ಅವನ ಬೇಡಿಕೆಯನ್ನು ತಿರಸ್ಕರಿಸಿದ್ದರಿಂದ ಅವನಿಗೆ ತಮ್ಮ ಮೇಲೆ ಅಸಮಾಧಾನವಿದೆ. ನಮ್ಮ ರೆವಿನ್ಯೂ ಮಂತ್ರಿಗಳಿಗೆ ಹೇಳಿ ಅವನು ಕೇಳಿದ ಭೂಮಿಯನ್ನು ಕೊಡಿಸಿದರೆ ಅವನು ತೃಪ್ತನಾಗುತ್ತಾನೆ. ಪಟವಾರನು ಆಪೇಕ್ಷಿಸುತ್ತಿರುವ ಇಂಟರ್ ಸ್ಟೇಟ್ ಬಸ್ ಪರ್ಮಿಟ್ ಕೊಡಿಸಿದರೆ ಅವನ ಕೋಪ ಇಳಿಯುತ್ತದೆ. ಮಹೋದರನಿಗೆ ಅವನು ಹಿಂದೆ ಕೇಳಿದ್ದ ಸಿನಿಮಾ ಸೈಟು ಕೊಡಿಸಿದರೆ ಅವನು ತಮ್ಮ ಕಡೆಯವನಾಗುತ್ತಾನೆ. ಇವರೆಲ್ಲರಿಂದ ನಮ್ಮ ಚುನಾವಣಾ ಸಮಿತಿಗೆ ಬಹುಮತ ದೊರೆಯುವುದಲ್ಲದೆ ಮುಂದಿನ ಚುನಾವಣೆಗೆ ಧನ ಸಹಾಯವು ದೊರೆಯುತ್ತದೆ. ನಮ್ಮ ರಾಜ್ಯಭಾರ ಸುಸೂತ್ರವಾಗಿ ಮುಂದುವರಿಯುತ್ತದೆ. ತಾವಾಗಿ ಅವರನ್ನು ಕರೆಯಿಸುವುದು ಬೇಡ. ಅಪ್ಪಣೆ ಮಾಡಿದರೆ ಅವರೇ ತಮ್ಮ ಬಳಿಗೆ ಬರುವಂತೆ ಮಾಡುತ್ತೇನೆ."

"ಪ್ರತಾಪ್, ನಾನು ಒಣ ವೇದಾಂತದ ರಣ ಹೇಡಿಯೂ ಅಲ್ಲ; ಬುದ್ಧಿಯಿಲ್ಲದ ತಿಳಿಗೇಡಿಯೂ ಅಲ್ಲ. ಮನಸ್ಸು ಮಾಡಿದ್ದರೆ ಈ ಹಿಂದೆಯೇ ಅವರೆಲ್ಲರನ್ನು ನನ್ನ ಅನುವರ್ತಿಗಳನ್ನಾಗಿ ಮಾಡಿಕೊಳ್ಳುತ್ತಿದ್ದೆ. ಸ್ವರ್ಗ ಸುಖ ಲಭಿಸುವುದಾದರೂ ಆ ಧೂರ್ತರ ಸಂಪರ್ಕ ನನಗೆ ಬೇಕಾಗಿಲ್ಲ. ಪ್ರಜಾಪ್ರಭುತ್ವದಲ್ಲಿ ಸತ್ಸಂಪ್ರದಾಯಗಳನ್ನು ಅನುಷ್ಠಾನಕ್ಕೆ ತರಬೇಕು. ಅಧಿಕಾರವನ್ನು ಉಳಿಸಿಕೊಳ್ಳುವುದಕ್ಕಾಗಿ ಲಂಚದಿಂದ ಬೆಂಬಲಿಗರನ್ನು ಕೊಳ್ಳುವುದು ಪಾಪಕರ."

"ಸ್ವಾಮಿ ಮುಖ್ಯಮಂತ್ರಿಗಳೇ, ರಾಜಕಾರಣದಲ್ಲಿ ವೇದಾಂತವನ್ನು ಅನುಷ್ಠಾನಕ್ಕೆ ತಂದು, ರಾಜ್ಯಭಾರ ಮಾಡಲು ಜಗತ್ತಿನಲ್ಲಿ ಇದುವರೆಗೆ ಯಾರಿಗೂ ಸಾಧ್ಯವಾಗಿಲ್ಲ. ದ್ವಾಪರ ಯುಗದಲ್ಲಿಯೇ ಅವತಾರ ಪುರುಷನಾದ ಶ್ರೀ ಕೃಷ್ಣನು ಶಕ್ತಿಯ ಜೊತೆಗೆ ಯುಕ್ತಿಯನ್ನೂ, ಮಂತ್ರದ ಜೊತೆಗೆ ತಂತ್ರವನ್ನೂ ಅಳವಡಿಸಿ ಕಾರ್ಯಸಾಧನೆ ಮಾಡಿದನು. ತ್ರೇತಾಯುಗದಲ್ಲಿ ತನ್ನ ಕಾರ್ಯಸಾಧನೆಗಾಗಿ ಶ್ರೀರಾಮಚಂದ್ರನು ಮೋಸದಿಂದ ವಾಲಿಯನ್ನು ಕೊಲ್ಲಲಿಲ್ಲವೇನು? ಪೂರ್ವ ಕಾಲದಲ್ಲಿ ಸಮುದ್ರಯಾನ ಮಾಡುತ್ತಿದ್ದ ನಾವಿಕರು ತಿಮಿಂಗಿಲಗಳ ಅಪಾಯವನ್ನು ತಪ್ಪಿಸಿಕೊಳ್ಳಲಿಕ್ಕಾಗಿ ಆಗಾಗ ತಿಮಿಂಗಿಲಗಳಿಗೆ ತೌಡಿನ ಮೂಟೆಗಳನ್ನು ಉರುಳಿಸುತ್ತಿದ್ದರಂತೆ. ಆ ಮೂಟೆಗಳನ್ನು ತಿನ್ನುವ ಭರದಲ್ಲಿ ತಿಮಿಂಗಿಲಗಳು ನಾವೆಯ ತಂಟೆಗೆ ಬರುತ್ತಿರಲಿಲ್ಲವಂತೆ. ನಮ್ಮ ಅಧಿಕಾರದ ನಾವೆ ಮುಂದೆ ಸಾಗಬೇಕಾದರೆ ಈ ನರ ತಿಮಿಂಗಿಲಗಳಿಗೆ ಆಗಾಗ ತಿನಿಸನ್ನು ನೀಡಬೇಕಾಗುತ್ತದೆ."

"ಪ್ರತಾಪ್, ರಾಜಕಾರಣದ ದೃಷ್ಟಿಯಿಂದ ನೀನು ಹೇಳುವುದರಲ್ಲಿ ಸ್ವಲ್ಪ ಮಟ್ಟಿಗೆ ಸತ್ವವಿದೆ. ಆದರೆ ಆ ಪಾಪಿಗಳ ಬೆಂಬಲದಿಂದ ಅಧಿಕಾರದಲ್ಲುಳಿಯಬೇಕೆಂಬ ಹಂಬಲ ನನಗಿಲ್ಲ."

"ಹಾಗಾದಾರೆ ಆ ದೃಷ್ಟರು ರಾಜಕಾರಣದ ಹೆಸರಿನಲ್ಲಿ ಮಾಡುತ್ತಿರುವುದೆಲ್ಲವನ್ನೂ ನೋಡುತ್ತಾ ಹೇಡಿಗಳಂತೆ ತೆಪ್ಪಗಿರಬೇಕೇನು?"

"ಹೇಡಿಗಳಂತೆ ತೆಪ್ಪಗಿರಬೇಕೆಂದು ನಾನು ಹೇಳಲಿಲ್ಲ. ನನ್ನಂತಹವರೂ, ನಿನ್ನಂತಹವರೂ ಹೇಡಿಗಳಾಗಬಾರದು. ನಾನು ಆ ದುಷ್ಟರೊಡನೆ ಹೋರಾಡಲು ಸದಾ ಸಿದ್ಧನಾಗಿದ್ದೇನೆ"

"ಅದು ಹೇಗೆ ಹೋರಾಡುವಿರಿ?"

"ಗಾಂಧೀ ಮಾರ್ಗದಲ್ಲಿ ಹೋರಾಡುತ್ತೇನೆ."

"ಗಾಂಧೀಭಕ್ತರೇ ಗಾಂಧೀ ಮಾರ್ಗವನ್ನು ಅಳಿಸಿಹಾಕಿದ್ದಾರೆ. ಬುದ್ಧನ ತತ್ವಗಳಿಗೆ ಸಂಭವಿಸಿದ ಗತಿಯೇ ಇಂದು ಗಾಂಧೀ ತತ್ವಗಳಿಗೆ ಸಂಭವಿಸಿದೆ. ಭಗವಾನ್ ಬುದ್ಧದೇವನು ಧರ್ಮದ ಹೆಸರಿನಲ್ಲಿ ನಡೆಯುತ್ತಿದ್ದ ಅಧರ್ಮವನ್ನು ಸಹಿಸಲಾರದೆ ಹೊಸ ಧರ್ಮವೊಂದನ್ನು ಸ್ಥಾಪಿಸಿದನು. ಆದರೆ ಧರ್ಮದ ಹೆಸರಿನಲ್ಲಿ ಜನಸಾಮಾನ್ಯರನ್ನು ಸುಲಿಗೆ ಮಾಡುತ್ತಿದ್ದ ಕೆಲವರಿಗೆ ಆ ಹೊಸಧರ್ಮ ಹಿಡಿಸಲಿಲ್ಲ. ಆದ್ದರಿಂದ ಬುದ್ಧನ ಕಾಲಾನಂತರ ಅವನ ಸಿದ್ಧಾಂತಗಳನ್ನು ಚೀನಾ, ಜಪಾನ್, ಸಿಂಹಳ, ಮುಂತಾದ ಹೊರ ರಾಷ್ಟ್ರಗಳಿಗೆ ರಫ್ತು ಮಾಡಿದ. ನಮ್ಮ ಜನರು ಗಾಂಧೀ ತತ್ವಗಳನ್ನೂ ಸಹ ಅದೇ ರೀತಿಯಲ್ಲಿ ರಫ್ತು ಮಾಡುತ್ತಿದ್ದರು. ಆದರೆ ಆ ತತ್ವಗಳಿಗೆ ಪರದೇಶಗಳಲ್ಲೂ ಸಹ ಗಿರಾಕಿಗಳಿಲ್ಲವಾದ್ದರಿಂದ ಅವುಗಳನ್ನು ಪುಸ್ತಕಗಳಲ್ಲಿ ಬರೆದು ಜೋಪಾನವಾಗಿಟ್ಟಿದ್ದಾರೆ."

"ಅಯ್ಯಾ, ಪ್ರತಾಪ್, ನಮ್ಮ ಜನರು ನೀನು ಹೇಳುವಷ್ಟು ಕೆಟ್ಟು ಹೋಗಿಲ್ಲವಪ್ಪ. ಈಗಲೂ ಗಾಂಧೀ ತತ್ವಗಳಿಗೆ ನಮ್ಮ ದೇಶದಲ್ಲಿ ಕಿಮ್ಮತ್ತಿದೆ. ಪರದೇಶಗಳಲ್ಲೂ ಅವುಗಳಿಗೆ

ಗೌರವವಿದೆ. ನಾನು ಗಾಂಧೀ ಮಾರ್ಗವನ್ನು ಬಿಟ್ಟು ಬೇರಾವ ಮಾರ್ಗವನ್ನೂ ಅನುಸರಿಸಲಾರೆ"

"ಹಾಗಾದರೆ ಬಿಡಿ, ನಿಮಗೂ, ನಿಮ್ಮನ್ನು ನಂಬಿದವರಿಗೂ ರಾಜಕೀಯ ವನವಾಸವೇ ಗತಿ."

ಆ ದಿನ ವಿಪುಲ ಚರ್ಚೆಯಾದರೂ ಅಂತಿಮ ತೀರ್ಮಾನವೇನೂ ಆಗಲಿಲ್ಲ. ಕಾಂಗ್ರೆಸ್ ಅಭ್ಯರ್ಥಿಗಳ ಆಯ್ಕೆಯ ಕಾಲದಲ್ಲಿ ಚುನಾವಣಾ ಸಮಿತಿಯ ಧೋರಣೆ ಹೇಗಾಗುತ್ತದೆ ಎಂಬುದನ್ನು ಕಾದು ನೋಡಿ, ಆ ನಂತರ ಮುಂದಿನ ಕ್ರಮ ಕೈಗೊಳ್ಳತಕ್ಕದ್ದೆಂದು ಅಂದು ನಿರ್ಧರಿಸಿದರು.

* * * *

# ೫. ಕಾಂಗ್ರೆಸ್ ಟಿಕೆಟ್

ರಾಜ್ಯದಲ್ಲಿ ಸಾರ್ವತ್ರಿಕ ಚುನಾವಣೆ ನಡೆಯಲು ಇನ್ನು ಕೆಲವೇ ತಿಂಗಳ ಅವಧಿ ಇತ್ತು. ಚುನಾವಣೆಯಲ್ಲಿ ಕಾಂಗ್ರೆಸ್ ಪರವಾಗಿ ಅಭ್ಯರ್ಥಿಗಳಾಗಲು ಬಯಸಿ, ನೂರಾರು ಜನರು ರಾಜ್ಯದ ಕಾಂಗ್ರೆಸ್ ಚುನಾವಣಾ ಸಮಿತಿಗೆ ಅರ್ಜಿಗಳನ್ನು ಸಲ್ಲಿಸಿದ್ದರು. ಅರ್ಜಿದಾರರು ಕಾಂಗ್ರೆಸ್ ಟಿಕೆಟ್ಟಿಗಾಗಿ ಶಂಭು, ದಾಮೋದರರನ್ನು ಆಶ್ರಯಿಸುತ್ತಿದ್ದರು. ಅರ್ಜಿದಾರರ ಮತ್ತು ಅವರ ಹಿತ ಚಿಂತಕರ ನೂರಾರು ಕಾರುಗಳು ಶಂಭು, ದಾಮೋದರರ ಮನೆಗಳ ಮುಂದೆ ನಿಂತಿರುತ್ತಿದ್ದುವು. ದಾಮೋದರನು ತನ್ನ ಬಳಿ ಬಂದವರಿಗೆ "ಶಂಭುನಾಥರನ್ನು ನೋಡಿ, ಅವರು ಹೇಳಿದಂತೆ ನಾನು," ಎನ್ನುತ್ತಿದ್ದನು. ಶಂಭುವು "ಆಗಲಿ ನೋಡೋಣ" ಎಂದು ಎಲ್ಲರಿಗೂ ಉಪಚಾರದ ಮಾತುಗಳನ್ನು ಹೇಳುತ್ತಿದ್ದನು.

ಕಾಂಗ್ರೆಸ್ ಟಿಕೆಟ್ಟಿಗಾಗಿ ಸಲ್ಲಿಸಿದ್ದ ಮನವಿಗಳ ಪರಿಶೀಲನೆಗಾಗಿ ಕಾಂಗ್ರೆಸ್ ಚುನಾವಣಾ ಸಮಿತಿಯು ರಾಜಧಾನಿಯ ಕಾಂಗ್ರೆಸ್ ಭವನದಲ್ಲಿ ಸಮಾವೇಶಗೊಂಡಿತ್ತು. ಅರ್ಜಿದಾರರೂ, ಅವರ ಪರವಾಗಿ ಶಿಫಾರಸ್ಸು ಮಾಡಲು ಬಂದಿದ್ದ ಬಂಧುಬಾಂಧವರೂ, ಗೆಳೆಯರೂ ಸೇರಿ ಸಾವಿರಾರು ಜನರು ರಾಜಧಾನಿ ಬಿಡಾರ ಮಾಡಿದ್ದರು. ಅವರಲ್ಲಿ ಬಹುಮಂದಿ ಕಾಂಗ್ರೆಸ್ ಭವನದ ಬಳಿ ಪ್ರತಿದಿನವೂ ಸುಳಿದಾಡುತ್ತಿದ್ದರು. ಚುನಾವಣಾ ಸಮಿತಿಯ ಸಭೆ ಒಂದು ವಾರ ನಡೆಯಿತು.

ಚುನಾವಣಾ ಸಮಿತಿಯಲ್ಲಿ ದುರ್ಗಾದಾಸರೂ ದೊಡ್ಡ ಹೋರಾಟವನ್ನೇ ಮಾಡಬೇಕಾಯಿತು. ಆದರೆ ಬಹುಮತ ಅವರಿಗೆ ವಿರೋಧವಾಗಿತ್ತು. ಶಂಭು ದಾಮೋದರರು, ಹೆಮ್ಮೊರ, ಕೆಮ್ಮೊರ, ಜಲೋದರ ಮುಂತಾದವರನ್ನು ಚಿತಾವಣೆಯಿಂದ ಎತ್ತಿಕಟ್ಟಿದ್ದರು. ಅವರುಗಳು ದುರ್ಗಾದಾಸರ ಮತ್ತು ಭಾರ್ಗವದಾಸರ ಎಲ್ಲಾ ಸೂಚನೆಗಳನ್ನು ವಿರೋಧಿಸುತ್ತಿದ್ದರು. ದಾಮೋದರನು ಏನೂ ಅರಿಯದ ಸಂಭಾವಿತನಂತೆ ತನಗೆ ಯಾರ ಮೇಲೂ ಹಗೆತನವಿಲ್ಲವೆಂದೂ, ಬಹುಮತವಿದ್ದಂತೆ ತೀರ್ಮಾನವಾಗಬಹುದೆಂದೂ ಕಪಟ ನಾಟಕವಾಡುತ್ತಿದ್ದನು.

ದುರ್ಗಾದಾಸರ ಮತ್ತು ಅವರ ಸಂಪುಟದ ಮಂತ್ರಿಗಳ ಅರ್ಜಿಗಳು ಪರಿಶೀಲನೆಗೆ ಬಂದಾಗ, ಹೆಮ್ಮೊರ ಮೊದಲಾದವರು ದುರ್ಗಾದಾಸರ ಆಳ್ವಿಕೆಯಿಂದ ಜನರು ಬೇಸತ್ತು ಹೋಗಿದ್ದಾರೆಂದೂ, ಕಾಂಗ್ರೆಸ್ಸಿನ ಕೀರ್ತಿಗೆ ಕಳಂಕ ಬಂದಿದೆ, ಆದ್ದರಿಂದ ಅವರಾರಿಗೂ ಕಾಂಗ್ರೆಸ್ ಟಿಕೆಟ್ ಕೊಡಬಾರದೆಂದೂ ವಾದಿಸಿದರು. ಗೃಹ ಮಂತ್ರಿಗಳೊಬ್ಬರು ಜನರೊಪ್ಪುವ ರೀತಿಯಲ್ಲಿ ಕಾರ್ಯ ನಿರ್ವಹಣೆ ಮಾಡಿರುವುದರಿಂದ ಅವರೊಬ್ಬರಿಗೆ ಮಾತ್ರ ಕಾಂಗ್ರೆಸ್ ಟಿಕೆಟ್ ಕೊಡಬಹುದೆಂದು ಅಭಿಪ್ರಾಯಪಟ್ಟರು.

ಅಂತಿಮವಾಗಿ ಗೃಹಮಂತ್ರಿಗಳೊಬ್ಬರಿಗೆ ಕಾಂಗ್ರೆಸ್ ಟಿಕೆಟ್ ಕೊಡಬಹುದೆಂದೂ, ಮುಖ್ಯಮಂತ್ರಿಗಳಿಗೂ, ಇತರ ಮಂತ್ರಿಗಳಿಗೂ ಚುನಾವಣೆಯಲ್ಲಿ ಸ್ಪರ್ಧಿಸಲು ಅವಕಾಶ ಕೊಡಬಾರದೆಂದೂ ಚುನಾವಣಾ ಸಮಿತಿಯೂ ತೀರ್ಮಾನಿಸಿತು.

ದುರ್ಗಾದಾಸರ ಅನುಯಾಯಿಗಳೆನಿಸಿಕೊಂಡಿದ್ದ ಅಭ್ಯರ್ಥಿಗಳ ಪೈಕಿ ಕೆಲಸಕ್ಕೆ ಬಾರದ ಕೆಲವರಿಗೆ ವಿನಾ ಉಳಿದವರ್ಯಾರಿಗೂ ಕಾಂಗ್ರೆಸ್ ಟಿಕೆಟ್ ಲಭಿಸಲಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ, ಚುನಾವಣಾ ಸಮಿತಿಯ ತೀರ್ಮಾನದ ಪ್ರಕಾರ ಆಯ್ಕೆಯಾದ ಅಭ್ಯರ್ಥಿಗಳ ಪೈಕಿ ಶೇಕಡಾ ಎಪ್ಪತ್ತೈದು ಜನರು ಶಂಭು, ದಾಮೋದರರ ಕೈಗೊಂಬೆಗಳಾಗಿದ್ದರು.

* * * *

ದುರ್ಗಾದಾಸರು ಖಿನ್ನ ವದನರಾಗಿ ಕಾಂಗ್ರೆಸ್ ಭವನದಿಂದ ನೇರವಾಗಿ ತಮ್ಮ ಮನೆಗೆ ತೆರಳಿದರು. ಆಗ ಸಂಜೆ ಏಳು ಗಂಟೆಯ ಸಮಯ. ಅವರ ಭೇಟಿಗಾಗಿ ಜನರಾರು ಬಂದಿರಲಿಲ್ಲ. ಮನೆ ಶಾಂತವಾಗಿತ್ತು. ನಡುವಿನ ಹಜಾರದಲ್ಲಿ ಅವರ ಪತ್ನಿ ನಿರ್ಮಲಾದೇವಿಯವರು ದಿನಪತ್ರಿಕೆಯೊಂದನ್ನು ಓದುತ್ತಾ ಕುಳಿತಿದ್ದರು. ಅದು ಗಾಂಢೀವನು ಪ್ರಕಟಿಸುತ್ತಿದ್ದ ಪತ್ರಿಕೆಯಾಗಿತ್ತು. ಆ ಪತ್ರಿಕೆಯಲ್ಲಿ ದುರ್ಗಾದಾಸರ ಮತ್ತು ಅವರ ಸಂಪುಟದ ಸದಸ್ಯರ ಮೇಲೆ ಹಲವು ಆಪಾದನೆಗಳನ್ನು ಹೊರಿಸಲಾಗಿತ್ತು. ಸಂಪಾದಕರ ಅಗ್ರಲೇಖನದಲ್ಲಿ, ದುರ್ಗಾದಾಸರ ದುರಾಡಳಿತದಿಂದ ರಾಜ್ಯವು ದಿವಾಳಿಯಾಗಿದೆಯೆಂದೂ, ರಾಜ್ಯದಲ್ಲಿ ಕಾಂಗ್ರೆಸ್ ಉಳಿಯಬೇಕಾಗಿದ್ದರೆ ದುರ್ಗಾದಾಸರಿಗೂ, ಅವರ ಅನುವರ್ತಿಗಳಿಗೂ, ಕಾಂಗ್ರೆಸ್ ಟಿಕೆಟ್ ಕೊಡಬಾರದೆಂದೂ ಪ್ರತಿಪಾದಿಸಲಾಗಿತ್ತು.

ದುರ್ಗಾದಾಸರ ಹಜಾರವನ್ನು ಪ್ರವೇಶಿಸಿದೊಡನೆ ನಿರ್ಮಲಾದೇವಿಯವರು ಓದುತ್ತಿದ್ದ ಪತ್ರಿಕೆಯನ್ನು ಒತ್ತಟ್ಟಿಗಿರಿಸಿ, "ಟಿಕೆಟ್ ರಾದ್ಧಾಂತ ಏನಾಯಿತು," ಎಂದು ಕುತೂಹಲದಿಂದ ಪತಿಯನ್ನು ಪ್ರಶ್ನಿಸಿದರು.

"ನಿರೀಕ್ಷಿಸಿದಂತೆಯೇ ಆಯಿತು. ಅವರಿಗೆ ಬೇಕಾದವರಿಗೇ ಟಿಕೆಟ್ ಕೊಟ್ಟರು"

"ನಿಮಗೆ.......?!"

"ನನಗೂ ಸೊನ್ನೆ; ನನ್ನ ನಂಬಿದವರಿಗೂ ಸೊನ್ನೆ."

"ಏನು......! ನಿಮಗೂ ಕಾಂಗ್ರೆಸ್ ಟಿಕೆಟ್ ಕೊಡಬಾರದು ಅಂತ ತೀರ್ಮಾನ ಆಯ್ತೇನು?" ಎಂದು ಆಶ್ಚರ್ಯ ಮತ್ತು ಉದ್ವೇಗ ಭರಿತ ಧ್ವನಿಯಲ್ಲಿ ನಿರ್ಮಲಾ ದೇವಿಯವರು ಪ್ರಶ್ನಿಸಿದರು.

"ನಿನಗೇನೂ ಲ್ಯಾಟಿನ್‌ನಲ್ಲಿ ಹೇಳಿದೆನೋ ಅಥವಾ ಗ್ರೀಕ್‌ನಲ್ಲಿ ಹೇಳಿದೆನೊ?"

"ಯಾವಾಗಲೂ ಒರಟು ಮಾತೇ. ನಿಮ್ಮ ಒರಟುತನದಿಂದ ಎಲ್ಲರನ್ನೂ ವೈರಿಗಳನ್ನಾಗಿ ಮಾಡಿಕೊಂಡಿರುವಿರಿ. ಜನರ ಹತ್ತಿರ ಅನಾವಶ್ಯಕ ನಿಷ್ಠೂರ ಬೇಡವೆಂದು ನಾನು ಪದೇ ಪದೇ ಹೇಳುತ್ತಲೇ ಬಂದೆ. ನನ್ನ ಮಾತನ್ನು ಕೇಳಬೇಕಲ್ಲ. ಈಗ ಅನುಭವಿಸಿ."

"ನನ್ನ ಪಾಲಿಗೆ ಬಂದ ಕಷ್ಟವನ್ನು ಅನುಭವಿಸಲು ಸಿದ್ದನಾಗಿದ್ದೇನೆ. ನನ್ನ ಪರವಾಗಿ ನೀನೇನೂ ಅನುಭವಿಸಬೇಕಾಗಿಲ್ಲ."

"ನೀವು ಮಾಡಿದ ತಪ್ಪಿಗೆ ನಾನೂ, ಮಕ್ಕಳೂ ಅನುಭವಿಸಬೇಕಲ್ಲ."

"ಓಹೋ...ರಾಗವೇ ಬದಲಾವಣೆಯಾಗಿದೆ.! ಜಗತ್ತಿನ ರೀತಿಯೇ ಹೀಗೆ. ನಿನ್ನದೇನು ತಪ್ಪು. ಅಧಿಕಾರ, ಆಸ್ತಿ ಇದ್ದಾಗ ಹೆಂಡತಿ ಮಕ್ಕಳೂ, ಬಂಧುಬಾಂಧವರೂ ಅಪಾರ ಪ್ರೀತಿ ಗೌರವಗಳನ್ನು ಸೂಚಿಸುತ್ತಾರೆ. ಅಧಿಕಾರ ಕೈತಪ್ಪಿ, ಕೈ ಬರಿದಾದಾಗ ಆ ಪ್ರೀತಿ ಗೌರವಗಳು ಮಾಯವಾಗುತ್ತವೆ. ನನ್ನ ಅಧಿಕಾರ ಮುಕ್ತಾಯವಾಗಲು ಬಂದಿದೆ; ಹಣವೂ ಇಲ್ಲ. ನಿನ್ನರಾಗವೂ ಬದಲಾಗಿದೆ. ಇದುವರೆಗೆ ಮುಖ್ಯಮಂತ್ರಿಯ ಮಡದಿಯೆಂದು ಮೆರೆದದ್ದಾಯಿತು....ಈಗ...."

"ಈಗ ಏನಾಗಿದ್ದೀನಿ? ಅದನ್ನೂ ಹೇಳಿ ಬಿಡಿ. ನೀವು ಮುಖ್ಯಮಂತ್ರಿಯಾಗಿ ನನಗೇನಾದರೂ ಸಾವಿರಾರು ರೂಪಾಯಿ ಒಡವೆ ವಸ್ತ್ರ ಕೊಟ್ಟಿದ್ದೀರೋ? ಮಕ್ಕಳಿಗೇನಾದರೂ ಅಸ್ತಿ ಪಾಸ್ತಿ ಮಾಡಿಟ್ಟಿದ್ದೀರೋ? ನಿಮ್ಮಪ್ಪ ಮಾಡಿದ್ದೆಲ್ಲಾ ! ಹಾಳು ಮಾಡಿದ್ದಾಯಿತು. ರಾಜಕಾರಣಕ್ಕೆ ನಿಂಬೂರು ಮನೆ ಆಧಾರ ಮಾಡಿದ್ದಾಯಿತು. ಇನ್ನೆಲ್ಲೋ ಅಲ್ಪಸ್ವಲ್ಪ ಭೂಮಿ ಉಳಿದಿರಬೇಕು. ಅದನ್ನು ತಿಂದು ತೇಗಿ ಬಿಡಿ. ಮುಖ್ಯಮಂತ್ರಿ ಹೆಂಡತಿ ಅಂತ ನಾ ಏನು ಲಂಚ ತಗೊಂಡಿದ್ದೆನೋ ಅಥವಾ ಇನ್ನೆನಾದರೂ ಮಾಡಬಾರದ್ದು ಮಾಡಿದ್ದೇನೋ? ನನ್ನ ತಪ್ಪನೆಲ್ಲಾ ಒಂದೊಂದಾಗಿ ಹೇಳಿ."

"ನಿನ್ನದೇನೂ ತಪ್ಪಿಲ್ಲ, ನಂದೇ ಪೂರ್ತಿ ತಪ್ಪು."

"ಹೌದು ನಿಮ್ದೇ ಪೂರ್ತಿ ತಪ್ಪು. ನಿಮ್ಮ ತಪ್ಪಿಲ್ದೇ ಇದ್ರೆ ಇಷ್ಟೊಂದು ಜನ ನಿಮ್ಮೇಲೆ ಯಾಕೆ ತಿರುಗಿ ಬೀಳುತ್ತಿದ್ದರು? ನೆಂಟರಿಷ್ಟರ ಹತ್ತಿರವೆಲ್ಲಾ ನಿಷ್ಠೂರ. ಪ್ರತಿದಿನವೂ ಪತ್ರಿಕೆಗಳೆಲ್ಲೆಲ್ಲಾ ನಿಮ್ಮ ಕಥೇನೆ ನಿಮ್ದು ತಪ್ಪಿಲ್ಲದೇ ಇದ್ದಿದ್ರೆ ಹೀಗೇಕಾಗ್ತಿತ್ತು?"

"ನ್ಯಾಯಾ ನ್ಯಾಯಗಳ ವಿಮರ್ಶೆ ಇಲ್ಲದೆ, ನೆಂಟರಿಷ್ಟರ ತಾಳಕ್ಕೆ ಸರಿಯಾಗಿ ಕುಣಿದು, ದುಷ್ಟರಾಜಕಾರಣಿಗಳ ಮೇಳಕ್ಕೆ ಸೇರಿದ್ದರೆ ನನ್ನೊಡನೆ ಎಲ್ಲರೂ ಸ್ನೇಹದಿಂದಿರುತ್ತಿದ್ದರು. ದೇವರು ಮೆಚ್ಚುವಂತೆ ನಡೆದಿದ್ದೇ ನನ್ನ ತಪ್ಪು."

ಎಲ್ಲಾರು ನಿಮ್ಮನ್ನು ದೂಷಿಸುತ್ತಿರುವಾಗ ತಪ್ಪಿರಲೇಬೇಕು. ಮೊನ್ನೆ ಕ್ಲಬಿನ ವಾರ್ಷಿಕೋತ್ಸವಕ್ಕೆ ಹೋದಾಗ ಆ ತ್ರಿವೇಣಿ 'ಏನ್ರೀ ನಿರ್ಮಲಾ, ಈಚೆಗೆ ನಿಮ್ಮ ಯಜಮಾನರ ಮೇಲೆ ಬಹಳಾ ಬಹಳಾ ಅಪವಾದ ಕೇಳಿ ಬರ್ತಾಇದೆ,' ಎಂದು ಎಲ್ಲರೆದುರೂ ಹೇಳಿದಳು. ನಾನು ನಾಚಿಕೆಯಿಂದ ತಲೆತಗ್ಗಿಸಿದೆ.

"ಓಹೋ... ನನ್ನ ವರ್ತನೆಯಿಂದ ನೀನು ನಾಚಿಕೆಯಿಂದ ತಲೆತಗ್ಗಿಸಬೇಕಾದ ಪ್ರಮೇಯ ಬಂತೆ! ಅಯ್ಯೋ ಪಾಪ! ನನ್ನ ದೆಸೆಯಿಂದ ನಿನಗೆ ನಾಚಿಕೆಯಾಗಬಾರದು. ನನ್ನ ಜೊತೆಯಲ್ಲಿರಲು ನಾಚಿಕೆಯಾದರೆ ಇಂದೇ ನೀನಿಲ್ಲಿಂದ ಹೊರಟು ಹೋಗಬಹುದು. ಹೊರಗೆ ಶತ್ರುಗಳ ಕಾಟ; ಮನೆಯಲ್ಲಿ ನಿನ್ನ ಕಾಟ. ನಿನಗೆ ವ್ಯವಹಾರದ ಎ, ಬಿ, ಸಿ, ಡಿ, ಗೊತ್ತಿಲ್ಲ. ದುರಹಂಕಾರದ ಮುದ್ದೆ."

ಗಂಡ ಹೆಂಡಿರಿಬ್ಬರೂ ವಾಗ್ವಾದ ನಡೆಸುತ್ತಿರುವಷ್ಟರಲ್ಲಿ ಅಮರ್‌ಚಂದ್ ಅಲ್ಲಿಗೆ ಬಂದು "ಏನು ಸಾಹೇಬರು, ಇಂದು ಆರಾಮಾಗಿ ಅಮ್ಮಾವರೊಡನೆ ಸರಸ ಸಲ್ಲಾಪದಲ್ಲಿ ತೊಡಗಿದ್ದೀರಿ. ಕಾಂಗ್ರೆಸ್ ಟಿಕೆಟ್ ಸಿಕ್ಕಿಲ್ಲವೆಂದು ಖುಶಿಯಾಗಿರುವಂತೆ ಕಾಣುತ್ತದೆ. ಎಂದು ನಗುತ್ತಾ ನುಡಿದರು.

"ಅಮರ್‌ಚಂದ್, ಸರಸವಲ್ಲ; ವಿರಸ ಪ್ರಾಪ್ತವಾಗಿದೆ," ಎಂದು ದುರ್ಗಾದಾಸರು ಬೇಸರಗೊಂಡ ಧ್ವನಿಯಲ್ಲಿ ನುಡಿದರು.

"ನೋಡಿ ಅಮರ್‌ಚಂದ್, ನಾನು ಮುಖ್ಯಮಂತ್ರಿಯ ಹೆಂಡತಿಯೆಂದು ಇದುವರೆಗೆ ಮೆರೆದೆನಂತೆ. ಈಗ ಮನೆ ಬಿಟ್ಟು ಹೋಗಬೇಕಂತೆ. ನೀವೇ ನಿಮ್ಮ ಮುಖ್ಯಮಂತ್ರಿಗಳಿಗೆ ಸ್ವಲ್ಪ ಬುದ್ಧಿ ಹೇಳಿ," ಎಂದು ಸಿಡುಕು ಧ್ವನಿಯಲ್ಲಿ ನಿರ್ಮಲಾ ನುಡಿದರು.

"ಯಾಕೇ,........ ನಡೆದದ್ದನ್ನ ಮರೆಮಾಚಿ, ಉಪ್ಪು, ಕಾರ, ಹುಳಿ ಹಚ್ಚಿ ಸುಳ್ಳು ಹೇಳ್ತಾ ಇದ್ದೀಯ. ಇಲ್ಲಿ ಕೇಳು ಅಮರ್‌ಚಂದ್, ನನ್ನ ದೆಸೆಯಿಂದ ಇವಳು ಅವಮಾನದಿಂದ ತಲೆ ತಗ್ಗಿಸುವಂತಾಗಿದೆಯಂತೆ; ಇವಳ ನಂಟರಿಷ್ಟರು ದೂರವಾದರಂತೆ. 'ನನ್ನ ಜೊತೆಯಲ್ಲಿರಲು ನಿನಗೆ ಅವಮಾನವಾದರೆ ನಿನಗಿಷ್ಟ ಬಂದಲ್ಲಿ ಹೋಗಬಹುದು,' ಎಂದು ನಾನು ಹೇಳಿದೆ. ನಂದೇನು ತಪ್ಪು ನೀನೇ ಹೇಳು."

"ಅಮರ್‌ಚಂದ್, ನಾನು ಹೇಳುವುದನ್ನೆಲ್ಲಾ ಪೂರ್ತಿಯಾಗಿ ಕೇಳಿ, ಆಮೇಲೆ ನಂದು ತಪ್ಪೋ ಎಂಬುದನ್ನು ನಿರ್ಧರಿಸಿ."

"ಆಗಲೀ ತಾಯಿ, ತಾವು ಹೇಳುವುದನ್ನೆಲ್ಲಾ ಪೂರ್ತಿಯಾಗಿ ಹೇಳಿ."

"ನೋಡಿ ಅಮರ್‌ಚಂದ್, ಈಗೆರಡು ವರ್ಷಗಳಿಂದ ಇವರ ಮೇಲೆ ಒಂದಲ್ಲಾ ಒಂದು ಆರೋಪ ಇದ್ದೇ ಇರುತ್ತದೆ. ಪತ್ರಿಕೆಗಳಲೆಲ್ಲಾ ಇವರ ಅವಹೇಳನದ ಕಥೇನೆ. ಸ್ನೇಹಿತರೂ, ನೆಂಟರಿಷ್ಟರೂ ದೂರವಾದರು; ಅನುಯಾಯಿಗಳು ಕೈ ಬಿಟ್ಟರು. ಆ ದಾಮೋದರ, ಯಾರ ಮನಸ್ಸನ್ನೂ ನೋಯಿಸದಂಥಾ ಮನುಷ್ಯ. ಅವನೊಂದಿಗೂ ಇವರಿಗೆ ನಿಷ್ಠೂರ. ಚೀಫ್ ಮಿನಿಸ್ಟ್ರಾಗಿದ್ದವರಿಗೆ ಇಂದು ಕಾಂಗ್ರೆಸ್ ಟಿಕೆಟ್ಟಿಗೂ ಗತಿ ಇಲ್ಲ. ಸಂಕಟದಿಂದ ಇಷ್ಟೊಂದು ಜನರೆಲ್ಲಾ ಯಾಕೆ ಮೈಮೇಲೆ ಹಾಕ್ಕೊಂಡಿದ್ದೆಂದು ನಾನು ಕೇಳಿದ್ದೇ ತಪ್ಪಾಯಿತು. ಅದಕ್ಕೇ ಹಾರಿ ಹಾರಿ ಬೀಳ್ತಿದ್ದಾರೆ. ಚೀಫ್ ಮಿನಿಸ್ಟ್ರ ಹೆಂಡತಿ ಅಂತ ಮೆರೆದೆನಂತೆ. ಇವರು ಚೀಫ್ ಮಿನಿಸ್ಟ್ರಾಗಿ ನನಗಾಗಲೀ, ನನ್ನ ಮಕ್ಕಳಿಗಾಗಲೀ ಬಂದ ಭಾಗ್ಯವೇನು? ಅಮರಾವತಿ ರಾಜ್ಯದ ಚೀಫ್ ಮಿನಿಸ್ಟ್ರು ಅವರ ಮಕ್ಕಳನ್ನ ಇಂಗ್ಲೆಂಡ್ನಲ್ಲಿ ಓದುಸ್ತಾ ಇದ್ದಾರಂತೆ. ನನ್ನ ಮಕ್ಕಳು ಸ್ಕೂಲಿಗೆ ಹೋಗುವಾಗ ನಡದೇ ಹೋಗಬೇಕು. ನಾನು ಅಡಿಗೆಮನೆ ದಾಸಿಯಗಿ ದುಡೀ ಬೇಕು."

"ನಿರ್ಮಲಾದೇವಿಯವರೇ, ತಮಗೆ ರಾಜಕಾರಣ ಅರ್ಥವಾಗುವುದಿಲ್ಲವೆಂದರೆ, ದಯವಿಟ್ಟು ಬೇಸರಿಸಬೇಡಿ. ಮೃದುವಾಗಿ ಮಾತನಾಡುವವರೆಲ್ಲರೂ ಸಭ್ಯರೆಂದು ತಾವು ತಿಳಿಯಬಾರದು. ದಾಮೋದರ ಒಬ್ಬ ಮೆತ್ತನೆಯ ಕಳ್ಳ. ದುಷ್ಟರಾಜಕಾರಣಿಗಳ

ಕಣ್ಣಿಗೆ ಸತ್ಪುರುಷರೆಲ್ಲರೂ ದುಷ್ಟರಂತೆ ಕಾಣುತ್ತಾರೆ. ನ್ಯಾಯಾನ್ಯಾಯಾಗಳನ್ನು ವಿರ್ಮಶಿಸದೆ ಲಂಚಕೋರರಿಗೂ, ಲಾಭಕೋರರಿಗೂ ನಿಮ್ಮ ಯಜಮಾನರು ಸಹಾಯ ಮಾಡಿದ್ದರೆ, ಅವರೆಲ್ಲರೂ ಇಂದು ನಿಮ್ಮ ಹಿತ ಚಿಂತಕರಂತೆ ನಟಿಸುತ್ತಿದ್ದರು. ನಿಮ್ಮ ಯಜಮಾನರು ಸತ್ಯಸಂಧರಾಗಿ, ಜನಾನುರಾಗಿಗಳಾಗಿರುವುದೇ ಕೆಲವರಿಗೆ ಒಂದು ದೊಡ್ಡ ತಲೆ ನೋವು. ಜನಸಾಮಾನ್ಯರು ದುರ್ಗಾದಾಸರನ್ನು ಇಂದೂ ದೇವರಂತೆ ಕಾಣುತ್ತಿದ್ದಾರೆ. ತಮಗದು ಗೊತ್ತಿದೆಯೋ ಇಲ್ಲವೋ ನಾಕಾಣೆ."

"ಅವಳಿಗೆಲ್ಲಿ ಗೊತ್ತಾದೀತು ಅಮರಚಂದ್ ? ಅವಳು ಇದುವರೆಗೆ ನನ್ನಲ್ಲಿ ಯಾವ ಸದ್ಗುಣಗಳನ್ನೂ ಕಂಡಿಲ್ಲ," ಎಂದು ದುರ್ಗಾದಾಸರು ಮಾರ್ಮಿಕವಾಗಿ ನುಡಿದರು.

"ಹಾಗಾದರೆ ನಂದೇ ತಪ್ಪಲ್ಲವೇ?" ಎಂದು ನಿರ್ಮಲಾದೇವಿಯವರು ವ್ಯಂಗ್ಯವಾಗಿ ಪ್ರಶ್ನಿಸಿದರು.

"ನಿರ್ಮಲಾದೇವಿಯವರೇ, ನಿಮ್ಮ ಪತಿ ಅಧಿಕಾರದಲ್ಲಿರಲಿ ಇಲ್ಲದಿರಲಿ ನೀವು ಯಾವಾಗಲೂ ಅವರ ವಿಚಾರದಲ್ಲಿ ಹೆಮ್ಮೆ ಪಡಬಹುದು," ಎಂದು ಅಮರ್‌ಚಂದ್ ನುಡಿದನು.

ಇಷ್ಟೆಲ್ಲಾ ಉಪನ್ಯಾಸವಾದ ಮೇಲೆ ನಿರ್ಮಲಾದೇವಿಯವರ ಮನಸ್ಸು ಹಗುರವಾಯಿತು. ಅವರು ನಸುನಕ್ಕು "ಹೋಗಲಿ ಬಿಡಿ," ಎಂದು ಹೇಳಿ ಒಳಗೆ ಹೋಗಿ ಉಪಹಾರವನ್ನು ತಂದು ಅಮರಚಂದರಿಗೂ, ದುರ್ಗಾದಾಸರಿಗೂ ಕೊಟ್ಟರು. ದುರ್ಗಾದಾಸರು ಉಪಹಾರವನ್ನು ಸವಿಯುತ್ತಾ, "ಅಮರ್‌ಚಂದ್, ಒಳ್ಳೆಯ ಸಮಯಕ್ಕೆ ಸರಿಯಾಗಿ ನೀನು ಬಂದು ಇವಳ ಕೈಯಿಂದ ನನ್ನನ್ನು ಪಾರುಮಾಡಿದೆ. ನಿನಗೆ ಧನ್ಯವಾದಗಳು," ಎಂದು ಹೇಳಿ ನಕ್ಕರು.

* * * *

ಚುನಾವಣಾ ಸಮಿತಿಯ ಅಂತಿಮ ತೀರ್ಮಾನದಿಂದ ದುರ್ಗಾದಾಸರು ದಿಗ್ಭ್ರಮೆಗೊಂಡರು; ರಾಜ್ಯದ ಜನರು ವಿಸ್ಮಯಗೊಂಡರು; ಕಾಂಗ್ರೆಸ್ ಕಾರ್ಯಕರ್ತರು ಕೋಪೋದ್ರೇಕದಿಂದ ಕೆರಳಿದರು. ಮುಂದೇನು ಮಾಡಬೇಕೆಂಬುದನ್ನು ನಿರ್ಧರಿಸುವ ಸಲುವಾಗಿ ರಾಜ್ಯದ ಪ್ರಮುಖ ಕಾಂಗ್ರೆಸ್ಸಿಗರು ರಾಜಧಾನಿಯಲ್ಲಿ ಭಾರ್ಗವದಾಸರ ಅಧ್ಯಕ್ಷತೆಯಲ್ಲಿ ಸಭೆ ಸೇರಿದ್ದರು. ಅಧ್ಯಕ್ಷರ ಅಪ್ಪಣೆಯಿಂದ ಮೊಟ್ಟಮೊದಲು ಪ್ರತಾಪರಾಜನೇ ಮಾತನಾಡಿದನು.

"ಅಧ್ಯಕ್ಷ ಮಹಾಶಯರೇ, ದೇಶಬಾಂಧವರೇ, ದುಷ್ಟರೂ ಭ್ರಷ್ಟರೂ ಈ ರಾಜ್ಯದಲ್ಲಿ ಕಾಂಗ್ರೆಸ್ ಸಂಸ್ಥೆಯನ್ನು ಮೋಸ ಕೃತ್ರಿಮಗಳಿಂದಲೂ, ಲಂಚ ರುಸುವತ್ತುಗಳಿಂದಲೂ ಆಕ್ರಮಿಸಿಕೊಂಡಿದ್ದಾರೆ. ರಾಜ್ಯದ ಆಡಳಿತ ಸೂತ್ರವೂ ಕೂಡ ಅವರ ಕೈಗೆ ಹೋದರೆ ಅವರನ್ನು ತಡೆಯುವರೇ ಇಲ್ಲವಾಗುತ್ತದೆ; ನಾವುಗಳು ನೆಮ್ಮದಿಯಿಂದ ಬಾಳುವುದೇ ಕಷ್ಟವಾಗುತ್ತದೆ. ದಿವಂಗತ ದಿಲೀಪರ ಆಡಳಿತದಿಂದ ಬೇಸತ್ತು ಹೋಗಿದ್ದ ಜನರಿಗೆ

ದುರ್ಗಾದಾಸರ ಆಳ್ವಿಕೆಯಿಂದ ತೃಪ್ತಿಯುಂಟಾಗಿದೆ. ದುರ್ಗಾದಾಸರು ಆಡಳಿತ ಯಂತ್ರವನ್ನು ಶುದ್ಧಿಗೊಳಿಸಿ ಅದು ಕ್ರಮವಾಗಿ ಮತ್ತು ತ್ವರಿತವಾಗಿ ಚಲಿಸುವಂತೆ ಮಾಡಿದ್ದಾರೆ. ಶಂಭು, ದಾಮೋದರರು ದಿಲೀಪರನ್ನು ನೂರುಪಾಲು ಮೀರಿಸಿದವರು. ಅವರ ಕೈಗೆ ಅಧಿಕಾರ ಸಿಕ್ಕರೆ ಆಗಬಹುದಾದ ಅನಾಹುತಗಳನ್ನು ತಾವೇ ಊಹಿಸಬಹುದು. ದೇಶಕ್ಕೆ ಶತ್ರು ರಾಷ್ಟ್ರದ ಆಕ್ರಮಣದ ಭಯವಿನ್ನೂ ತಪ್ಪಿಲ್ಲ. ಇಂತಹ ಕಾಲದಲ್ಲಿ ಜನ ಸಾಮಾನ್ಯರ ವಿಶ್ವಾಸ ಗೌರವಗಳನ್ನು ಪಡೆದವರು ಅಧಿಕಾರ ಸ್ಥಾನಗಳಲ್ಲಿದ್ದರೆ ಆಡಳಿತವೂ ಸುಸೂತ್ರವಾಗಿ ನಡೆಯುತ್ತದೆ. ಜನರ ಮನಸ್ಸಿಗೂ ನೆಮ್ಮದಿಯುಂಟಾಗುತ್ತದೆ. ಶತ್ರು ರಾಷ್ಟ್ರವನ್ನೆದುರಿಸುವುದೂ ಸುಲಭವಾಗುತ್ತದೆ. ಜನ ಸಂಪರ್ಕವಿಲ್ಲದವರು ವಾಮಮಾರ್ಗದಿಂದ ಅಧಿಕಾರಕ್ಕೆ ಬಂದರೆ ಜನರಿಗೆ ಸರ್ಕಾರದ ವಿಚಾರದಲ್ಲಿ ಗೌರವೂ ಇರುವುದಿಲ್ಲ; ವಿಶ್ವಾಸವೂ ಇರುವುದಿಲ್ಲ. ಆದ್ದರಿಂದ ರಾಜ್ಯದ ಇಂದಿನ ಪರಿಸ್ಥಿತಿಯಲ್ಲಿ ಹೊಸದೊಂದು ಪಕ್ಷವನ್ನು ರಚಿಸಿ, ಶಂಭು ದಾಮೋದರರ ಪಿತೂರಿಯ ಕೂಟವನ್ನು ಹೊಡೆಯುವುದೊಂದೇ ನಮಗುಳಿದಿರುವ ಮಾರ್ಗ. ನನ್ನ ಈ ಸೂಚನೆಗೆ ತಾವೆಲ್ಲರೂ ಬೆಂಬಲ ನೀಡಬೇಕೆಂದು ಅತಿ ವಿನಯದಿಂದ ಪ್ರಾರ್ಥಿಸುತ್ತೇನೆ."

ಪ್ರತಾಪರಾಜನ ಮಾತು ಮುಗಿದ ಮೇಲೆ, ದುರ್ಗಾದಾಸರು ಈ ರೀತಿ ನುಡಿದರು: "ಸ್ನೇಹಿತರೇ, ಪ್ರತಾಪರಾಜರು ಅವರ ಹೆಸರಿಗನುಗುಣವಾದ ಭಾಷಣವನ್ನೇ ಮಾಡಿದ್ದಾರೆ. ಅವರ ಮಾತು ದೇಶಭಕ್ತಿಯಿಂದ ಪ್ರೇರೇಪಿತವಾಗಿದೆ ಎಂಬ ಬಗ್ಗೆ ಯಾವ ಸಂಶಯವೂ ಇಲ್ಲ. ನಾವು ಕಾಂಗ್ರೆಸ್ಸಿಗೆ ಸೇರಿದ್ದು ಕಾಂಗ್ರೆಸ್ ಟಿಕೆಟ್ಟಿನ ಆಸೆಯಿಂದಲ್ಲ; ದೇಶ ಸೇವೆಗಾಗಿ. ಸನ್ನಿವೇಶಗಳ ಸಂಯೋಗದಿಂದಲೋ ಅಥವಾ ದೈವಸಂಕಲ್ಪದಿಂದಲೋ ನಮ್ಮಲ್ಲಿ ಕೆಲವರಿಗೆ ಗಾಂಧೀಜಿಯವರ ನಾಯಕತ್ವದಲ್ಲಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸುವ ಅವಕಾಶವೂ ಲಭಿಸಿತ್ತು; ಅನಂತರ ರಾಜ್ಯದ ಆಗು ಹೋಗುಗಳನ್ನು ನಿರ್ಧರಿಸುವ ಸುಯೋಗವೂ ಲಭಿಸಿತ್ತು. ಕಾಂಗ್ರೆಸ್ ಟಿಕೆಟ್ ಸಿಕ್ಕಲಿಲ್ಲವೆಂಬ ಕಾರಣದಿಂದ ಕಾಂಗ್ರೆಸ್ಸಿನ ವಿರುದ್ಧ ಬಂಡಾಯವೇಳುವುದು ಸೂಕ್ತವೇ ಎಂಬುದನ್ನು ಪ್ರತಾಪರಾಜರು ಯೋಚಿಸಬೇಕು. ಅವರೇ ಹೇಳಿರುವಂತೆ ದೇಶಕ್ಕೆ ಶತ್ರು ರಾಷ್ಟ್ರದ ಭಯವಿನ್ನೂ ತಪ್ಪಿಲ್ಲ. ಆ ಕಾಲದಲ್ಲಿ ಆಂದೋಳನ ಪರಿಸ್ಥಿತಿಯನ್ನು ನಿರ್ಮಿಸುವುದು ಸೂಕ್ತವೇ ಎಂಬುದನ್ನು ತಾವೆಲ್ಲರೂ ಯೋಚಿಸಬೇಕು. ಕಾಂಗ್ರೆಸ್ಸಿನ ವೇಷಧಾರಿಗಳಾದ ಶಂಭು ದಾಮೋದರರೂ, ಅವರ ಅನುವರ್ತಿಗಳೂ ಕೆಟ್ಟವರಾಗಿರುವುದು ನಿಜ. ಆ ಕಾರಣದಿಂದ ನಾನೇ ಕಟ್ಟಿರತಕ್ಕ ಕಾಂಗ್ರೆಸ್ ಸಂಸ್ಥೆಯನ್ನು ನಾಶಪಡಿಸಲು ಪ್ರಯತ್ನ ಪಡುವುದು ಸಾಧುವಲ್ಲ. ಅಲ್ಲದೆ ದೇಶದ ಆಗುಹೋಗುಗಳನ್ನು ನಿರ್ಧರಿಸುವ ದೇಶಾಭಿಮಾನಿಗಳಾದ ಕೇಂದ್ರ ಕಾಂಗ್ರೆಸ್ಸಿನ ಧುರೀಣರಿಗೆ ದೂರು ಹೇಳದೆ ದುಡುಕುವುದು ಸರಿಯಲ್ಲವೆಂಬುದು ನನ್ನ ಸ್ಪಷ್ಟ ಅಭಿಮತ."

ದುರ್ಗಾದಾಸರ ಭಾಷಣವಾದ ನಂತರ, ನಿಂಬೂರು ಜಿಲ್ಲೆಯ ಕಮಲಶಿಲೆಯ ಸೋಮಶೇಖರನು ವೇದಿಕೆಯನ್ನೇರಿದನು. ಅವನು ವೇದಿಕೆಯ ಮೇಲೆ ಬಂದೊಡನೆ

ಸಭೆಯಲ್ಲಿ ಹರ್ಷೋದ್ಗಾರಗಳಾದುವು. ಅವನೊಬ್ಬ ಅತ್ಯಂತ ಪ್ರಾಮಾಣಿಕ ಮತ್ತು ಪ್ರಭಾವಶಾಲಿಯಾದ ಕಾಂಗ್ರೆಸ್ ಕಾರ್ಯಕರ್ತ. ಅವನು ತನ್ನ ಸತ್ಯ, ಶ್ರದ್ಧೆ ಮತ್ತು ಸಾಹಸಗಳಿಂದ ನಿಂಬೂರು ಜಿಲ್ಲೆಯ ಅಚ್ಚುಮೆಚ್ಚಿನ ಕಾಂಗ್ರೆಸ್ ಕಾರ್ಯಕರ್ತನಾಗಿದ್ದನು. ಅಲ್ಲದೆ ರಾಜ್ಯದ ರಾಜಕೀಯ ವಲಯಗಳಲ್ಲಿ ನಿಷ್ಠಾವಂತನೆಂದು ಹೆಸರು ಪಡೆದವನು. ಆದ್ದರಿಂದಲೇ ಅವನೆದ್ದ ಕೂಡಲೆ ಸಭೆಯಲ್ಲಿ ಹರ್ಷೋದ್ಗಾರಗಳಾದದ್ದು.

"ಅಧ್ಯಕ್ಷರೇ, ಬಂಧು ಬಾಂಧವರೇ , ದುರ್ಗಾದಾಸರು ನಮ್ಮ ನೆಚ್ಚಿನ ನಾಯಕರು. ದೇಶಕ್ಕಾಗಿ ದುಡಿದ ಧುರೀಣರು. ಎಲ್ಲಕ್ಕಿಂತಲೂ ಮಿಗಿಲಾಗಿ ಸತ್ಯವಂತರು. ಅವರಲ್ಲಿ ನನಗೆ ಸಂಪೂರ್ಣ ಗೌರವವಿದೆ. ಆದರೆ ಅವರಾಡಿದ ಮಾತುಗಳು ನನಗೆ ಹಿಡಿಸಲಿಲ್ಲ. ಶತ್ರು ರಾಷ್ಟ್ರದ ಆಕ್ರಮಣ ಭಯವಿದೆಯೆಂಬ ಕಾರಣದಿಂದ ದುಷ್ಟರಿಗೂ, ಭ್ರಷ್ಟರಿಗೂ ಕಾಂಗ್ರೆಸ್ ಸಂಸ್ಥೆಯನ್ನೊಪ್ಪಿಸಿ ನಿಸ್ಸಹಾಯಕರಂತೆ ಕೈಕಟ್ಟಿ ಕುಳಿತಿರಬೇಕೆಂಬ ವಾದವನ್ನು ನಾನೊಪ್ಪಲಾರೆ. ಈ ದೇಶದ ರಾಜಕಾರಣ ಹಸನಾದರೆ, ಆಡಳಿತ ಸ್ವಚ್ಛವಾದರೆ, ಶತ್ರು ರಾಷ್ಟ್ರವನ್ನೆದುರಿಸುವುದು ಸುಲಭವಾಗುತ್ತದೆ. ಈ ಕಾರಣದಿಂದಲೇ ಪ್ರತಾಪರಾಜರ ವಾದವನ್ನು ನಾನು ಸಂಪೂರ್ಣವಾಗಿ ಅನುಮೋದಿಸುತ್ತೇನೆ," ಎಂದು ಸೋಮಶೇಖರನು ನುಡಿದನು.

ಆ ನಂತರ ಮಾತನಾಡಿದ ಪ್ರಮುಖರಲ್ಲಿ ಹಲವರು ದುರ್ಗಾದಾಸರ ವಾದವನ್ನು ಸಮರ್ಥಿಸಿದರು; ಕೆಲವರು ಪ್ರತಾಪರಾಜನ ಸೂಚನೆಯನ್ನು ಅನುಮೋದಿಸಿದರು. ಸುದೀರ್ಘ ಚರ್ಚೆಯಾದ ಮೇಲೆ, ಹೊಸ ಪಕ್ಷವನ್ನು ರಚಿಸುವುದು ಸೂಕ್ತವಲ್ಲವೆಂದೂ, ರಾಜ್ಯದ ಚುನಾವಣಾ ಸಮಿತಿಯ ತೀರ್ಪಿನ ವಿರುದ್ಧ ಕೇಂದ್ರ ಕಾಂಗ್ರೆಸ್ ಚುನಾವಣಾ ಸಮಿತಿಗೆ ಅಪೀಲು ಹಾಕಬೇಕೆಂದೂ, ದುರ್ಗಾದಾಸರೇ ದೆಹಲಿಗೆ ಹೋಗಿ ಕಾಂಗ್ರೆಸ್ ವರಿಷ್ಠರಿಗೆ ರಾಜ್ಯದ ರಾಜಕೀಯ ಪರಿಸ್ಥಿತಿಯನ್ನು ಸವಿಸ್ತಾರವಾಗಿ ವಿವರಿಸಬೇಕೆಂದೂ ನಿರ್ಣಯವಾಯಿತು.

ಆದರೆ ಪ್ರತಾಪರಾಜನೂ, ಸೋಮಶೇಖರನೂ ಮತ್ತು ಅವರಿಬ್ಬರ ಬೆಂಬಲಿಗರೂ ಆ ನಿರ್ಣಯಕ್ಕೆ ಒಪ್ಪಲಿಲ್ಲ. ತಾವು ಕಾಂಗ್ರೆಸ್ಸಿಗೆ ರಾಜೀನಾಮೆ ಕೊಟ್ಟು, ಚುನಾವಣೆಯಲ್ಲಿ ಶಂಭು, ದಾಮೋದರರನ್ನು ಸೋಲಿಸುವುದಾಗಿ ಸಭೆಯಲ್ಲಿಯೇ ಪ್ರತಿಜ್ಞೆ ಮಾಡಿದರು. ದುರ್ಗಾದಾಸರೂ, ಭಾರ್ಗವದಾಸರೂ ಪ್ರತಾಪರಾಜನ ಮತ್ತು ಸೋಮಶೇಖರನ ಮನಸ್ಸನ್ನು ಬದಲಾಯಿಸಲು ಸರ್ವ ಪ್ರಯತ್ನಗಳನ್ನು ಮಾಡಿದರು. ಆದರೆ ಅವರಿಬ್ಬರೂ ತಮ್ಮ ನಿಲುವನ್ನು ಬದಲಾಯಿಸಲೊಪ್ಪಲಿಲ್ಲ.

* * * *

ದುರ್ಗಾದಾಸರು ದೆಹಲಿಗೆ ತೆರಳಿ ಕೇಂದ್ರ ಚುನಾವಣಾ ಸಮಿತಿಗೆ ಅಪೀಲನ್ನು ಸಲ್ಲಿಸಿ, ಕೇಂದ್ರ ಕಾಂಗ್ರೆಸ್ಸಿನ ವರಿಷ್ಠರಿಗೆ ಶಂಭು, ದಾಮೋದರರ ಇತಿಹಾಸವನ್ನು ಸವಿಸ್ತಾರವಾಗಿ ಹೇಳಿದರು. ಆದರೆ ದೆಹಲಿಯ ವರಿಷ್ಠರೇನುತಾನೆ ಮಾಡಿಯಾರು? ಬಹು ದೂರ ದೆಹಲಿಯಲ್ಲಿದ್ದ ಅವರಿಗೆ ಶಂಭು ದಾಮೋದರ ಇತಿಹಾಸ

ತಿಳಿಯುವುದಾರೂ ಹೇಗೆ? ಅಲ್ಲದೆ ಶಂಭು, ದಾಮೋದರರಿಗೆ ರಾಜ್ಯದ ಕಾಂಗ್ರೆಸ್ಸಿನಲ್ಲಿ ಬಹುಮತವಿದ್ದುದರಿಂದ ಅವರೇನೂ ಮಾಡುವಂತಿರಲಿಲ್ಲ.

ಕಾಂಗ್ರೆಸ್ ವರಿಷ್ಠರು ದುರ್ಗಾದಾಸರ ಮನವಿಯನ್ನು ಸಹಾನುಭೂತಿಯಿಂದ ಕೇಳಿ, ರಾಜ್ಯದ ಚುನಾವಣಾ ಸಮಿತಿಯ ತೀರ್ಮಾನವನ್ನು ಸ್ವಲ್ಪ ಮಟ್ಟಿಗೆ ಬದಲಾವಣೆ ಮಾಡಿ, ದುರ್ಗಾದಾಸರಿಗೂ, ಅವರ ಸಂಪುಟದ ಸಚಿವರುಗಳಿಗೂ, ಚುನಾವಣೆಯಲ್ಲಿ ಸ್ಪರ್ಧಿಸಲು ಅವಕಾಶ ಕೊಡಬೇಕೆಂದು ರಾಜ್ಯ ಕಾಂಗ್ರೆಸ್ಸಿನ ಚುನಾವಣಾ ಸಮಿತಿಗೆ ಆದೇಶ ನೀಡಿದರು. ದೆಹಲಿಯ ವರಿಷ್ಠರ ತೀರ್ಮಾನದಿಂದ ದುರ್ಗಾದಾಸರಿಗೆ ಹೆಚ್ಚಿನ ತೃಪ್ತಿ ಏನೂ ಆಗಲಿಲ್ಲ. ಆದರೂ ಶಿಸ್ತಿನ ಸಿಪಾಯಿಯಂತೆ ಕಾಂಗ್ರೆಸ್ ಮುಖಂಡರ ತೀರ್ಮಾನಕ್ಕೆ ತಲೆಬಾಗಿ ಹಿಂದಿರುಗಿದರು.

ಕೇಂದ್ರ ಕಾಂಗ್ರೆಸ್ ಚುನಾವಣಾ ಸಮಿತಿಯ ತೀರ್ಮಾನಕ್ಕನುಗುಣವಾಗಿ ದುರ್ಗಾದಾಸರೂ, ಅವರ ಅನುಯಾಯಿಗಳೂ, ಚುನಾವಣೆಯಲ್ಲಿ ಸ್ಪರ್ಧಿಸಲು ನಿರ್ಧರಿಸಿದರು. ಅಲ್ಲದೆ ನಿಜವಾದ ಕಾಂಗ್ರೆಸ್ಸಿಗರಂತೆ, ವಿರೋಧ ಗುಂಪಿಗೆ ಸೇರಿದ ಸ್ಪರ್ಧಿಗಳಿಗೂ ಸಹ ತಮ್ಮ ಸಂಪೂರ್ಣ ಸಹಕಾರವನ್ನು ನೀಡತಕ್ಕದ್ದೆಂದು ನಿರ್ಧರಿಸಿದರು. ಆದರೆ ಪ್ರತಾಪರಾಜನೂ ಮತ್ತು ಸೋಮಶೇಖರನೂ ಕಾಂಗ್ರೆಸ್ ವರಿಷ್ಠರ ತಿರ್ಮಾನದಂತೆ ನಡೆಯಲು ಸಿದ್ಧರಾಗಿರಲಿಲ್ಲ. ಪ್ರತಾಪರಾಜನಿಗೆ ಕಾಂಗ್ರೆಸ್ ಟಿಕೆಟ್ ಲಭಿಸಿದ್ದರೂ, ಅವನದನ್ನು ನಿರಾಕರಿಸಿ, ರಾಜ್ಯ ಕಾಂಗ್ರೆಸ್ಸಿನ ಅನ್ಯಾಯದ ತೀರ್ಮಾನವನ್ನು ಪ್ರತಿಭಟಿಸುವ ಸಲುವಾಗಿ ಕಾಂಗ್ರೆಸ್ಸಿಗೆ ರಾಜೀನಾಮೆಯನ್ನು ಕೊಟ್ಟನು. ಅಂತೆಯೇ ಸೋಮಶೇಖರನೂ ರಾಜೀನಾಮೆಯನ್ನು ಸಲ್ಲಿಸಿದ ನಂತರ ಪ್ರತಾಪರಾಜನು ದಾಮೋದರನ ವಿರುದ್ಧ ಸ್ಪರ್ಧಿಸುವ ಸಲುವಾಗಿಯೂ, ಸೋಮಶೇಖರನು ಶಂಭುವಿನ ವಿರುದ್ಧ ಸ್ಪರ್ಧಿಸುವ ಸಲುವಾಗಿಯೂ ಸಿದ್ಧತೆಯಲ್ಲಿ ತೊಡಗಿದರು.

* * * *

ರಾತ್ರಿ ಎಂಟು ಗಂಟೆಯ ಸಮಯ. ರಾಜಧಾನಿಯ ಪ್ರಮುಖ ಬೀದಿಯೊಂದರಲ್ಲಿದ್ದ ದಾಮೋದರ ಮೂರಂತಸ್ತಿನ ಮನೆಯಲ್ಲಿ ವಿರೋಧಕೂಟದ ಅಗ್ರಗಣ್ಯರೆಲ್ಲರೂ ಸೇರಿದ್ದರು. ಮನೆಯ ಮುಂದಿದ್ದ ವಿಶಾಲವಾದ ಪ್ರಾಕಾರದಲ್ಲಿ ಎಂಟು ಹತ್ತು ಕಾರುಗಳು ನಿಂತಿದ್ದವು ಆ ಕಾರುಗಳನ್ನು ನೋಡಿದೊಡನೆ ಅವುಗಳ ಮಾಲೀಕರ ಶ್ರೀಮಂತಿಕೆಯನ್ನು ಸುಲಭವಾಗಿ ಅಳೆಯಬಹುದಾಗಿತ್ತು. ಮನೆಯ ಎರಡನೆಯ ಅಂತಸ್ತಿನಲ್ಲಿ, ಆಧುನಿಕ ರೀತಿಯಲ್ಲಿ ಸಜ್ಜುಗೊಳಿಸಿದ್ದ ಕೊಠಡಿಯೊಂದರಲ್ಲಿ ದಾಮೋದರ, ಶಂಭು, ಹೆಮ್ಮಾರ, ಕೆಮ್ಮಾರ, ಜಲೋದರ, ಮಹೋದರ, ಪಟವಾರ, ಗಾಂಢೀವ ಇವರುಗಳು ದುಂಡು ಮೇಜಿನ ಸುತ್ತಲೂ ಸುಖಾಸೀನರಾಗಿ ಕುಳಿತು ಆಪ್ತಾಲೋಚನೆಯಲ್ಲಿ ತೊಡಗಿದ್ದರು.

ಸಧ್ಯದಲ್ಲಿಯೇ ಪ್ರಾರಂಭವಾಗಲಿದ್ದ ಮಹಾಚುನಾವಣೆಯ ಸಲುವಾಗಿ ಎಲ್ಲೆಲ್ಲಿ ಯಾವ್ಯಾವ ವ್ಯೂಹಗಳನ್ನು ರಚಿಸಬೇಕೆಂಬ ವಿಚಾರವಾಗಿ ಮಾತುಕತೆ ನಡೆಸಲು ಅವರೆಲ್ಲರೂ ಅಲ್ಲಿ ಸೇರಿದ್ದರು. ಮೇಜಿನ ಮೇಲೆ ಬೆಲೆ ಬಾಳುವ ಬಗೆ ಬಗೆಯ

ದೇಶೀಯ ಮತ್ತು ವಿದೇಶೀಯ ಮಧ್ಯದ ಸೀಸೆಗಳಿದ್ದುವು. ಮಧ್ಯದ ಜೊತೆಗೆ ವ್ಯಂಜನವಾಗಿ ಭುಂಜಿಸಲು ಸಿದ್ಧಪಡಿಸಿದ್ದ ಮಾಂಸ ಮತ್ತು ಮೀನುಗಳ ವಿವಿಧ ಭಕ್ಷ್ಯಗಳು ತಟ್ಟೆ ಬಟ್ಟಲುಗಳಲ್ಲಿ ಘಮಘಮಿಸುವ ವಾಸನೆಯನ್ನು ಬೀರುತ್ತಿದ್ದವು. ಬಗೆಬಗೆಯ ಬಣ್ಣದ ಲೋಟಾಗಳೂ, ಸೋಡಾ ಸೀಸೆಗಳೂ ಎಲ್ಲರ ಮುಂದೂ ಸಿದ್ಧವಾಗಿದ್ದುವು. ಮಾತುಕತೆಗಳ ಮಧ್ಯೆ ಮದ್ಯಸೇವನೆ ನಿರಾಂತಕವಾಗಿ ಸಾಗಿತ್ತು.

ಬರಿದಾದ ಅತಿಥಿಗಳ ಲೋಟಗಳಿಗೆ ಮಧ್ಯವನ್ನು ಸುರಿಯುತ್ತಿದ್ದ ದಾಮೋದರನು, "ಏನಯ್ಯಾ ಶಂಭೂ, ನಿನ್ನ ಪಾಲಿಟಿಕ್ಸ್ ಹ್ಯಾಗೆ ನಡೆದಿದೆ," ಎಂದು ಪ್ರಶ್ನಿಸಿದನು.

"ನಿನ್ನ ದಯೆಯಿಂದ ಎಲ್ಲವೂ ಸುಸೂತ್ರವಾಗಿ ಸಾಗಿದೆ ಮಿತ್ರಾ, ದಾಸನು ತಿಥಿಗೆ ಸಕಲ ಸಿದ್ಧತೆಯೂ ಆಗಿದೆ," ಎಂದು ಶಂಭು ಉತ್ತರವಿತ್ತನು.

"ಇನ್ನೊಂದು ಸಮಾಚಾರ ಕೇಳಿದೆ. ಅದು ನಿಜವೇ ಶಂಭುನಾಥ್?" ಎಂದು ಪಟವಾರ ಪ್ರಶ್ನಿಸಿದನು.

"ಅದೇನು ಸಮಾಚಾರ? ಎಂದ ದಾಮೋದರ ಕೇಳಿದ

"ಆ ದಾಸನಿಗೆ ಅವನ ದುರ್ಮಂತ್ರಿಗಳಿಗೂ ಟಿಕೆಟ್ ಕೊಡಬೇಕೆಂದು ಹೈ ಕಮ್ಯಾಂಡ್ ಆದೇಶ ಬಂದಿದೆಯಂತೆ. ಅದು ನಿಜವೇ?" ಎಂಬ ಪಟವಾರ ಕೇಳಿದ

"ನಿಜ, ಆ ರೀತಿ ಆದೇಶ ಬಂದಿದೆ," ಎಂದು ದಾಮೋದರ ಹೇಳಿದ.

ಆಗಲೇ ಒಂದು ಸುತ್ತು ಮದ್ಯ ಸೇವನೆ ಮಾಡಿ ಸ್ಫೂರ್ತಿಗೊಂಡಿದ್ದ ಜಲೋದರ, "ಆ... ಅವರು.... ಯಾ.... ಯಾರು... ಸ್ವಾಮಿ... ಆ ಹೈ ಕ... ಕಮ್ಯಾಂಡ್‌ನೋರು....ನಂಕಮ್ಟೀ ತೀರ್ಮಾನ ಬದಲಾಸೂಕೆ? ಇದೇನು.... ಡಮಾಕ್ರಸೀನೋ?" ಎಂದು ಅಬ್ಬರಿಸಿದನು.

ಅವನಂತೆಯೇ ಕಂಠಪೂರ್ತಿ ಸೇವಿಸಿದ್ದ ಕೆಮ್ಮೊರ, "ಹೈ ಕಮ್ಯಾಂಡ್ ಠ.... ಠರಾವ್..... ನಾ....ನಾವೊಪ್ಪೂಕ್ಕೆ... ಸಾಧ್ಯಾ.....ಇಲ್ಲಾ. ಒಪ್ಪೊದಿಲ್ಲಾಂತ.... ನೀವ್ ಬರೀರಿ ಸಾ...ರ್, ಮಿ....ಮಿಸ್ಟರ್ ದಾ..... ದಾಮೋದರಾ..... ಆ.....ಹೈಕಮ್ಯಾಂಡ್....ಏನ್ಮಾಡುತ್ತದೇ ನೋಡಾನ," ಎಂದು ಘರ್ಜಿಸಿದನು.

ಕುಡಿಯುವ ಅಭ್ಯಾಸವಿಲ್ಲದಿದ್ದರೂ ಅವರಿಬ್ಬರ ಮಾತುಗಳಿಂದ ಸ್ಫೂರ್ತಿಗೊಂಡಿದ್ದ ಹೆಮ್ಮೊರ, ನೋಡಿಮಿಸ್ಟರ್ ದಾಮೋದರ, ಹೈ ಕಮ್ಯಾಂಡ್ ಠರಾವು ಪ್ರಜಾಪ್ರಭುತ್ವಕ್ಕೇ ಧೋಕಾ ಬರೂಮಾತು, ನಾವಿಷ್ಟು ಮಂದಿ ಕೂಡಿ ಮಾಡ್ದ ಠರಾವ್ನ ಅವ್ರು ಏಕಾಯೇಕಿ ಬದ್ಲಿ ಮಾಡಿಬಿಟ್ಟಾರೆ. ಈಗೇನಾದರೂ ಉಪಾಯ ಮಾಡಿ ನಮ್ ಠರಾವ್ನ ಕಾಯಂ ಮಾಡಸ್ಬೇಕಲ್ಲಾ," ಎಂದನು.

ಅವರ ಆರ್ಭಟಗಳನ್ನು ಕೇಳುತ್ತಿದ್ದ ದಾಮೋದರ, "ಹಾಗೆಲ್ಲಾ ಮಾಡೋಕಾಗೋ ದಿಲ್ಲ. ನಾವು ಹೈ ಕಮ್ಯಾಂಡ್ ಹತ್ರ ನಿಷ್ಠೂರ ಮಾಡಿಕೊಂಡು ಬಾಳೋಕ್ಕೆ ಆಗೋದಿಲ್ಲ. ಅವರ ಆದೇಶಕ್ಕೆ ನಾವು ಮನ್ನಣೆ ಕೊಡ್ಲೇಬೇಕು," ಎಂದನು

"ಹೌದು, ಹೌದು. ದಾಮೋದರ ಹೇಳೋದು ಸರಿ," ಎಂದು ಶಂಭು ತಲೆದೂಗಿದನು.

ಇನ್ನೂ ಅಮಲೇರಿದ್ದ ಜಲೋದರ, "ಆದ್ರೇ ಸಾರ್.....ಒಂದು ವಿ...ವಿಚಾರ...ನಾವ್ ಮರೀಬಾರ್ದು. ಆ..ಆ..ದಾಸ....ಎಲೆಕ್ಷನ್ನಿಗೆ ನಿಂತ್ರೆ ಗೆದ್ ಬ....ಬರೂದಂತೂ ಖಂಡ್ತ....ಅ....ಅಂವಾ ಅಸೆಂಬ್ಲೀಗೆ ಬಂದ್ರೇ ನಮ್ ಜನ್ರೋಳೇ.....ಅವನ್ಕಡೀಗೆ ಸೇರದ್ರೆ.....ಏನ್....ಗತಿ?" ಎಂದ

"ಅಯ್ಯಾ ಜಲೋದರ, ಎಲೆಕ್ಷನ್ನಿಗೆ ನಿಂತ ಕೂಡ್ಲೇ.....ಗೆದ್  ಬರ್ತಾನೆ ಅಂತ ಗ್ಯಾರೆಂಟಿ ಎಲ್ಲಿದ್ಯೋ..." ಎಂದು ಶಂಭು ವ್ಯಂಗ್ಯವಾಗಿ ನುಡಿದನು

"ಮಿಸ್ಟರ್ ಶಂಭುನಾಥ್, ನೀ....ನೀವು ದಾಸನ ಸಕ್ತೀನ ಅಷ್ಟು ತಾತ್ಸಾರ ಮಾಡಬಾರ್ದು. ಇದೂ ಪೀಸೀಸಿ ಎಲೆಕ್ಷನ್ನಲ್ಲ, ಕಿ......ಕಿತಾಪತೀ ಮಾಡೊಕ್ಕೆ; ಜನರಲ್ ಎಲೆಕ್ಷನ್ನು; ತಮಾಸೇ ಅಲ್ಲ. ಆ ದಾಸನ ಮಖಾನೋಡ್ದ ಕೂಡ್ಲೇ ಜನಾ...... ಮಂಕ್ಬೂದಿ ಹಾಕ್ದಾಗೆ ಮಾಡ್ತಾರೆ. ಅವನಹ್ಹತ್ರ ಎನೋ ಒಂದು ಅಟ್ರ್ಯಾಕ್ಷನ್ ಪವರ್ ಅದೆ," ಎಂದ ಜಲೋದರ.

"ಇರ್ಲೀ ಬಿಡು, ಜಲೋದರ. ಈ ಸಾರಿ ನಾ ಅವನಿಗೆ ನೀರ್ ಕುಡಿಸ್ತೀನಿ," ಎಂದ ಶಂಭು.

ಅವರಿಬ್ಬರ ಸಂಭಾಷಣೆಯನ್ನು ಕೇಳುತ್ತಿದ್ದ ದಾಮೋದರ, "ಅದೇನಪ್ಪಾ ಅದು..... ನೀವಿಬ್ರೂ ಆಡುವ ಗೂಢಾರ್ಥದ ಮಾತು? ಏನಯ್ಯಾ ನಿನ್ ಪ್ಲಾನು? ನಮ್ಗೂ ಸ್ವಲ್ಪ ಗೊತ್ತಾಗಲಿ ಹೇಳು," ಎಂದನು

"ಇಷ್ಟು ಜನ್ರಮುಂದೆ ಹೇಳೂವಂತಾ ಮಾತಲ್ಲಪ್ಪಾ. ಸ್ವಲ್ಪ ಲೀಕಾದ್ರೆ ಬ್ಹಾಳಾ ಡೇಂಜರ್," ಎಂದು ಶಂಭು ನುಡಿದ "ಏನ್ರೀ ಶಂಭುನಾಥ್, ನಿಮ್ಮ ಮಾತು ನೋಡದ್ರೆ..... ಇಲ್ಯಾರೊ ಪಂಚಮದಳದೋರು ಇದ್ದಾರೆ ಅಂತ ಕಾಣಸ್ತದೆ," ಎಂದು ಹೆಮ್ಮೊರ ವ್ಯಂಗ್ಯವಾಗಿ ನುಡಿದನು.

"ಹಾಗೇನು ಇಲ್ಲ. ಆದರೆ ಬಾಯಿ ತಪ್ಪಿ ಯಾರಾದ್ರೂ ಲೀಕೌಟ್ ಮಾಡದ್ರೆ ಅಪಾಯ ಅಂತಾ ಹೇಳ್ದೆ ಅಷ್ಟೇ."

"ಅಲ್ರೀ ಶಂಭುನಾಥ್, ನಮ್ಮೊಳಗೇ ಗುಟ್ಟು ಮಾಡದ್ರೆ, ನಾವ್ ನಿಮ್ಮನ್ನ ಹ್ಯಾಂಗ್ರೀ ಫಾಲೋ ಮಾಡ್ಬೇಕು?" ಎಂದು ಗಾಂಢೀವ  ಖಿನ್ನ ಮನಸ್ಕನಾಗಿ ನುಡಿದ.

"ಗುಟ್ಟೇನ್ ಬಂತು, ದಾಮೋದರ, ಸುಮ್ನೇ....ಹಾಗಂದೆ ಆ ದುರ್ಗಾದಾಸನೆದ್ರೀಗೆ ಅವನ ಶಿಷ್ಯ ಭಗವಾನ್‌ದಾಸನ್ನ ನಿಲ್ಲಸ್ಬೇಕು ಅಂತಾ ಪ್ಲಾನ್ ಮಾಡೀನಿ."

"ಶಂಭೂ, ನಿನ್ ತಲೆ ಕೆಟ್ಟಿದೆಯೋ? ಕುಡಿದದ್ದು ನೆತ್ತಿಗೇರಿದೆಯೋ? ಭಗವಾನ್ ದಾಸ, ದುರ್ಗಾದಾಸರ ಪಟ್ಟ ಶಿಷ್ಯ. ಜೊತೀಗೆ....ಕ್ಲೋಸ್ ರಿಲೇಟೀವ್. ದುರ್ಗಾದಾಸ್ ಹಾಕಿದ ಗೆರೆ ಭಗವಾನ್‌ದಾಸ್ ದಾಟೋದಿಲ್ಲ. ಅಲ್ದೆ....ದುರ್ಗಾದಾಸನಿಂದ್ಲೇ ಭಗವಾನ್ ದಾಸ್ ಮೇಲಕ್ಕೆ ಬಂದವ. ನೀನು  ಭಗವಾನ್‌ದಾಸನ್ನ ದುರ್ಗಾದಾಸನೆದ್ರೀಗೆ ನಿಲ್ಲಸ್ತೀಯ ಅಂತಾ ಹೇಳಿದ್ರೆ ಯಾರಯ್ಯಾ ನಂಬ್ತಾರೆ?"

"ಇಂದಿನ ರಾಜಕಾರಣದಾಗೆ ಯಾರಿಗ್ಯಾರಯ್ಯಾ? ಬಾಂಧವ್ಯಾನೂ ಇಲ್ಲ; ಉಪಕಾರನೂ ಇಲ್ಲ. ದುಡ್ಡಿದ್ರೆ ಯಾರನ್ಬೇಕಾದ್ರೂ ಕೊಳ್ಳಬಹುದು."

"ಶಂಭೂ, ನೀನು ಹೇಳೊದು ನಿಜಾ ಏನಯ್ಯಾ?"

"ನಿಜಾ ಕಣಮ್ಮಾ, ನಂಬು. ಮನ್ನೆ ಭಗವಾನ್‌ದಾಸನ್ನ ಕರೆಸಿದ್ದೆ. ಮೊದ್ಲು 'ಉಂಡಮನೀಗೆ ಎರಡು ಹ್ಯಾಗೆ ಬಗೀಲಿ,' ಅಂತಾ ಪುರಾಣ ಬಿಚ್ಚಿದ. ಆಗ ನಾನು 'ಅಯ್ಯೋ ಗುಗ್ಗೂ, ಅದೆಲ್ಲಾ ಕೃತಯುಗದ ಮಾತು; ಕಲಿಯುಗಕ್ಕಲ್ಲಾ. ನನ್ನ ನೋಡಿ ಬುದ್ಧೀ ಕಲಿ. ನಾ ಆ ದಾಸನ್ನ ನಂಬ್ಕೊಂಡೇ ಇದ್ದಿದ್ರೆ, ಇಷ್ಟು ಮುಂದಕ್ಕೆ ಬರ್ತಾ ಇದ್ನೇ? ನಾ ಹೇಳ್ದಾಗೆ ಕೇಳು. ಚುನಾವಣೆ ಖರ್ಚು ವೆಚ್ಚ ಎಲ್ಲಾ ನಮ್ದು; ಜೀಪು, ಕಾರು ಎಲ್ಲಾ ನಮ್ದು. ನೀ ಮಾತ್ರ ಉತ್ಸವಮೂರ್ತಿ ಹಾಗೆ ನಿನ್ನ ಕ್ಷೇತ್ರದಾಗೆ ಓಡಾಡದ್ರೆ ಸಾಕು ಮೇಲ್ಗರ್ಚೀಗೆ ಇಪ್ಪತ್ಸಾವ್ರ ಕೋಡ್ತೀವಿ,' ಅಂತಾ ಹೇಳ್ದೆ. ತೆಪ್ಪಗೊಪ್ಕೊಂಡ. ಸುಖಾಸುಮ್ನೆ ಇಪ್ಪತ್ಸಾವ್ರ ಬರ್ತದೆ ಅಂದ್ರೆ ಯಾರಯ್ಯಾ ಬಿಡ್ತಾರೆ. ಹಣ ಅಂದ್ರೆ ಹೆಣಾನೂ ಬಾಯ್ಬಿಡ್ತದೆ."

"ನೀನು ಇಷ್ಟು ಹೇಳದ್ರೂ ನಂಬೂದೇ ಕಷ್ಟ"

"ನನ್‌ಮಾತು ನಂಬಯ್ಯಾ ನೀನೂ, ಈಗಲೂ ಭಗವಾನ್‌ದಾಸ ದುರ್ಗಾದಾಸನ ಮನೀಗೆ ಹೋಗ್ತಾ ಬರ್ತಾ ನಮ್ಕಡೆ ಸಿ.ಐ.ಡಿ. ಕೆಲ್ಸಾ ಮಾಡ್ತಾನೆ."

"ನೀ ಒಳ್ಳೇ ಮಿರ್ ಸಾಧಕ ಕಣಯ್ಯಾ."

"ಪಾಲಿಟಿಕ್ಸ್ ಅಂದರೆ ಮಿರ್ ಸಾಧಕ ಕೆಲಸ. ನಾ ಮಾಡೋದು ಅದೇ ನೀ ಮಾಡೋದೂ ಅದೇ."

"ನೀ ಮಹಾ ಮಿರ್ ಸಾಧಕ ಕಣಯ್ಯಾ; ಸಾಮಾನ್ಯ ಮಿರ್ ಸಾಧಕ ಅಲ್ಲ."

"ನೀ ಏನ್ ಕಮ್ಮಿಯಪ್ಪ. ಬಾಯಾಗೆ ದೊಡ್ಡ ದೊಡ್ಡ ತತ್ವ ಹೇಳ್ತಾ ಒಳಗೊಳಗೇ ಕತ್ರಿಪ್ರಯೋಗ ಮಾಡ್ತೀದಿಯಲ್ಲಯ್ಯಾ? ಅನಿಷ್ಟಕ್ಕೆಲ್ಲಾ ಅಂಗಾರಕ ಗುರಿ ಅಂತ ಹೇಳೋಹಾಗೆ ಕೆಟ್ಟ ಮಾತಿಗೆಲ್ಲಾ ನಾನು, ನೀನು ಮಹಾತ್ಮನ ಹಾಗೆ ನಟಿಸ್ತಿಯಾ, ನಟಸಾರ್ವಭೌಮ."

"ಅಲ್ಲಯ್ಯಾ ಶಂಭು, ಆ ದುರ್ಗಾದಾಸನಿಂದಲೇ ಉದ್ಧಾರಾಗಿ ಅವನಿಗೇ ನೀರ್ ತಿರಗುಸ್ತಾ ಇದ್ದೀಯಲ್ಲಾ ನಾ ದೊಡ್ಡ ಮಿರ್ ಸಾಧಕನೋ ನೀನೊ? ಹೇಳು."

"ಹೋಗ್ಲಿ ಬಿಡಿ, ನೀವಿಬ್ರೂ ಮಹಾ ಮಿರ್ ಸಾಧಕರೇ. ನಿಮ್ಮ ಗುಂಪಿಗೆ ಸೇರ್ದ ನಾವು ಸಹ ಒಂದು ತರ್ದ ಸಾಧಕರೇ. ಈಗ ಇನ್ನೊಬ್ಬ ಸಾಧಕ ಭಗವಾನ್‌ದಾಸ ನಮ್ಮ ಜೊತೆಗೆ ಬರ್ತಾನೆ," ಎಂದು ಹೆಮ್ಮಿರ ನುಡಿದು, ಎಲ್ಲರನ್ನೂ ನಗೆಗಡಲಿನಲ್ಲಿ ಮುಳುಗಿಸಿದನು.

"ಮಿಸ್ಟರ್ ಶಂಭುನಾಥ್, ನಾವೂ ಕಾಂಗ್ರೆಸ್ಸಿನವರು; ದುರ್ಗಾದಾಸನು ಕಾಂಗ್ರೆಸ್ಸನವನು. ನೀವು ಅದ್ಹೇಗೆ ಭಗವಾನ್‌ದಾಸನಿಗೆ ಕಾರು, ಜನ, ದುಡ್ಡು ಓಪನ್ ಆಗಿ ಕೊಟ್ಟು ಕ್ಯಾನ್‌ವಾಸ್ ಮಾಡ್ತೀರಿ?" ಎಂದು ಗಾಂಢೀವ ಪ್ರಶ್ನಿಸಿದ.

ಗಾಂಢೀವ ಮಹಾಶಯರೇ, ನಮ್ಮ ಕೂಟಕ್ಕೆ ನೀವಿನ್ನೂ ಹೊಸಬರು. ಸರಿಯಾಗಿ ದೀಕ್ಷೆ ತಗೊಂಡಿಲ್ಲ. ಅದನ್ನೆಲ್ಲಾ ಬಹಿರಂಗವಾಗಿ ಮಾಡ್ತೀವೇನಪ್ಪಾ? ಹಾಗೆ ಮಾಡೋಕ್ಕೆ ನಾವೇನು ದಡ್ಡೇನು? ನಾವು ಬಹಿರಂಗವಾಗಿ ದುರ್ಗಾದಾಸನಿಗೆ ಓಟು ಕೊಡಿ ಅಂತ ಹೇಳ್ತೀವಿ. ಗುಟ್ಟಾಗಿ ಅವನಿಗೆ ಕೈಕೊಡಿ ಅಂತ ಹೇಳ್ತೀವಿ. ನಾನೂ, ದಾಮೋದರನೂ

ಒಂದಿನ ದುರ್ಗಾದಾಸನ ಕ್ಷೇತ್ರಕ್ಕೆ ಹೋಗಿ ಅವನ ಪರ ಕೆಲ್ಸಾ ಮಾಡಿದ ಹಾಗೆ ನಾಟಕ ಮಾಡಿ ಬರ್ತೀವಿ," ಎಂದು ಶಂಭು ನುಡಿದ.

"ನಮ್ಕಡೀ ಮಂದಿ ಯಾರಾರು ಎಲ್ಲೆಲ್ಲಿ ನಿಲ್ಲೋದು ಅಂತ ಆಗಯ್ತಿ?" ಎಂದು ಮಹೋದರ ಪ್ರಶ್ನಿಸಿದ.

"ಅದೆಲ್ಲಾ ಫೈಲೇ ತೀರ್ಮಾನಾಗಯ್ತಿ. ಮಹೋದರ ಮಹಾಶಯರಿಗೆ ರೊಕ್ಕ ಮಾಡೋದು ಬಿಟ್ಟು ಇವೆಲ್ಲಾ ಎಲ್ಲಿ ತಿಳಿತಾವೆ?" ಎಂದು ಹೆಮ್ಮೊರ ಗಹಗಹಿಸಿ ನಕ್ಕ.

"ದಾಮೋದರಪ್ಪ, ಶಂಭುನಾಥಪ್ಪ ಕೇಳ್ದಾಗ ರೊಕ್ಕ ಕೊಡೋದು ನನ್ನ ಕೆಲಸ. ಬಾಕಿ ಉಸಾಬರಿ ನಂಗ್ಯಾಕಪ್ಪ? ಪಾಲಿಟಿಕ್ಸ್ ನಿಮ್ದು; ಬಿಸಿನೆಸ್ ನಮ್ದು," ಎಂದು ಮಹೋದರ ನಕ್ಕನು.

"ದಾಮೋದರ ರಾಜಧಾನಿಯ ಐದನೆಯ ಕ್ಷೇತ್ರ; ನಾನು ಕಮಲಶಿಲೆ ಕ್ಷೇತ್ರ; ಕೆಮ್ಮೊರ ಧವಳಗಿರಿ ಕ್ಷೇತ್ರ; ಹೆಮ್ಮೊರ ಪದ್ಮಗಿರಿ ಕ್ಷೇತ್ರ,'" ಗಾಂಢೀವ ಹೇಮಗಿರಿ ಕ್ಷೇತ್ರ; ಜಲೋದರ ವಿಮಲಗಿರಿ ಕ್ಷೇತ್ರ," ಎಂದು ಶಂಭು ಮಹೋದರನಿಗೆ ಉತ್ತರ ಕೊಟ್ಟನು.

" ಆ ದುರ್ಗಾದಾಸ ಎಲ್ಲಿ ನಿಲ್ತಾನೆ?" ಎಂದು ಮಹೋದರ ಪುನಃ ಪ್ರಶ್ನಿಸಿದ.

"ಅವನು ಮಾಮೂಲಿ ಕ್ಷೇತ್ರ ನಿಂಬೂರ್ ರೂರಲ್," ಎಂದು ಶಂಭು ನುಡಿದ.

"ಒಂದು ಲೇಟೆಸ್ಟ್ ರೂಮರ್ ಕೇಳ್ದೇನಯ್ಯಾ ಶಂಭೂ?" ಎಂದು ಹೆಮ್ಮೊರ ಶಂಭುವನ್ನು ಪ್ರಶ್ನಿಸಿದನು.

"ಅದೇನು ಹೆಮ್ಮೊರ?"

"ಪ್ರತಾಪ್ ಮತ್ತು ಅವನ ಶಿಷ್ಯ ಸೋಮಶೇಖರ ಕಾಂಗ್ರೆಸ್ಸಿಗೆ ರಾಜೀನಾಮೆ ಕೊಟ್ರಂತೆ. ಸೋಮಶೇಖರ ನಿನ್ನ ಮೇಲೆ ಚುನಾವಣೆಗೆ ನಿಲ್ತಾನಂತೆ. ಪ್ರತಾಪ ದಾಮೋದರನ ಮೇಲೆ ಕಂಟೆಸ್ಟ್ ಮಾಡ್ತಾನಂತೆ."

ಹೆಮ್ಮೊರನ ಮಾತುಗಳನ್ನು ಕೇಳಿ ಶಂಭು ಸ್ತಬ್ಧನಾಗಿ ತನ್ನ ಕೈಯಲ್ಲಿದ್ದ ಮಧ್ಯದ ಲೋಟವನ್ನು ಕೆಳಗಿಟ್ಟು ಗಾಬರಿಗೊಂಡ ಧ್ವನಿಯಲ್ಲಿ "ಪ್ರತಾಪನಿಗೆ ಕಾಂಗ್ರೆಸ್ ಟಿಕೆಟ್ ಸಿಕ್ಕಿದೆಯಲ್ಲಾ,?" ಎಂದನು

"ಅವನು ಅದನ್ನು ರೆಫ್ಯೂಸ್ ಮಾಡಿದನಂತೆ," ಎಂದ ಹೆಮ್ಮೊರ.

"ಸೋಮಶೇಖರ ಕಮಲಶಿಲೆ.... ಕ್ಷೇತ್ರಕ್ಕೆ... ನಿಂತರೆ...ನಿಮಗೆ ಬ್ಹಾಳಾ....ಕಷ್ಟ ಆಗಬಹುದು....ಶಂಭುನಾಥ್. ಅವ ಅಲ್ಲಿ ಬಹಳ ಪಾಪುಲರ್ ಅಂತಾ ಹೇಳ್ತಾರೆ. ನೀವು ಬೇರೆ ಕ್ಷೇತ್ರಕ್ಕೆ ನಿಲ್ಲೋದು ವಾಸಿ ಅಂತ ಕಾಣ್ತದೆ," ಎಂದು ಜಲೋದರ ನುಡಿದ.

"ಈಗ ಕ್ಷೇತ್ರ ಬದಲಾಸೂಕ್ಕೆ ಟೂ ಲೇಟ್. ಒಂದು ವರ್ಷದಿಂದ ಅಲ್ಲೇ ನೀಲ್ತೀನೀ ಅಂತ ಜನಗಳಿಗೆ ಹೇಳ್ತಾ ಬಂದೀನಿ. ಸೆಂಟ್ರಲ್ ಎಲೆಕ್ಷನ್ ಕಮಿಟಿ ತೀರ್ಮಾನಾನೂ ಆಗಿ ಹೋಗ್ಯದೆ. ಈಗ ಹ್ಯಾಗೆ ಬದಲಾವಣೆ ಮಾಡೋದು. ನಿನ್ನ ದಯದಿಂದ ಅಲ್ಲೇ ನಿಂತು ಗೆದ್ದು ಬರ್ತೀನಿ ಎಂದು ಶಂಭು ಅಂತರಾಳದಲ್ಲಿ ಭಯದಿಂದ ತತ್ತರಿಸಿದ್ದರೂ, ನಾಲಿಗೆಯ ತುದಿಯಿಂದ ನಿರ್ಭಯದ ನುಡಿಗಳನ್ನಾಡಿದನು.

"ಇದೆಲ್ಲಾ ಆ ದಾಸನ ಕುತಂತ್ರ. ಅವನ ಸಪೋರ್ಟ ಇಲ್ದೆ ಇದ್ರೆ ಪ್ರತಾಪ ಕಾಂಗ್ರೆಸ್ ಎಲ್ಲಿ ಬಿಡ್ತಾ ಇದ್ದ?" ಎಂದು ದಾಮೋದರ ವಕ್ರ ಸ್ವರದಿಂದ ನುಡಿದ.

ಗುಪ್ತ ಸಭೆಯು ಮುಕ್ತಾಯವಾಗುವ ಮುನ್ನ ತಮ್ಮ ಗುಂಪಿನ ಗೆಲುವಿಗಾಗಿ ಏನೇನು ಮಾಡಬೇಕೆಂಬುದನ್ನು ಗುಪ್ತ ಕೂಟದ ಮುಂದಾಳುಗಳು ಸೂಕ್ಷ್ಮವಾಗಿ ಪರಿಶೀಲಿಸಿದರು. ಚುನಾವಣಾ ಪ್ರಚಾರಕ್ಕಾಗಿ ಕೆಲವು ಪತ್ರಿಕೆಗಳನ್ನು ಹೊರಡಿಸಬೇಕೆಂದೂ, ತಮ್ಮ ಗುಂಪಿನ ಅಭ್ಯರ್ಥಿಗಳಿಗೆ ಅವರವರ ಅವಶ್ಯಕತೆಗನುಗುಣವಾಗಿ ಧನಸಹಾಯ ಮಾಡಬೇಕೆಂದೂ, ಏನಾದರೂ ಮಾಡಿ ದುರ್ಗಾದಾಸರು ಚುನಾವಣೆಯಲ್ಲಿ ಸೋಲುವಂತೆ ಮಾಡಬೇಕೆಂದೂ ನಿರ್ಧರಿಸಿದರು. ಇಷ್ಟೆಲ್ಲಾ ಮಾತುಕತೆ ಮುಗಿಯುವ ವೇಳೆಗೆ ಮಧ್ಯರಾತ್ರಿಯಾಗಿತ್ತು. ಮೇಜಿನ ಮೇಲಿದ್ದ ಸೀಸಗಳೂ, ತಟ್ಟೆಗಳೂ ಬರಿದಾಗಿದ್ದವು. ರಾಜ್ಯದ ಭವಿಷ್ಯವನ್ನು ನೆಟ್ಟಗೆ ಮಾಡಲು ಹೊರಟಿದ್ದ ನಾಯಕ ಮಣಿಗಳು ಮದ್ಯದ ಅಮಲಿನಲ್ಲಿ ಓಲಾಡುತ್ತಾ ತೂರಾಡುತ್ತಾ ತಮ್ಮ ತಮ್ಮ ಮನೆಗಳಿಗೆ ತೆರಳಿದರು.

* * * *

## ೬. ಕೊಳ್ಳಲಾಗದವನ ಕೊಲೆ

ಪ್ರತಾಪರಾಜನೂ, ಸೋಮಶೇಖರನೂ ಕಾಂಗ್ರೆಸ್ ಅಧ್ಯಕ್ಷರಿಗೆ ರಾಜೀನಾಮೆ ಪತ್ರಗಳನ್ನು ಕಳುಹಿಸಿದ ನಂತರ, ತಾವು ಕಾಂಗ್ರೆಸ್ಸನ್ನು ಬಿಡಲು ಕಾರಣಗಳೇನೆಂಬು ದನ್ನು ವಿವರಿಸಿ, ಒಂದು ಬಹಿರಂಗ ಹೇಳಿಕೆಯನ್ನು ನೀಡಿದ್ದರು. ರಾಜ್ಯದ ಕಾಂಗ್ರೆಸ್ ಕಳ್ಳರಕೂಟದಂತಿರುವುದರಿಂದ ತಾವು ಆ ಕೂಟದಲ್ಲಿ ಸೇರಿಕೊಂಡಿರಲು ಸಾಧ್ಯವಿಲ್ಲ ವೆಂದೂ, ಶಂಭು ದಾಮೋದರರು ಚುನಾವಣೆಯಲ್ಲಿ ಗೆದ್ದು ಬಂದರೆ ರಾಜ್ಯಕ್ಕೆ ವಿಪತ್ತು ಕಾದಿದೆ ಎಂದೂ, ಆ ವಿಪತ್ತನ್ನು ತಪ್ಪಿಸುವ ಸಲುವಾಗಿ ತಾವು ಚುನಾವಣೆಯಲ್ಲಿ ಸ್ಪರ್ಧಿಸುವುದು ಅವಶ್ಯಕವಾಗಿ ಪರಿಣಮಿಸಿದೆ ಎಂದೂ ಆ ಹೇಳಿಕೆ ಸ್ಪಷ್ಟ ಪಡಿಸಿದ್ದರು.

ಅವರಿಬ್ಬರ ಈ ಬಹಿರಂಗ ಹೇಳಿಕೆಯಿಂದ ಶಂಭು ದಾಮೋದರರು ತಳಮಳಗೊಂಡರು. ಚುನಾವಣೆಯಲ್ಲಿ ತಾವು ಗೆದ್ದು ಬರುತ್ತೇವೆಂಬ ಒಣಜಂಬದ ಮಾತುಗಳನ್ನಾಡುತ್ತಿದ್ದರೂ, ಕಳವಳವು ಅವರಿಬ್ಬರ ಮನಸ್ಸಿನಲ್ಲಿಯೂ ಮನೆ ಮಾಡಿದ್ದಿತು. ಕೇವಲ ಹತ್ತು ವರ್ಷಗಳ ಹಿಂದೆ ಕಳ್ಳನಾಗಿ ಬೀದಿಯ ಭಿಕಾರಿಯಾಗಿದ್ದ ಶಂಭು ಅಂದು ರಾಜ್ಯದ ಪ್ರಥಮ ಶ್ರೇಣಿಯ ಮುಂದಾಳುಗಳಲ್ಲಿ ಒಬ್ಬನಾಗಿದ್ದನು. ಇನ್ನು ಕೇವಲ ಕೆಲವು ತಿಂಗಳುಗಳಲ್ಲಿ ತನ್ನ ಜೀವನದ ಅಂತಿಮ ಗುರಿಯನ್ನು ಸಾಧಿಸಿ ಮಂತ್ರಿಯಾಗಿ ಮೆರೆಯಬಹುದೆಂಬ ಹೊಂಗನಸನ್ನು ಕಾಣುತ್ತಿದ್ದ ಅವನಿಗೆ ಸೋಮಶೇಖರನು ಅದೃಷ್ಟದ ಹಾದಿಯಲ್ಲಿ ಅಡ್ಡ ಬಂದ ದೊಡ್ಡ ವಿಘ್ನದಂತಿದ್ದನು. ಆ ವಿಘ್ನವನ್ನು ಹೇಗೆ ನಿವಾರಿಸಬೇಕೆಂಬುದೇ ಅವನ ಚಿಂತೆಯಾಗಿತ್ತು.

ಆ ದಿನ ರಾತ್ರಿ, ದಾಮೋದರನ ಮನೆಯಲ್ಲಿ ಸೋಮಶೇಖರನು ತನ್ನೆದುರು ಸ್ಪರ್ಧಿಸುತ್ತಾನೆಂಬ ಸುದ್ದಿಯನ್ನು ಕೇಳಿದ ಲಾಗಾಯ್ತು ಶಂಭು ಹಲವಾರು ಹಂಚಿಕೆಗಳ ಯೋಜನೆಯಲ್ಲಿ ಮಗ್ನನಾಗಿದ್ದನು. ಒಂದು ವಾರದ ನಂತರ, ಅವನು ತನಗಾಪ್ತನಾದ ಸ್ನೇಹಿತನೊಬ್ಬನನ್ನು, ಸೋಮಶೇಖರನ ಬಳಿಗೆ ಸಂಧಾನಕ್ಕೆ ಕಳುಹಿಸಿಕೊಟ್ಟನು. ಸೋಮಶೇಖರನು ಚುನಾವಣೆಗೆ ನಿಲ್ಲುವ ಸನ್ನಾಹವನ್ನು ಕೈ ಬಿಟ್ಟರೆ ಒಂದು ಲಕ್ಷರೂಪಾಯಿಗಳನ್ನು ಕೊಡುವುದಾಗಿ, ಆ ಸ್ನೇಹಿತನ ಮೂಲಕ ಸೋಮಶೇಖರನಿಗೆ ಹೇಳಿ ಕಳುಹಿಸಿದ್ದನು.

ಶಂಭುವಿನ ಆ ನಿಯೋಗಿಯು ಕಮಲಶಿಲೆಗೆ ಹೋಗಿ, ಸೋಮಶೇಖರನನ್ನು ಕಂಡು, ಶಂಭುವಿನ ಸಂದೇಶವನ್ನು ಮುಟ್ಟಿಸಿ, ನಾನಾ ವಿಧವಾದ ಚಮತ್ಕಾರಗಳ ಮಾತುಗಳಿಂದ ನಾನಾ ರೀತಿಯಲ್ಲಿ ಸೋಮಶೇಖರನನ್ನು ಪುಸಲಾಯಿಸತೊಡಗಿದನು. ಆದರೆ ಸೋಮಶೇಖರನು ಅವನ ಸವಿ ಮಾತುಗಳಿಗೆ ಮರುಳಾಗುವ ಸೂಚನೆ

ತೋರಲಿಲ್ಲ. ಆಗ ನಿಯೋಗಿಯು ಸೋಮಶೇಖರನ ಹಿತೈಷಿಯಂತೆ ನಟಿಸುತ್ತಾ "ಸೋಮಶೇಖರಾ, ನೀನಿನ್ನೂ ಯುವಕ ಮನೆಗೆ ಬಂದ ಲಕ್ಷ್ಮಿಯನ್ನು ಒದ್ದೋಡಿಸುವುದು ಮೂರ್ಖತನ. ಜೀವಮಾನಪರ್ಯಂತರ ದುಡಿದರೂ ನೀನು ಒಂದು ಲಕ್ಷ ರೂಪಾಯಿಗಳನ್ನು ಸಂಪಾದಿಸಲಾರೆ. ಯೋಚನೆ ಮಾಡು," ಎಂದನು

"ಯೋಚನೆ ಮಾಡಿಯೇ ತಮಗೆ ಉತ್ತರ ಹೇಳಿದ್ದು. ತಾವು ಕೊಡಬಯಸುವ ಒಂದು ಲಕ್ಷ ರೂಪಾಯಿ ಮನೆಗೆ ಬಂದ ಲಕ್ಷ್ಮಿಯಲ್ಲ; ಮನೆಗೆ ಬಂದ ಮಹಾಮಾರಿ. ನಾನು ಹಣಕ್ಕಾಗಿ ಅಥವಾ ಅಧಿಕಾರಕ್ಕಾಗಿ ಶಾಸಕನಾಗಲು ಬಯಸಿದವನಲ್ಲ. ಭ್ರಷ್ಟ ಶಂಭುವನ್ನು ಸೋಲಿಸುವುದಕ್ಕಾಗಿ ಚುನಾವಣೆಗೆ ನಿಲ್ಲಲು ನಿರ್ಧರಿಸಿದ್ದೇನೆ. ಅವನನ್ನು ಸೋಲಿಸುವುದಾಗಿ ಜನರಿಗೆ ಮಾತು ಕೊಟ್ಟಿದ್ದೇನೆ.

"ಮಾತು ಕೊಟ್ಟಿದ್ದರೆ, ಮಾತಿನಂತೆ ಉಮೇದುವಾರಿಕೆ ಅರ್ಜಿಯನ್ನು ಸಲ್ಲಿಸು. ಅನಂತರ ಏನಾದರು ಕುಂಟು ನೆಪಮಾಡಿ, ಉಮೇದುವಾರಿಕೆಯನ್ನು ವಾಪಸ್ಸು ಪಡೆದರಾಯಿತು. ನಂಟೂ ಉಳಿಯುತ್ತದೆ; ರತ್ನವೂ ಲಭಿಸುತ್ತದೆ."

"ಸ್ವಾಮಿ, ಹಣಕ್ಕಾಗಿ ನನ್ನ ಆದರ್ಶವನ್ನು ಬಿಡಲಾರೆ. ಆದರ್ಶವನ್ನು ಬಿಡುವುದಕ್ಕಿಂತ ಪ್ರಾಣವನ್ನೇ ಬಿಡುವುದು ಮೇಲು," ಎಂದು ಸೋಮಶೇಖರನು ನಿಯೋಗಿಗೆ ಅಂತಿಮವಾಗಿ ತಿಳಿಸಿದನು.

ಸೋಮಶೇಖರನು ತನ್ನ ಗಾಳಕ್ಕೆ ಸಿಗತಕ್ಕ ಮೀನಲ್ಲವೆಂಬುದನ್ನು ಮನಗಂಡ ನಿಯೋಗಿಯು ಸಪ್ಪೆ ಮೋರೆಯಿಂದ ಹಿಂದಿರುಗಿ ಹೋಗಿ, ತನ್ನ ನಿಯೋಗ ಸಫಲವಾಗ ಲಿಲ್ಲವೆಂದು ಶಂಭುವಿಗೆ ವರದಿ ಮಾಡಿದನು. ಸೋಮಶೇಖರನನ್ನು ಹಣದಿಂದ ಕೊಂಡು ಕೊಳ್ಳಬೇಕೆಂದಿದ್ದ ಶಂಭುವಿನ ಆಸೆ ನಿರಾಶೆಯಾಯಿತು.

ಚುನಾವಣೆಗೆ ಉಮೇದುವಾರಿಕೆಯ ಅರ್ಜಿಯನ್ನು ಸಲ್ಲಿಸುವ ಕಾಲ ಸಮೀಪಿಸು ತ್ತಿತ್ತು. ಸೋಮಶೇಖರನು ತನ್ನೆದುರು ಸ್ಪರ್ಧಿಸಿದರೆ ಸೋಲು ಶತ ಸಿದ್ಧವೆಂದು ಶಂಭುವಿನ ಆತ್ಮ ಬಾರಿಬಾರಿಗೂ ಸಾರಿಸಾರಿ ಹೇಳುತ್ತಿತ್ತು. ಒಮ್ಮೊಮ್ಮೆ ಅವನು ತಲೆ ಕೆಟ್ಟವನಂತೆ ವರ್ತಿಸುತ್ತಿದ್ದನು. ಕೊನೆಗೆ ಇನ್ನೇನೂ ಉಪಾಯ ತೋರದೆ, ಕೊಂಡುಕೊಳ್ಳಲಾಗದ ಸೋಮಶೇಖರನನ್ನು ಕೊಂದಾದರೂ ತನ್ನ ಗುರಿಯನ್ನು ಸಾಧಿಸಬೇಕೆಂದು ನಿರ್ಧರಿಸಿದನು

ಸೋಮಶೇಖರನು ನಿಂಬೂರು ಜಿಲ್ಲೆಯ ಕಮಲಶಿಲೆಯಲ್ಲಿ ವಾಸವಾಗಿದ್ದನು. ಅವನು ಆ ತಾಲ್ಲೂಕಿನ ಅತ್ಯಂತ ಪ್ರಭಾವಶಾಲಿ ವ್ಯಕ್ತಿಯಾಗಿದ್ದನು. ಅವನ ಮಾತು ಬಹು ಮನೆಗಳಲ್ಲಿ ವೇದವಾಕ್ಯವಾಗಿತ್ತು. ಆದ್ದರಿಂದ ಚುನಾವಣೆಯಲ್ಲಿ ಅವನನ್ನು ಸೋಲಿಸುವುದು ಯಾರಿಗೂ ಸಾಧ್ಯವಿರಲಿಲ್ಲ. ಸೋಮಶೇಖರನ ತಂಗಿ, ಪಕ್ಕದ ಸ್ವರ್ಣಗಿರಿ ತಾಲ್ಲೂಕಿನ ಚಂದ್ರಾಪುರವೆಂಬ ಹಳ್ಳಿಯಲ್ಲಿ ವಾಸವಾಗಿದ್ದಳು. ವಿಧವೆಯಾದ ಆ ತಂಗಿಯ ಭೂಮಿಕಾಣಿಗಳ ವಹಿವಾಟನ್ನು ಸೋಮಶೇಖರನೇ ನೋಡಿಕೊಳ್ಳುತ್ತಿದ್ದನು. ಆ ವಹಿವಾಟಿನ ದೆಸೆಯಿಂದ ಅವನು ಪ್ರತಿ ಭಾನುವಾರ ಚಂದ್ರಾಪುರಕ್ಕೆ ಹೋಗಿ ಬರುತ್ತಿದ್ದನು.

ಚಂದ್ರಾಪುರಕ್ಕೆ ಹೋಗಬೇಕಾದರೆ ಸೋಮಶೇಖರನು ಕಮಲಶಿಲೆಯಿಂದ ಸ್ವರ್ಣಗಿರಿಗೆ ಹದಿನೈದು ಮೈಲಿಗಳ ದೂರ ಬಸ್ಸಿನಲ್ಲಿ ಪ್ರಯಾಣಮಾಡಿ ಅಲ್ಲಿಂದ ನಾಲ್ಕು ಮೈಲಿಗಳ ದೂರ ಕೊರಕಲು ರಸ್ತೆಯೊಂದರಲ್ಲಿ ನಡೆದು ಹೋಗುತ್ತಿದ್ದನು. ಈ ನಾಲ್ಕು ಮೈಲಿಗಳ ರಸ್ತೆಯು ಒಂದು ಕಣಿವೆಯ ಮಧ್ಯೆ ಅರಣ್ಯ ಪ್ರದೇಶದಲ್ಲಿ ಹಾದು ಹೋಗುತ್ತಿತ್ತು. ಶಂಭುವಿಗೆ ಈ ವಿಚಾರಗೊತ್ತಾಗಿತ್ತು.

ಸೋಮಶೇಖರನನ್ನು ಆ ಕಣಿವೆಯ ಮಾರ್ಗದಲ್ಲಿ ಕೊಲೆ ಮಾಡಿಸಿದರೆ ತನ್ನ ಮೇಲೆ ಗುಮಾನಿ ಬರಲಾರದೆಂದು, ಶಂಭು ತರ್ಕಿಸಿದನು. ಮುಂಜಾಗ್ರತೆಯ ಅಂಗವಾಗಿ ಸ್ವರ್ಣಗಿರಿ ತಾಲ್ಲೂಕಿನ ಪೋಲಿಸ್ ಅಧಿಕಾರಿಗಳನ್ನೂ ಸರ್ಕಾರಿ ಡಾಕ್ಟರನ್ನೂ ಲಂಚದಿಂದ ತನ್ನ ಬಲೆಗೆ ಹಾಕಿಕೊಂಡನು. ಸೋಮಶೇಖರನ ಕೊಲೆಗಾಗಿ ರಾಜಧಾನಿಯ ಹತ್ಯಾಕಾರಿಗಳಿಬ್ಬರನ್ನು ನೇಮಕಮಾಡಿದನು. ಮುಂದಿನ ಶನಿವಾರ ಆ ಹತ್ಯಾಕಾರಿಗಳಿಬ್ಬರೂ ತನ್ನ ಆತ್ಮ ಸ್ನೇಹಿತನೊಬ್ಬನ ನೇತೃತ್ವದಲ್ಲಿ ರಾಜಧಾನಿಯಿಂದ ಒಂದು ಜೀಪಿನಲ್ಲಿ ಹೊರಡತಕ್ಕದ್ದೆಂದೂ, ಮರುದಿನ ಸೋಮಶೇಖರನು ಕಣಿವೆಯ ಹಾದಿಯಲ್ಲಿ ನಡೆದು ಹೋಗುತ್ತಿರುವಾಗ ಅವನನ್ನು ಕೊಲ್ಲಬೇಕೆಂದೂ ವ್ಯವಸ್ಥೆ ಮಾಡಿದನು.

ನಿಯೋಜಿತ ಹಂಚಿಕೆಯ ಪ್ರಕಾರ, ಕೊಲೆಗಾರರನ್ನೊಳಗೊಂಡ ಜೀಪು ಶಂಭುವಿನ ಸ್ನೇಹಿತರ ಸಮೇತ ಶನಿವಾರ ರಾತ್ರಿ ರಾಜಧಾನಿಯಿಂದ ಹೊರಟಿತು. ಬೆಳಿಗ್ಗೆ ಸುಮಾರು ಎಂಟುಗಂಟೆಗೆ ಅದು ಸ್ವರ್ಣಗಿರಿಯನ್ನು ತಲುಪಿತು. ಸ್ವರ್ಣಗಿರಿಯ ಬಸ್ ನಿಲ್ದಾಣದ ಸಮೀಪ ಜೀಪನ್ನು ನಿಲ್ಲಿಸಿ ಅದರ ಚಾಲಕನು ಏನೋ ರಿಪೇರಿ ಮಾಡುತ್ತಿದ್ದವನಂತೆ ನಟಿಸುತ್ತಿದ್ದನು. ವಾಸ್ತವಿಕವಾಗಿ ಜೀಪಿನಲ್ಲಿದ್ದವರು ಕಮಲಶಿಲೆಯಿಂದ ಬಸ್ಸಿನಲ್ಲಿ ಬರಬೇಕಾಗಿದ್ದ ಸೋಮಶೇಖರನಿಗಾಗಿ ಕಾಯುತ್ತಿದ್ದರು.

* * * *

ಭಾನುವಾರ ಬೆಳಿಗ್ಗೆ ಆರು ಗಂಟೆಯ ಸಮಯದಲ್ಲಿ ಸೋಮಶೇಖರನು ತನ್ನ ತಂಗಿಯ ಊರಾದ ಚಂದ್ರಾಪುರಕ್ಕೆ ಹೊಡುವ ಸಿದ್ಧತೆಯಲ್ಲಿ ತೊಡಗಿದ್ದನು. ಅವನ ನಾಲ್ಕು ವರ್ಷದ ಮುದ್ದುಮಗಳು ಗಿರಿಜ, ದಿನವೂ ಏಳು ಗಂಟೆಗೆ ಏಳುತ್ತಿದ್ದವಳು. ಆದಿನ ಆರು ಗಂಟೆಗೇ ಎದ್ದು, ತಂದೆಯ ಬಳಿಗೆ ಬಂದು, "ಅಪ್ಪ..... ನೀ....ಹೋಬ್ಯಾಡ....ನನ್ ಜೊತೀ ಇರು," ಎಂದು ಮೊದಲು ತೊದಲು ನುಡಿಗಳಿಂದ ತನ್ನ ತಂದೆಯನ್ನು ತಬ್ಬಿಕೊಂಡಳು. ಸೋಮಶೇಖರನು ಮಗಳನ್ನು ಎತ್ತಿಕೊಂಡು, ಅವಳ ಎರಡು ಕೆನ್ನೆಗಳಿಗೆ ಮುತ್ತಿಟ್ಟು, "ನಾ ಬೇಗ ಬರ್ತೀನಿ. ನಿಂಗೆ ಕಬ್ಬು ತರ್ತೀನಿ," ಎಂದು ಮಗಳನ್ನು ಸಂತೈಸಿ ಬಸ್ ನಿಲ್ದಾಣಕ್ಕೆ ಹೊರಟುಹೋದನು.

ಕಮಲಶಿಲೆಯಿಂದ ಹೊರಟ ಬಸ್ಸು ಮಾರ್ಗ ಮಧ್ಯೆ ಅಲ್ಲಲ್ಲಿ ನಿಂತು ಸ್ವರ್ಣಗಿರಿ ತಲುಪಿದಾಗ ಬೆಳಿಗ್ಗೆ ಒಂಬತ್ತು ಗಂಟೆಯಾಗಿತ್ತು. ಸೋಮಶೇಖರನು ಬಸ್ಸಿನಿಂದ ಕೆಳಗಿಳಿದು ಚಂದ್ರಾಪುರದ ಹಾದಿಯನ್ನು ಹಿಡಿದು ಹೋಗುತ್ತಿದ್ದುದನ್ನು ಜೀಪಿನಲ್ಲಿದ್ದವರು ನೋಡಿದರು. ಅರ್ಧಗಂಟೆಯನಂತರ, ಜೀಪು ಸೋಮಶೇಖರನನ್ನು ಹಿಂಬಾಲಿಸಿ

ಚಂದ್ರಾಪುರಕ್ಕೆ ಹೋಗುವ ರಸ್ತೆಯಲ್ಲಿ ನಿಧಾನವಾಗಿ ಸಾಗುತ್ತಿತ್ತು. ಸೋಮಶೇಖರನಿಗೂ ತಮಗೂ ಕಾಲು ಕಿಲೋಮೀಟರ್ ಅಂತರವಿರುವ ರೀತಿಯಲ್ಲಿ ಜೀಪಿನ ವೇಗವನ್ನು ನಿಯಂತ್ರಿಸಿದ್ದರು. ಸೋಮಶೇಖರನು ಕಣಿವೆಯ ಮಧ್ಯೆ ಹೋಗುತ್ತಿರುವಾಗ ಅವನ ಮೇಲೆ ಜೀಪನ್ನು ಹಾರಿಸಿ, ಅವನನ್ನು ಮುಗಿಸಬೇಕೆಂದು ಕೊಲೆಗಡುಕರು ಹಂಚಿಕೆ ಮಾಡಿದ್ದರು.

ಸಾವು ತನ್ನನ್ನು ಹಿಂಬಾಲಿಸಿ ಬರುತ್ತದೆ ಎಂಬ ಅರಿವಿಲ್ಲದೆ, ಸೋಮಶೇಖರನು ಮುಂದೆ ಸಾಗುತ್ತಿದ್ದನು. ಜೀಪು ಅವನ ಹಿಂದೆಯೇ ಬರುತ್ತಿತ್ತು. ಸ್ವಲ್ಪ ದೂರದಲ್ಲಿಯೇ ಕಣಿವೆ ಕಾಣಿಸಿತು. ಸ್ವಲ್ಪ ಹೊತ್ತಿನ ನಂತರ ಸೋಮಶೇಖರನು ಕಣಿವೆಯನ್ನು ತಲುಪಿದನು. ಕಣಿವೆಯಲ್ಲಿ ಇಳಿಜಾರಾದ ಒಂದು ತಿರುವಿನಲ್ಲಿ ಅವನು ನಡೆದು ಹೋಗುತ್ತಿರುವಾಗ ಜೀಪು ಅತಿ ವೇಗದಲ್ಲಿ ತಾನಿದ್ದೆಡೆಗೆ ಧಾವಿಸುತ್ತಿದ್ದುದನ್ನು ಕಂಡನು. ಆ ಕೊರಕಲು ಹಾದಿಯಲ್ಲಿ ಅಷ್ಟೊಂದು ವೇಗವಾಗಿ ಬರುತ್ತಿದ್ದ ವಾಹನವನ್ನು ಕಂಡ ಅವನು ಸ್ವಲ್ಪ ಚಕಿತನಾದನು. ಮುಂಬರುವ ಚುನಾವಣೆಯ ಸಂಬಂಧ ತನ್ನೊಡನೆ ಮಾತನಾಡಲು ತನ್ನ ಸ್ನೇಹಿತರು ಜೀಪಿನಲ್ಲಿ ಬರುತ್ತಿರಬಹುದೆಂದು ಅವನು ಯೋಚಿಸತೊಡಗಿದನು.

ಅವನು ಯೋಚಿಸುತ್ತಿರುವಷ್ಟರಲ್ಲೇ, ಜೀಪು ಅತಿ ವೇಗದಿಂದ ಅವನಿದ್ದೆಡೆಗೆ ಬಂದು, ಇನ್ನೇನು ಅವನ ಮೇಲೆ ಹರಿಯುವುದಲ್ಲಿತ್ತು. ಅಷ್ಟರಲ್ಲಿ ಅವನು ಚಂಗನೆ ನೆಗೆದು ರಸ್ತೆಯ ಒಂದು ಪಕ್ಕಕ್ಕೆ ಹಾರಿ, ಅಪಾಯದಿಂದ ಪಾರಾದನು. ಆದರೆ ಸಾವಿನಿಂದ ಪಾರಾಗಲಿಲ್ಲ. ಸೋಮಶೇಖರನು ಆಕಸ್ಮಿಕವಾಗಿ ಜೀಪಿಗೆ ಸಿಕ್ಕು ಮೃತಪಟ್ಟನೆಂದು ತೋರ್ಪಡಿಸುವ ಸಲುವಾಗಿ ಅವನ ಮೇಲೆ ಜೀಪನ್ನು ಹಾರಿಸಬೇಕೆಂದು ಕೊಲೆ ಗಡುಕರು ಯೋಚಿಸಿದ್ದರು. ಆದರೆ ಅವರ ಪ್ರಯತ್ನ ವಿಫಲವಾಯಿತು. ಆದರೂ ಅವರು ಕೊಲೆ ಪ್ರಯತ್ನವನ್ನು ಬಿಡುವವರಾಗಿರಲಿಲ್ಲ.

ಜೀಪು ನಿಂತಿತು. ಸೋಮಶೇಖರನು ಜೀಪಿನಲ್ಲಿದ್ದವರ ಕಡೆಗೆ ನೋಡುತ್ತಿದ್ದನು. ದಾಂಡಿಗರಿಬ್ಬರು ಕಬ್ಬಿಣದ ಸಲಾಕೆಗಳನ್ನು ಕೈಯಲ್ಲಿ ಹಿಡಿದು ಜೀಪಿನಿಂದ ಕೆಳಗೆ ದುಮುಕಿದರು. ಸೋಮಶೇಖರನು ತಬ್ಬಿಬ್ಬಾಗಿ ಏನು ಮಾಡಬೇಕೆಂಬುದನ್ನು ಯೋಚಿಸುತ್ತಿರುವಷ್ಟರಲ್ಲೇ, ಅವರಿಬ್ಬರು ಅವನಿದ್ದೆಡೆಗೆ ಧಾವಿಸಿ ಏಕ ಕಾಲದಲ್ಲಿ ಕಬ್ಬಿಣದ ಸಲಾಕೆಗಳಿಂದ ಅವನ ತಲೆಗೆ ಬಲವಾಗಿ ಹೊಡೆದರು. ಅವನು ಪ್ರಜ್ಞಾಹೀನನಾಗಿ ಕೆಳಕ್ಕುರುಳಿದನು. ರಕ್ತವು ಅವನ ಮೂಗು ಬಾಯಿಗಳಿಂದ ಸುರಿಯುತ್ತಿತ್ತು, ಆದರೆ ಪ್ರಾಣವಿನ್ನೂ ಹೋಗಿರಲಿಲ್ಲ. ಕೊಲೆಪಾತಕರಿಬ್ಬರೂ ಸೇರಿ ಕೆಳಕ್ಕೆ ಬಿದ್ದಿದ್ದ ಅವನನ್ನು ಎತ್ತಿ ರಸ್ತೆಯ ಮಧ್ಯಕ್ಕೆ ಎಳೆದು ಹಾಕಿದರು. ಆ ನಂತರ ಜೀಪನ್ನು ಎರಡು ಬಾರಿ ಅವನ ದೇಹದ ಮೇಲೆ ಅತ್ತಿಂದ ಇತ್ತ, ಇತ್ತಿಂದ ಅತ್ತ ಓಡಾಡಿಸಿ, ಅವನು ಸತ್ತನೆಂದು ನಿರ್ಧಾರವಾದ ಮೇಲೆ, ಸ್ವರ್ಣಗಿರಿಯ ಕಡೆಗೆ ಜೀಪಿನಲ್ಲಿ ಧಾವಿಸಿದರು.

ಸೋಮಶೇಖರನು ಆಕಸ್ಮಾತ್ ಜೀಪಿಗೆ ಸಿಕ್ಕಿ ಮೃತಪಟ್ಟನೆಂದು ರುಜುವಾತು ಸೃಷ್ಟಿಸಲಿಕ್ಕಾಗಿ ಕೊಲೆಪಾತಕರು ಉದ್ದೇಶ ಪೂರ್ವಕವಾಗಿಯೇ ಅವನ ದೇಹದ ಮೇಲೆ

ಜೀಪನ್ನು ಹತ್ತಿಸಿ ಓಡಾಡಿಸಿದ್ದರು. ಸ್ವರ್ಣಗಿರಿಯ ಹೆದ್ದಾರಿಯನ್ನು ಹಿಡಿದ ಅವರು ನೇರವಾಗಿ ಸ್ವರ್ಣಗಿರಿ ಪೋಲಿಸ್ ಠಾಣೆಗೆ ಹೋಗಿ, ಅಲ್ಲಿದ್ದ ಇನ್‌ಸ್ಪೆಕ್ಟರಿಗೆ ತಮ್ಮ ಸಾಹಸದ ಕೃತ್ಯವನ್ನು ಗುಟ್ಟಾಗಿ ತಿಳಿಸಿ, ಅಲ್ಲಿಂದ ಮತ್ತೆ ಹಿಂದಿರುಗಿ ಬಂದು, ರಾಜಧಾನಿಯ ಕಡೆಗೆ ಹೊರಟು ಹೋದರು.

ಸೋಮಶೇಖರನ ಕೊಲೆಯಾದ ಸ್ಥಳವು ಸ್ವರ್ಣಗಿರಿ ತಾಲ್ಲೂಕಿಗೆ ಸೇರಿದ್ದ ಪ್ರದೇಶದಂತೆ ಕಾಣುತ್ತಿದ್ದರೂ, ಅದು ವಾಸ್ತವಿಕವಾಗಿ ಪಕ್ಕದ ಅಮರಶಿಲ ತಾಲ್ಲೂಕಿನ ಸೇರಿದ್ದಾಗಿತ್ತು. ಶಂಭುವೂ, ಅವನ ಸಂಗಾತಿಗಳೂ, ಕಣಿವೆ ಇದ್ದ ಆ ಕೋಚು ಪ್ರದೇಶವು ಸ್ವರ್ಣಗಿರಿ ತಾಲ್ಲೂಕಿಗೆ ಸೇರಿದ ಪ್ರದೇಶವೆಂಬ ತಪ್ಪು ಕಲ್ಪನೆಯಿಂದ, ಸ್ವರ್ಣಗಿರಿ ತಾಲ್ಲೂಕಿನ ಪೋಲಿಸ್ ಅಧಿಕಾರಿಗಳನ್ನು ತಮ್ಮ ಗುಪ್ತ ಪಿತೂರಿಗೆ ಪಾಲುಗಾರರನ್ನಾಗಿ ಸೇರಿಸಿಕೊಂಡಿದ್ದರು. ಸ್ವರ್ಣಗಿರಿಯ ಪೋಲಿಸ್ ಅಧಿಕಾರಿಗಳೂ ಸಹ ಆ ಪ್ರದೇಶವು ತಮ್ಮ ಅಧಿಕಾರ ವ್ಯಾಪ್ತಿಗೆ ಸೇರಿದ್ದೆಂಬ ತಪ್ಪು ಕಲ್ಪನೆಯಿಂದ ಕೂಡಿದ್ದರು.

ಕೊಲೆಯಾದ ಅರ್ಧ ಗಂಟೆಯೊಳಗಾಗಿ, ದಾರಿ ಹೋಕರಿಬ್ಬರು ದಾರಿಯಲ್ಲಿ ಬಿದ್ದಿದ್ದ ಸೋಮಶೇಖರನ ಶವವನ್ನು ನೋಡಿ ಆ ಗ್ರಾಮದ ಗ್ರಾಮಾಧಿಕಾರಿಗೆ ಸುದ್ದಿಯನ್ನು ಮುಟ್ಟಿಸಿದರು. ಗ್ರಾಮಾಧಿಕಾರಿಯು ತಕ್ಷಣ ಸ್ಥಳಕ್ಕೆ ಹೋಗಿ ಶವವನ್ನು ಕಾಯಲು ಜನರನ್ನು ನೇಮಿಸಿ ತಾಲ್ಲೂಕು ಕೇಂದ್ರ ಸ್ಥಳವಾದ ಅಮರಶಿಲೆಗೆ ಹೋಗಿ ಅಲ್ಲಿಯ ಪೋಲಿಸ್ ಡೆಪ್ಯೂಟಿ ಸೂಪರಿಂಟೆಂಡೆಂಟ್ ಯತೀಂದ್ರನಾಥನಿಗೆ ಕೊಲೆಯ ವಿಚಾರದಲ್ಲಿ ವರದಿಯನ್ನು ಸಲ್ಲಿಸಿದನು. ಯತೀಂದ್ರನಾಥನು, ಐ.ಪಿ.ಯಸ್. ಹುದ್ದೆಗೆ ಸೇರಿದ ಅಧಿಕಾರಿ. ಅವನ ಆಡಳಿತ ವ್ಯಾಪ್ತಿಗೆ ಅಮರಶಿಲೆ, ಕಮಲಶಿಲೆ ಮತ್ತು ಸ್ವರ್ಣಗಿರಿ ತಾಲ್ಲೂಕುಗಳು ಸೇರಿದ್ದವು. ಆ ಮೂರು ತಾಲ್ಲೂಕುಗಳ ಪೋಲಿಸ್ ಅಧಿಕಾರಿಗಳು ಅವನ ಕೈಕೆಳಗೆ ಕೆಲಸಮಾಡುತ್ತಿದ್ದರು.

ಯತೀಂದ್ರನಾಥನು ಐ.ಪಿ.ಎಸ್. ಪರೀಕ್ಷೆಯಲ್ಲಿ ಉನ್ನತ ಶ್ರೇಣಿಯಲ್ಲಿ ಉತ್ತೀರ್ಣನಾದವನಾಗಿದ್ದನು. ಹೇಮಾವತಿ ರಾಜ್ಯದಲ್ಲಿ ಅವನು ಮೊಟ್ಟಮೊದಲು ಕೆಲಸಕ್ಕೆ ಸೇರಿದ್ದನು. ಅವನ ನಿಷ್ಠೆ ಮತ್ತು ಸಾಮರ್ಥ್ಯಗಳನ್ನು ಮೆಚ್ಚಿದ ಸರ್ಕಾರದವರು ಅವನನ್ನು ಪತ್ತೆದಾರಿಯಲ್ಲಿ ಪರಿಶ್ರಮ ಹೊಂದಲಿಕ್ಕಾಗಿ ಸ್ಕಾಟ್ಲೆಂಡ್ ಯಾರ್ಡಿಗೆ ಕಳುಹಿಸಿಕೊಟ್ಟಿದ್ದರು. ಸ್ಕಾಟ್ಲೆಂಡ್ ಯಾರ್ಡಿನಿಂದ ಹಿಂದಿರುಗಿದ ನಂತರ,ಅವನನ್ನು ಇಲಾಖೆಯ ದಿನಚರಿಯ ವ್ಯವಹಾರಗಳಲ್ಲಿ ಅನುಭವ ಪಡೆಯಲಿಕ್ಕಾಗಿ ಅಮರಶಿಲೆಗೆ ಡೆಪ್ಯೂಟಿ ಸೂಪರಿಂಟೆಂಡೆಂಟ್ ಆಗಿ ನೇಮಕಮಾಡಿದ್ದರು.

ಗ್ರಾಮಾಧಿಕಾರಿಯಿಂದ ಕೊಲೆಯ ಸುದ್ದಿ ತಿಳಿದೊಡನೆ, ಯತೀಂದ್ರನು ಅಮರಶಿಲೆಯ ಪೋಲಿಸ್ ಇನ್‌ಸ್ಪೆಕ್ಟರ ಜೊತೆಯಲ್ಲಿ ಕೊಲೆಯಾದ ಸ್ಥಳಕ್ಕೆ ಜೀಪಿನಲ್ಲಿ ಹೊರಟನು ಅವನು ಆ ಸ್ಥಳವನ್ನು ಮುಟ್ಟುವುದರೊಳಗಾಗಿ, ಶಂಭುವಿನ ಲಂಚದ ಎಂಜಲನ್ನು ತಿಂದಿದ್ದ ಸ್ವರ್ಣಗಿರಿಯ ಪೋಲಿಸ್ ಇನ್‌ಸ್ಪೆಕ್ಟರ್ ತನ್ನ ಸಿಬ್ಬಂದಿಯೊಡನೆಯೂ, ಸ್ವರ್ಣಗಿರಿಯ ಡಾಕ್ಟರೊಡನೆಯೂ, ಅಲ್ಲಿಗೆ ಹೋಗಿದ್ದನು. ಸೋಮಶೇಖರನ ಮರಣವು

ಆಕಸ್ಮಾತ್ ಮೋಟಾರ್ ವಾಹನದ ದೆಸೆಯಿಂದ ಆಗಿತ್ತೆಂಬುದನ್ನೂ ದೃಢೀಕರಿಸುವ ಸಲುವಾಗಿ ಸ್ವರ್ಣಗಿರಿಯ ಡಾಕ್ಟರೂ, ಇನ್‌ಸ್ಪೆಕ್ಟರೂ ಮಸಲತ್ತು ಮಾಡಿದರು. ಯತೀಂದ್ರನು ಕೊಲೆಯಾದ ಸ್ಥಳಕ್ಕೆ ಹೋದಾಗ ಸ್ವರ್ಣಗಿರಿಯ ಪೋಲಿಸ್ ಇನ್‌ಸ್ಪೆಕ್ಟರು ಮಹಜರನ್ನು ಬರೆಯುತ್ತಿದ್ದನು. ಯತೀಂದ್ರನನ್ನು ನೋಡಿದೊಡನೆ ಇನ್‌ಸ್ಪೆಕ್ಟರು ಭಯದಿಂದ ಬಿಳಿಚಿಕೊಂಡನು. ತಕ್ಷಣ ಮಹಜರ್ ಬರೆಯುವುದನ್ನು ನಿಲ್ಲಿಸಿ, ಎದ್ದು ನಿಂತು ಯತೀಂದ್ರನನಿಗೆ ಸಲ್ಯೂಟ್ ಹೊಡೆದನು.

"ಕೊಲೆಯಾದ ಸಂಗತಿ ನಿಮಗೆ ಯಾವಾಗ ತಿಳಿಯಿತು,?" ಎಂದು ಯತೀಂದ್ರನು ಸ್ವರ್ಣಗಿರಿಯ ಇನ್‌ಸ್ಪೆಕ್ಟರನ್ನು ಪ್ರಶ್ನಿಸಿದನು.

"ಒಂದು ಘಂಟೆ ಹಿಂದೆ ಯಾರೋ ನನಗೆ ತಿಳಿಸಿದರು. ಸುದ್ದಿ ತಿಳಿದೊಡನೆ ನಾನು ಡಾಕ್ಟರನ್ನು ಕರೆದುಕೊಂಡು ಇಲ್ಲಿಗೆ ಬಂದೆ"

"ನಿಮಗ್ಯಾರು ತಿಳಿಸಿದರು?"

ಯಾರೋ ಒಬ್ಬರು ಬಂದಿದ್ದರು. ಅವರು ಹೆಸರು ನನಗೆ ಗೊತ್ತಿಲ್ಲ,"

"ಕೊಲೆ ಸುದ್ದಿಯನ್ನು ತಿಳಿಸಿದವರ ಹೆಸರನ್ನು ನೀವು ಡೈರಿಯಲ್ಲಿ ಬರೆಯಲಿಲ್ಲವೆ.

"ಗಾಬರಿಯಲ್ಲಿ ಅವರ ಹೆಸರನ್ನು ಬರೆದುಕೊಳ್ಳಲಿಲ್ಲ."

"ಆಶ್ಚರ್ಯ! ಈಗೇನು ಬರೆಯಿಸುತ್ತಿದ್ದೀರಿ?"

"ಸೋಮಶೇಖರನ ಸಾವು ಆಕಸ್ಮಿಕವಾಗಿ ಮೋಟಾರು ಅಪಘಾತದಿಂದ ಆಗಿದ್ದೆಂದು ಮಹಜರ್ ಬರೆಯಿಸುತ್ತಿದ್ದೇನೆ."

"ಹಾಗಾದರೆ ಸಾವು ಆಕಸ್ಮಿಕವಾದದ್ದೆಂದು ನೀವು ಈಗಾಗಲೇ ತೀರ್ಮಾನಕ್ಕೆ ಬಂದಂತೆ ಕಾಣುತ್ತದೆ, ಅಲ್ಲವೇ.?

"ಅದರಲ್ಲಿ ಅನುಮಾನವೇ ಇಲ್ಲ ಸಾರ್. ಡಾಕ್ಟರ್ ಅಭಿಪ್ರಾಯವೂ ಕೂಡ ಅದೇ ಆಗಿದೆ. ಶವದ ಮೇಲಿರುವ ಮೋಟಾರ್ ಚಕ್ರಗಳ ಗುರುತು ತಮಗೆ ಕಾಣುವುದಿಲ್ಲವೆ?"

"ಈ ಸ್ಥಳ ನಿಮ್ಮ ಜೂರಿಸ್ಡಿಕ್ಷನ್ನಿಗೆ ಸೇರಿದ್ದಲ್ಲವಲ್ಲಾ; ನೀವೇಕೆ ಇಲ್ಲಿಗೆ ಬಂದಿರಿ?"

"ದಯವಿಟ್ಟು ಕ್ಷಮಿಸಿ ಸಾರ್, ಇದು ನಮ್ಮ ಜೂರಿಸ್ಡಿಕ್ಷನ್ನಿಗೆ ಸೇರಿದ ಸ್ಥಳ ಸಾರ್."

"ನೀವು ಯಾವ ಆಧಾರದ ಮೇಲೆ ಹೇಳುತ್ತೀರಿ?"

ನಮ್ಮ ತಾಲ್ಲೂಕ್ ಮ್ಯಾಪಿನ ಆಧಾರದ ಮೇಲೆ."

"ನೀವು ತಿಳಿದುಕೊಂಡಿರುವುದು ತಪ್ಪು. ಇದು ಅಮರಶಿಲೆ ತಾಲ್ಲೂಕಿಗೆ ಸೇರಿದ ಪ್ರದೇಶ."

"ತಾವು ಹೇಳುತ್ತಿರುವುದು ಸರಿಯಲ್ಲ ಸಾರ್. ಇದು ಸ್ವರ್ಣಗಿರಿ ತಾಲ್ಲೂಕಿಗೆ ಸೇರಿದ ಪ್ರದೇಶ."

"ನನ್ನ ಮಾತಿನಲ್ಲಿ ನಿಮಗೆ ನಂಬಿಕೆ ಇಲ್ಲದಿದ್ದರೆ ಇಲ್ಲೇ ಗ್ರಾಮಾಧಿಕಾರಿ ಇದ್ದಾರೆ. ಅವರನ್ನು ಕೇಳಿ ತಿಳಿದುಕೊಳ್ಳಿ."

ಅನಂತರ ಸ್ವರ್ಣಗಿರಿ ಪೋಲಿಸ್ ಇನ್ಸ್‌ಪೆಕ್ಟರಿಗೂ, ಗ್ರಾಮಾಧಿಕಾರಿಗೂ ವಾಗ್ವಾದ ಪ್ರಾರಂಭವಾಯಿತು. ಗ್ರಾಮಾಧಿಕಾರಿಯು ಕೊಲೆಯಾದ ಪ್ರದೇಶ ಅಮರಶಿಲೆ ತಾಲ್ಲೂಕಿಗೆ ಸೇರಿದ್ದೆಂದು ವಾದಿಸತೊಡಗಿದನು. ಇನ್ಸ್‌ಪೆಕ್ಟರು ಸ್ವರ್ಣಗಿರಿ ತಾಲ್ಲೂಕಿಗೆ ಸೇರಿದ್ದೆಂದು ವಾದಿಸತೊಡಗಿದನು. ಗ್ರಾಮಾಧಿಕಾರಿಯು ತನ್ನ ವಾದವನ್ನು ಪುಷ್ಟೀಕರಿಸುವುದಕ್ಕಾಗಿ ಹಲವು ನಿದರ್ಶನಗಳನ್ನು ಹೇಳಿದನು. ಆದರೆ ಇನ್ಸ್‌ಪೆಕ್ಟರ್ ತನ್ನ ಮೊಂಡುವಾದವನ್ನು ಬಿಡಲಿಲ್ಲ. ತಾನು ಹೇಳಿದ್ದೇ ಸರಿಯೆಂದು ಸಾಧಿಸತೊಡಗಿದನು. ಜೊತೆಗೆ ಗ್ರಾಮಾಧಿಕಾರಿಯನ್ನು ಗದರಿತೊಡಗಿದನು. ಇನ್ಸ್‌ಪೆಕ್ಟರನ ಆ ವಿಧವಾದ ವರ್ತನೆಯು ಯತೀಂದ್ರನಿಗೆ ವಿಚಿತ್ರವೆನಿಸಿತು. ಅವನು ಅವರಿಬ್ಬರ ವಾಗ್ವಾದವನ್ನು ನಿಲ್ಲಿಸಿ, ಸರ್ಕಾರಿ ದಾಖಲೆಗಳನ್ನು ಹಾಜರು ಮಾಡಬೇಕೆಂದು ಗ್ರಾಮಾಧಿಕಾರಿಗೆ ಆಜ್ಞಾಪಿಸಿದನು. ಗ್ರಾಮಾಧಿಕಾರಿಯು ಊರಿಗೆ ಹೋಗಿ, ದಾಖಲೆಗಳನ್ನು ತೆಗೆದುಕೊಂಡು ಬಂದು ಯತೀಂದ್ರನ ಮುಂದಿರಿಸಿದನು. ಆಗ ಸ್ವರ್ಣಗಿರಿಯ ಪೋಲಿಸ್ ಇನ್ಸ್‌ಪೆಕ್ಟರು ತೆಪ್ಪಗಾದನು.

ಯತೀಂದ್ರನಿಗೆ ರಾಜ್ಯದ ರಾಜಕಾರಣದ ಅರಿವು ತಕ್ಕಷ್ಟು ಆಗಿತ್ತು. ಅವನು ಹಲವು ಬಾರಿ ಸೋಮಶೇಖರನನ್ನು ನೋಡಿದ್ದನು. ಸೋಮಶೇಖರನ ಸದ್ಗುಣಗಳನ್ನು ಅವನು ಮೆಚ್ಚಿದ್ದನು. ಸೋಮಶೇಖರನು ಶಂಭುವಿನ ವಿರುದ್ಧ ಚುನಾವಣೆಯಲ್ಲಿ ಸ್ಪರ್ಧಿಸುತ್ತಾನೆಂಬ ವಿಚಾರವೂ ಸಹ ಯತೀಂದ್ರನಿಗೆ ಗೊತ್ತಾಗಿತ್ತು. ಕೊಲೆಯ ಹಿನ್ನೆಲೆಯಲ್ಲಿ ಶಂಭುವಿನ ಕೈವಾಡವಿರಬಹುದೆಂದು ಅವನು ಮನಸ್ಸಿನಲ್ಲಿಯೇ ಅನುಮಾನಿಸುತ್ತಿದ್ದನು. ಸ್ವರ್ಣಗಿರಿಯ ಪೋಲಿಸ್ ಇನ್ಸ್‌ಪೆಕ್ಟರನ ವಿಚಿತ್ರ ವರ್ತನೆಯು ಅವನ ಅನುಮಾನಕ್ಕೆ ಪುಷ್ಟಿಯನ್ನು ನೀಡಿತು.

ಅನುಮಾನಗಳಲ್ಲಿ ಅಥವಾ ಊಹಾಪೋಹಗಳಲ್ಲಿ ವ್ಯರ್ಥ ಕಾಲಹರಣ ಮಾಡಲು ಯತೀಂದ್ರನು ಸಿದ್ಧನಿರಲಿಲ್ಲ. ಅಪರಾಧಿಗಳನ್ನು ಪತ್ತೆ ಹಚ್ಚಲು ಅವನ ಮನಸ್ಸು ತವಕಿಸುತ್ತಿತ್ತು. ಮೊಕದ್ದಮೆಯ ತನಿಖೆಯಲ್ಲಿ ಸ್ವರ್ಣಗಿರಿಯ ಪೋಲಿಸಿನವರು ಕೈ ಹಾಕಬಾರದೆಂದು ಕಟ್ಟಾಜ್ಞೆ ಮಾಡಿ, ಅವರು ಬರೆಯಿಸಿದ್ದ ಮಹಜರನ್ನು ತನ್ನ ವಶಪಡಿಸಿಕೊಂಡನು. ತನಿಖೆಯ ಮುಂದಿನ ಕ್ರಮಗಳನ್ನು ಅಮರಶಿಲೆಯ ಪೋಲಿಸ್ ಇನ್ಸ್‌ಪೆಕ್ಟರಿಗೆ ವಹಿಸಿ, ತಾನು ಅಪರಾಧಿಗಳನ್ನು ಹುಡುಕುವುದಕ್ಕಾಗಿ ತ್ವರೆಯಿಂದ ಜೀಪಿನಲ್ಲಿ ಸ್ವರ್ಣಗಿರಿಯ ಕಡೆಗೆ ತೆರಳಿದನು.

* * * *

# ೭. ಶೋಧನೆ

ಸ್ವರ್ಣಗಿರಿಗೆ ಹೋಗುವ ದಾರಿಯುದ್ದಕ್ಕೂ, ಯತೀಂದ್ರನು ಮೋಟಾರು ಚಕ್ರಗಳ ಗುರುತನ್ನು ದಿಟ್ಟಿಸಿ ನೋಡುತ್ತಾ ಮುಂದೆ ಸಾಗಿದ್ದನು. ದಾರಿಯು ಹೆದ್ದಾರಿಯನ್ನು ಸೇರುವ ಸ್ಥಳದಲ್ಲಿ ತನ್ನ ಜೀಪನ್ನು ನಿಲ್ಲಿಸಿ ಮೋಟಾರು ವಾಹನಗಳ ಚಕ್ರಗಳ ಗುರುತನ್ನು ಅತಿ ಸೂಕ್ಷ್ಮವಾಗಿ ಪರೀಕ್ಷಿಸಿದನು. ಸ್ವರ್ಣಗಿರಿಯ ಕಡೆಯಿಂದ ಕಣಿವೆಯ ಕಡೆಗೆ ಎರಡು ವಾಹನಗಳು ಹೋಗಿದ್ದ ಗುರುತುಗಳು ಕಾಣುತ್ತಿದ್ದವು. ಕಣಿವೆಯ ಕಡೆಯಿಂದ ಒಂದು ವಾಹನ ಮಾತ್ರ ಸ್ವರ್ಣಗಿರಿಯ ಕಡೆಗೆ ಹೋಗಿತ್ತು. ಸ್ವರ್ಣಗಿರಿಯ ಕಡೆಯಿಂದ ಕಣಿವೆಯ ಕಡೆಗೆ ಹೋಗಿದ್ದ ಎರಡು ವಾಹನಗಳ ಪೈಕಿ ಒಂದು ಸ್ವರ್ಣಗಿರಿಯ ಪೋಲಿಸ್ ಇನ್ಸ್‌ಪೆಕ್ಟರು ಸಾವಿನ ಸ್ಥಳಕ್ಕೆ ತೆಗೆದುಕೊಂಡು ಹೋಗಿದ್ದ ಕಾರೆಂದೂ, ಇನ್ನೊಂದು ಜೀಪೆಂದೂ, ಚಕ್ರಗಳ ಗುರುತುಗಳಿಂದ ವ್ಯಕ್ತವಾಗುತ್ತಿತ್ತು. ಅದೇ ಜೀಪು ಪುನಃ ಕಣಿವೆಯ ಕಡೆಯಿಂದ ಹಿಂದಿರುಗಿ ಬಂದು ಸ್ವರ್ಣಗಿರಿಯ ಕಡೆಗೆ ಹೋಗಿದ್ದುದು ಸ್ಪಷ್ಟವಾಗಿತ್ತು. ಆ ಜೀಪು ಕೊಲೆಗಡುಕರಿಗೆ ಸೇರಿದ ಜೀಪಾಗಿರಬಹುದೆಂದು ಯತೀಂದ್ರನು ಸ್ವಾಭಾವಿಕವಾಗಿ ಊಹಿಸಿದನು. ಆ ಜೀಪನ್ನು ಹುಡುಕುವುದೇ ಅವನ ಮುಂದಿನ ಕೆಲಸವಾಗಿತ್ತು.

ಕೊಲೆಪಾತಕರ ಜೀಪು ಸ್ವರ್ಣಗಿರಿಯ ಕಡೆಗೆ ಹೋಗಿರಬಹುದೆಂದು ಚಕ್ರದ ಗುರುತುಗಳಿಂದ ಗೊತ್ತಾಗುತ್ತಿದ್ದರೂ, ಯತೀಂದ್ರನ ಮನಸ್ಸು ಮಾತ್ರ ಆ ಜೀಪು ರಾಜಧಾನಿಯ ಕಡೆಗೆ ಹೋಗಿರಬಹುದೆಂದು ಹೇಳುತ್ತಿತ್ತು. ಆದ್ದರಿಂದ ತನ್ನ ಜೀಪನ್ನು ರಾಜಧಾನಿಗೆ ಹೋಗುವ ಹೆದ್ದಾರಿಗೆ ತಿರುಗಿಸಿ, ಗಂಟೆಗೆ ಎಂಬತ್ತು ಕಿಲೋಮಿೂಟರುಗಳ ವೇಗದಲ್ಲಿ ಮುಂದೆ ಸಾಗಿದನು. ಜೀಪಿನಲ್ಲಿ ಆತನ ಡ್ರೈವರ್ ವಿನಹ ಇನ್ನಾರೂ ಸಹಾಯಕರಿರಲಿಲ್ಲ; ಸೊಂಟದಲ್ಲಿದ್ದ ರಿವಾಲ್ವರ್ ವಿನಹ ಅವನಲ್ಲಿ ಇನ್ನಾವ ಆಯುಧವೂ ಇರಲಿಲ್ಲ. ಅಪರಾಧಿಗಳು ಒಂದು ವೇಳೆ ರೈಫಲ್ ಅಥವಾ ಬಂದೂಕನ್ನು ಇಟ್ಟು ಕೊಂಡಿದ್ದರೆ ಅವರನ್ನು ಬಂಧಿಸುವುದು ಕಷ್ಟವೆಂಬ ಯೋಚನೆಯೂ ಸಹ ಅವನಿಗೆ ಹೊಳೆದಿರಲಿಲ್ಲ.

ಐವತ್ತು ಕಿಲೋಮಿೂಟರ್ ದೂರ ಪ್ರಯಾಣ ಮಾಡಿದ ನಂತರ, ನಿರ್ಜನ ಪ್ರದೇಶವೊಂದರಲ್ಲಿ ರಸ್ತೆಯ ಪಕ್ಕದಲ್ಲಿ ಒಂದು ಹೋಟೆಲ್ ಗೋಚರವಾಯಿತು. ಅಪರಾಧಿಗಳು ಆ ಮಾರ್ಗದಲ್ಲಿ ಹೋಗಿದ್ದರೆ ಆ ಹೋಟೆಲಿನಲ್ಲಿ ಅವರು ಚಹ ಕುಡಿದು ಹೋಗಿರಬಹುದೆಂದು ತರ್ಕಿಸಿ ತನ್ನ ಜೀಪನ್ನು ಹೋಟೆಲ್ ಮುಂಭಾಗದಲ್ಲಿ ನಿಲ್ಲಿಸಿ ಯತೀಂದ್ರನು ಚಹ ಕುಡಿಯುವ ನೆಪದಲ್ಲಿ ಹೋಟೆಲಿಗೆ ನುಗ್ಗಿದನು. ತಾನು ಮತ್ತು ಡ್ರೈವರ್ ಇಬ್ಬರೂ ಚಹ ಕುಡಿದು, ಜೀಪಿಗೆ ನೀರು ಬೇಕೆಂಬ ನೆಪದಿಂದ

ಹೋಟೆಲ್ ಚಾಕರನೊಬ್ಬನನ್ನು ಕರೆದು ಜೀಪಿನ ಬಳಿಗೆ ಒಂದು ಕೊಡನೀರನ್ನು ತರ ಹೇಳಿ, ತಾನು ಮುಂದೆ ಹೋಗಿ ಜೀಪಿನ ಬಳಿ ನಿಂತುಕೊಂಡನು. ಡ್ರೈವರನು ರೇಡಿಯೇಟರಿಗೆ ನೀರನ್ನು ಸುರಿಯುತ್ತಿರುವ ವೇಳೆಯಲ್ಲಿ ಯತೀಂದ್ರನು, ಜೇಬಿನಿಂದ ಒಂದು ರೂಪಾಯಿಯನ್ನು ತೆಗೆದು ಚಾಕರನ ಕೈಯಲ್ಲಿಟ್ಟು, ಆ ದಿನ ಮಧ್ಯಾಹ್ನ ಯಾರಾದರೂ ಜೀಪಿನಲ್ಲಿ ಸ್ವರ್ಣಗಿರಿಯ ಕಡೆಯಿಂದ ಬಂದಿದ್ದರೇ ಎಂಬುದಾಗಿ ಪ್ರಶ್ನಿಸಿದನು. ಅನಿರೀಕ್ಷಿತ ಬಹುಮಾನದಿಂದ ಸುಪ್ರೀತನಾದ ಆ ಚಾಕರನು, ಸುಮಾರು ಮೂರು ಗಂಟೆಗಳ ಹಿಂದೆ ಹಳೆಯ ಜೀಪೊಂದು ಸ್ವರ್ಣಗಿರಿಯ ಕಡೆಯಿಂದ ಬಂದಿತ್ತೆಂದೂ, ಜೀಪಿನಲ್ಲಿದ್ದ ಮೂವರು ಹೋಟೆಲಿನಲ್ಲಿ ಉಪಹಾರವನ್ನು ಸೇವಿಸಿ ರಾಜಧಾನಿಯ ಕಡೆಗೆ ಹೊರಟು ಹೋದರೆಂದೂ,ತಿಳಿಸಿದ್ದಲ್ಲದೆ ಆ ಮೂವರ ಚಹರೆಯನ್ನೂ ಸೂಕ್ಷ್ಮವಾಗಿ ತಿಳಿಸಿದನು.

ಹೋಟೆಲ್ ಚಾಕರನಿಂದ ತಿಳಿದುಬಂದ ವಿಚಾರಗಳಿಂದ ಅವನು ವರ್ಣಿಸಿದ ವ್ಯಕ್ತಿಗಳು ಅಪರಾಧಿಗಳಾಗಿರಬೇಕೆಂದು ಯತೀಂದ್ರನು ಊಹಿಸಿದನು. ಹೋಟೆಲಿದ್ದ ಸ್ಥಳದಿಂದ ರಾಜಧಾನಿಯು ಮುನ್ನೂರು ಕಿಲೋಮೀಟರುಗಳ ದೂರದಲ್ಲಿತ್ತು. ಯತೀಂದ್ರನು ಅತಿ ವೇಗದಲ್ಲಿ ಮುಂದೆ ಸಾಗಿದನು.

ಮಾರ್ಗ ಮಧ್ಯೆ ಅಲ್ಲಲ್ಲಿ ಸಿಕ್ಕುತ್ತಿದ್ದ ಊರು ಕೇರಿಗಳಲ್ಲಿ ಜೀಪನ್ನು ನಿಲ್ಲಿಸಿ, ಕೊಲೆಪಾತಕರ ಜೀಪಿನ ವಿಚಾರದಲ್ಲಿ ಮಾಹಿತಿಯನ್ನು ಸಂಗ್ರಹಿಸಲು ಪ್ರಯತ್ನ ಮಾಡಿದನು.

ಸುಮಾರು ನೂರೈವತ್ತು ಕಿಲೋಮೀಟರ್ ದೂರ ಮುಂದೆ ಸಾಗಿದ ಮೇಲೆ ಶಶಿ ಎಂಬ ರೈಲ್ವೇ ಸ್ಟೇಷನ್ ಕಾಣಿಸಿತು. ಆ ಸ್ಟೇಷನ್ ಸಮೀಪ ಹೆದ್ದಾರಿಯಲ್ಲಿ ಸಾಲುಮರಗಳ ಕೆಳಗೆ ಒಂದು ಜೀಪು ನಿಂತಿರುವುದು ಕಾಣಿಸಿತು. ಆಗಲೇ ರಾತ್ರಿ ಎಂಟುಗಂಟೆಯಾಗಿತ್ತು. ಯತೀಂದ್ರನು ತನ್ನ ಜೀಪನ್ನು ನಿಲ್ಲಿಸಿ ಕೆಳಗಿಳಿದು ಸಾಲುಮರಗಳ ಕೆಳಗೆ ನಿಂತಿದ್ದ ಆ ಜೀಪನ್ನು ವಿದ್ಯುತ್‌ದೊಂದಿಯ ಸಹಾಯದಿಂದ ಪರೀಕ್ಷಿಸತೊಡಗಿದನು. ಜೀಪಿನ ನಂಬರ್ ಪ್ಲೇಟನ್ನು ನೋಡಿದಾಗ ಅದು ನೆರೆ ರಾಜ್ಯದ ವಾಹನವೆಂಬುದನ್ನು ಸೂಚಿಸುತ್ತಿತ್ತು. ಜೀಪಿನೊಳಗೆ ಮನುಷ್ಯರಾರೂ ಇರಲಿಲ್ಲ.

ಜೀಪಿನ ದಾಕೀತರು ಯಾರಾದರೂ ಸಮೀಪದಲ್ಲಿದ್ದರೆ ಬರಬಹುದೆಂಬ ನಿರೀಕ್ಷೆಯಿಂದ, ಯತೀಂದ್ರನು ಅಲ್ಲಿಯೇ ಅರ್ಧಗಂಟೆಯಕಾಲ ಕಾದನು. ಯಾರೂ ಬರಲಿಲ್ಲವಾದ್ದರಿಂದ ಜೀಪಿನೊಳಗೆ ಹೋಗಿ ವಿದ್ಯುತ್‌ದೊಂದಿಯ ಸಹಾಯದಿಂದ ಒಳಗೆಲ್ಲಾ ಪರಿಶೋಧಿಸಿದನು. ಜೀಪಿನಲ್ಲಿ ಐದಾರು ಬರಿದಾದ ಬ್ರಾಂದಿ ಸೀಸೆಗಳೂ, ಎರಡು ತುಂಬಿದ ಬ್ರಾಂದಿ ಸೀಸೆಗಳೂ ಇದ್ದುವು. ಜೀಪಿನ ಮುಂಭಾಗದ ಅರೆಯಲ್ಲಿ ಕೆಲವು ಸಿಗರೇಟ್ ಪ್ಯಾಕುಗಳು, ಹೇಮಾವತಿಯ ಬ್ರಾಂದಿ ಅಂಗಡಿಯೊಂದರಿಂದ ಕೊಡಲ್ಪಟ್ಟಿದ್ದ ಬ್ರಾಂದಿ ವಿಕ್ರಯದ ರಶೀದಿಯೂ ಇದ್ದುವು. ರಶೀದಿಯಲ್ಲಿ ನಮೂದಾಗಿದ್ದ ತಾರೀಖನ್ನು ನೋಡಿದಾಗ ಹಿಂದಿನ ದಿನ ಜೀಪಿನಲ್ಲಿದ್ದವರು ರಾಜಧಾನಿಯಲ್ಲಿ ಬ್ರಾಂದಿಯನ್ನು ಕೊಂಡುಕೊಂಡಿದ್ದರೆಂಬುದನ್ನು ಸುಲಭವಾಗಿ ಊಹಿಸಬಹುದಾಗಿತ್ತು.

ಅಪರಾಧಿಗಳು ಜೀಪನ್ನು ತ್ಯಜಿಸಿ ಶಶಿ ರೈಲ್ವೇ ನಿಲ್ದಾಣದಿಂದ ರೈಲಿನಲ್ಲಿ ಪರಾರಿಯಾಗಿರಬಹುದೆಂದು ಊಹಿಸಿದ ಯತೀಂದ್ರನು ನೇರವಾಗಿ ರೈಲ್ವೇ ನಿಲ್ದಾಣಕ್ಕೆ ಹೋದನು. ಅಲ್ಲಿ ವಿಚಾರ ಮಾಡಿದಾಗ, ಸಂಜೆ ಏಳು ಗಂಟೆಗೆ ಹೇಮಗಿರಿಯ ಕಡೆಗೆ ಹೋಗಿದ್ದ ರೈಲಿನಲ್ಲಿ ಪ್ರಯಾಣಮಾಡುವ ಉದ್ದೇಶದಿಂದ ಆ ನಿಲ್ದಾಣದಲ್ಲಿ ಮೂವರು ಮಾತ್ರ ಟಿಕೆಟ್ ಕೊಂಡುಕೊಂಡಿದ್ದರೆಂದು ತಿಳಿಯಬಂತು. ಅಪರಾಧಿಗಳು ರೈಲಿನಲ್ಲಿ ಹೇಮಗಿರಿಗೆ ಪರಾರಿಯಾಗಿರಬಹುದೆಂದು ತರ್ಕಿಸಿದನು. ರೈಲ್ವೇ ನಿಲ್ದಾಣದಲ್ಲಿದ್ದ ಪೋಲಿಸಿನವನೊಬ್ಬನನ್ನು ಕರೆದು ಸಾಲು ಮರಗಳ ಕೆಳಗೆ ನಿಲ್ಲಿಸಿದ ಜೀಪನ್ನು ವಶಪಡಿಸಿಕೊಳ್ಳಬೇಕೆಂದು, ಜೀಪಿನ ದಾಕೀತರೆಂದು ಯಾರಾದರೂ ಬಂದರೆ ಅವರನ್ನು ಪೋಲಿಸ್ ಠಾಣೆಯಲ್ಲಿ ಇಟ್ಟು ಕೊಂಡಿರಬೇಕೆಂದೂ ಆಜ್ಞಾಪಿಸಿ, ಯತೀಂದ್ರನು ಹೇಮಗಿರಿಯ ಕಡೆಗೆ ಪ್ರಯಾಣಮಾಡಿದನು.

ಅವನು ಹೇಮಗಿರಿಯನ್ನು ತಲುಪಿದಾಗ ಬೆಳಗಿನ ಜಾವವಾಗಿತ್ತು. ಶಶಿ ಕಡೆಯಿಂದ ರೈಲು ಇನ್ನೂ ಅಲ್ಲಿಗೆ ಬಂದಿರಲಿಲ್ಲ. ಅದು ಮಧ್ಯೆ ಹಲವು ನಿಲ್ದಾಣಗಳಲ್ಲಿ ನಿಂತು ವೇಳಾ ನಿಯಮದಂತೆ ಹೇಮಗಿರಿಯನ್ನು ಬೆಳಿಗ್ಗೆ ಆರು ಗಂಟೆಗೆ ಸೇರಬೇಕಾಗಿತ್ತು. ಯತೀಂದ್ರನು ಹೇಮಗಿರಿಯ ಪೋಲಿಸ್ ಠಾಣೆಗೆ ಹೋಗಿ ಖಾಸಗಿ ಉಡುಪನ್ನು ತೊಟ್ಟು, ಅಲ್ಲಿಂದ ನೇರವಾಗಿ ಪುನಃ ರೈಲ್ವೇ ನಿಲ್ದಾಣಕ್ಕೆ ಬಂದನು. ನಿಲ್ದಾಣದ ಅಧಿಕಾರಿಗಳಿಗೆ ತಾನು ಬಂದಿದ್ದ ಉದ್ದೇಶವನ್ನು ಗುಟ್ಟಾಗಿ ತಿಳಿಸಿ, ನಿಲ್ದಾಣದ ಹೊರ ದ್ವಾರದಲ್ಲಿ ಟಿಕೆಟ್ ಸಂಗ್ರಾಹಕನ ಪಕ್ಕದಲ್ಲಿ ನಿಂತನು.

ಶಶಿ ಕಡೆಯಿಂದ ಹೊರಟ ರೈಲು ನಿರ್ದಿಷ್ಟ ಕಾಲಕ್ಕೆ ಸರಿಯಾಗಿ ನಿಲ್ದಾಣದಲ್ಲಿ ಬಂದು ನಿಂತಿತು. ಪ್ರಯಾಣಿಕರು ಒಬ್ಬೊಬ್ಬರಾಗಿ ಕೆಳಗಿಳಿದು ನಿಲ್ದಾಣದ ಹೊರ ದ್ವಾರದಲ್ಲಿ ತಮ್ಮ ಟಿಕೆಟ್ಟುಗಳನ್ನು ಸಂಗ್ರಾಹಕನ ಕೈಗೆ ಒಪ್ಪಿಸಿ ಹೋಗುತ್ತಿದ್ದರು. ಆದರೆ ಶಶಿ ನಿಲ್ದಾಣದಲ್ಲಿ ಕೊಂಡಿದ್ದ ಯಾವ ಟಿಕೆಟ್ಟೂ ಸಂಗ್ರಾಹಕನ ಕೈಗೆ ಬರಲಿಲ್ಲ. ಯಂತೀಂದ್ರನು ತಾನು ಮೋಸ ಹೋದೆನೆಂದು ತನ್ನೊಳಗೇ ಅಂದುಕೊಂಡನು. ಅಪರಾಧಿಗಳು ಪೋಲಿಸಿನವರಿಗೆ ತಪ್ಪು ಕಲ್ಪನೆಯನ್ನುಂಟುಮಾಡುವ ಉದ್ದೇಶದಿಂದ ಶಶಿಯಲ್ಲಿ ಅನಾವಶ್ಯಕವಾಗಿ ರೈಲ್ವೇ ಟಿಕೆಟ್ಟುಗಳನ್ನು ಕೊಂಡುಕೊಂಡು ರೈಲಿನಲ್ಲಿ ಪ್ರಯಾಣ ಮಾಡದೆ ಬೇರಾವುದೋ ವಾಹನದಲ್ಲಿ ರಾಜಧಾನಿಗೆ ಹೋಗಿರಬಹುದೆಂದು ಅವನು ಅನುಮಾನಿಸತೊಡಗಿದನು.

* * * *

ಯತೀಂದ್ರನು ಹೇಮಗಿರಿಯಲ್ಲಿ ಕೊಂಚಕಾಲ ವಿಶ್ರಾಂತಿ ಪಡೆದು, ವಿವಿಧ ಜಿಲ್ಲೆಗಳ ಪೋಲಿಸಿನವರಿಗೆ ಸೋಮಶೇಖರನನ್ನು ಕೊಲೆ ಮಾಡಿರುವ ಅಪರಾಧಿಗಳು ನಾಪತ್ತೆಯಾಗಿರುವರೆಂಬ ಸುದ್ದಿಯನ್ನು ಮುಟ್ಟಿಸಿ, ಅಲ್ಲಿಂದ ರಾಜಧಾನಿಗೆ ಹೊರಟನು. ರಾಜಧಾನಿಯನ್ನು ತಲುಪಿದ ನಂತರ, ಅವನು ರಾಜ್ಯದ ಪೋಲಿಸ್ ಇನ್‌ಸ್ಪೆಕ್ಟರ್ ಜನರಲ್ ರವೀಂದ್ರನಾಥರನ್ನು ಕಂಡು, ಅವರಿಗೆ ಸೋಮಶೇಖರನ ಕೊಲೆಯ

ವಿಚಾರವನ್ನು ವರದಿಮಾಡಿದನು. ಅಪರಾಧಿಗಳ ಪತ್ತೆಗಾಗಿ ತಾನು ಬಂದಿರುವುದಾಗಿಯೂ, ರಾಜಧಾನಿಯ ಪ್ರಸಿದ್ಧ ಪತ್ತೇದಾರ ರಣಧೀರನನ್ನು ತನ್ನ ಸಹಾಯಕ್ಕೆ ಕಳುಹಿಸಿಕೊಡಬೇಕಾಗಿಯೂ, ಅವರನ್ನೂ ಪ್ರಾರ್ಥಿಸಿಕೊಂಡನು. ರವೀಂದ್ರನಾಥರು ಯತೀಂದ್ರನ ಕೋರಿಕೆಯನ್ನು ಮನ್ನಿಸಿ ಕೂಡಲೆ ರಣಧೀರನನ್ನು ಅವನ ಸಹಾಯಕ್ಕೆ ಕಳುಹಿಸಿಕೊಟ್ಟರು.

ಯತೀಂದ್ರನು ಬಹು ಸೂಕ್ಷ್ಮಮತಿ ಹಾಗೂ ಸಾಹಸಿ. ಸಾಹಸ ಕಾರ್ಯಗಳಲ್ಲಿ ಧುಮುಕುವುದೆಂದರೆ ಅವನಿಗೆ ಪ್ರಿಯವಾದ ಕೆಲಸ, ರಣಧೀರನೂ ಸಹ ಎದೆಗಾರ ಮತ್ತು ಛಲಗಾರ. ಹಲವು ಸಂದರ್ಭಗಳಲ್ಲಿ ಅಪಾಯವನ್ನು ಲೆಕ್ಕಿಸದೆ ಸಾಹಸದಿಂದ ದೊಡ್ಡ ದೊಡ್ಡ ಡಕಾಯಿತರನ್ನೂ, ಕೊಲೆಗಾರರನ್ನೂ ಹಿಡಿದವನು. ಆದರೆ ಸೋಮಶೇಖರನನ್ನು ಕೊಲೆ ಮಾಡಿದ ವ್ಯಕ್ತಿಗಳನ್ನು ಹಿಡಿಯುವ ಕೆಲಸ ಸುಲಭವಾಗಿರಲಿಲ್ಲ. ಆ ವ್ಯಕ್ತಿಗಳು ಸಾಧಾರಣ ಅಪರಾಧಿಗಳಲ್ಲವೆಂಬುದು ಅವರಿಬ್ಬರಿಗೂ ಮನವರಿಕೆಯಾಗಿತ್ತು. ಅಲ್ಲದೆ ಹೇಮಾವತಿಯಂತಹ ದೊಡ್ಡ ನಗರದಲ್ಲಿ ಅಪರಾಧಿಗಳನ್ನು ಪತ್ತೆ ಹಚ್ಚುವುದು ಕಠಿಣ ಸಮಸ್ಯೆಯಾಗಿತ್ತು. ಯತೀಂದ್ರನು ರಾಜಧಾನಿಯ ಒಂದು ಪ್ರಮುಖ ಭೋಜನ ಮಂದಿರದ ಎರಡನೆಯ ಅಂತಸ್ತಿನ ಕೊಠಡಿಯೊಂದರಲ್ಲಿ ತಂಗಿದ್ದನು. ರಾತ್ರಿ ಬಹಳ ಹೊತ್ತು ಅವನು ರಣಧೀರನೊಡನೆ ಆಪ್ತಾಲೋಚನೆ ಮಾಡಿದನು.

ಮರುದಿನ ಬೆಳಿಗ್ಗೆ ಯತೀಂದ್ರನೂ, ರಣಧೀರನೂ ವೇಷವನ್ನು ಮರೆಯಿಸಿಕೊಂಡು, ಟ್ಯಾಕ್ಸಿಯಲ್ಲಿ ಕುಳಿತು ಅಪರಾಧಿಗಳ ಪತ್ತೆಗಾಗಿ ಹೊರಟರು. ರಾಜಧಾನಿಯಲ್ಲಿ ಭೋಜನ ಮತ್ತು ವಸತಿಗೃಹಗಳಲ್ಲೂ, ಪಾನಮಂದಿರಗಳಲ್ಲೂ, ಬಸ್ಸು ಮತ್ತು ರೈಲ್ವೇ ನಿಲ್ದಾಣಗಳಲ್ಲೂ ದಿನವೆಲ್ಲಾ ಹುಡುಕಿದರು. ಎಲ್ಲಿಯೂ, ಅಪರಾಧಿಗಳ ಸುಳಿವು ಅವರಿಗೆ ಗೋಚರವಾಗಲಿಲ್ಲ. ನಿರಾಶರಾದ ಅವರು ರಾತ್ರಿ ತಮ್ಮ ನಿವಾಸಗಳಿಗೆ ಸೇರಿದರು.

ಸೋಮಶೇಖರನನ್ನು ಕೊಲೆಮಾಡಿದ ನಂತರ ಕೊಲೆಪಾತಕರು ಸ್ವರ್ಣಗಿರಿಯ ಪೋಲಿಸ್ ಇನ್‌ಸ್ಪೆಕ್ಟರಿಗೆ ಸುದ್ದಿಯನ್ನು ಮುಟ್ಟಿಸಿ, ಅಲ್ಲಿಂದ ರಾಜಧಾನಿಯ ದಾರಿಯನ್ನು ಹಿಡಿದು, ಮಾರ್ಗ ಮಧ್ಯೆ ಹೋಟೆಲಿನಲ್ಲಿ ಉಪಹಾರ ಸೇವಿಸಿ, ಅಲ್ಲಿಂದ ಶಶಿ ರೈಲ್ವೇ ಸ್ಟೇಷನ್ ಸಮೀಪ ಜೀಪನ್ನು ಬಿಟ್ಟು ರೈಲ್ವೇ ನಿಲ್ದಾಣದಲ್ಲಿ ಹೇಮಗಿರಿಗೆ ಮೂರು ಟಿಕೆಟ್ಟುಗಳನ್ನು ಕೊಂಡುಕೊಂಡವರು ರೈಲಿನಲ್ಲಿ ಪ್ರಯಾಣ ಮಾಡದೆ ರಾಜಧಾನಿಯ ಕಡೆಗೆ ಹೋಗುತ್ತಿದ್ದ ಲಾರಿಯಲ್ಲಿ ಕುಳಿತು ಆ ರಾತ್ರಿಯೇ ರಾಜಧಾನಿಯನ್ನು ಸೇರಿದರು. ರಾಜಧಾನಿಯನ್ನು ಸೇರಿದ ನಂತರ ಅವರು ನೇರವಾಗಿ ಶಂಭುವಿನ ನಿವಾಸಕ್ಕೆ ತೆರಳಿ ತಮಗೆ ವಹಿಸಿದ್ದ ಕೆಲಸವನ್ನು ಪೂರ್ಣಗೊಳಿಸಿರುವುದಾಗಿ ವರದಿ ಮಾಡಿದರು. ಅವರ ವರದಿಯಿಂದ ಸಂತಸಗೊಂಡ ಶಂಭು ಅವರಿಗೆ ಯಥೇಚ್ಛವಾಗಿ ಬಹುಮಾನ ನೀಡಿದನು.

ಕೊಲೆಪಾತಕರಿಗೆ ಅವನು ಯಥೇಚ್ಛವಾಗಿ ಬಹುಮಾನವನ್ನು ನೀಡಿದ್ದರೂ, ಅವರಪಾಡಿಗೆ ಅವರನ್ನು ಬಿಡುವುದು ಕ್ಷೇಮವಲ್ಲವೆಂದು ಶಂಭು ಭಾವಿಸಿದನು. ಆ ರೀತಿ ಭಾವಿಸಲು ಅವನಿಗೆ ಸಕಾರಣಗಳಿದ್ದುವು ಅಕಸ್ಮಾತ್ ಅಪರಾಧಿಗಳು ಪೋಲಿಸಿನವರ ಕೈಗೆ ಸಿಕ್ಕಿಬಿದ್ದರೆ, ಅವರ ಮುಖಾಂತರ ತನ್ನ ಹೆಸರು ಬಂದರೆ, ತಾನು ಮಂತ್ರಿಯಾಗಿ

ಸಚಿವಾಲಯದಲ್ಲಿರುವ ಬದಲು ಅಪರಾಧಿಯಾಗಿ ಸೆರೆಮನೆಯಲ್ಲಿರಬೇಕಾದೀತೆಂಬುದನ್ನು ಅವನು ಅರಿತಿದ್ದನು.

ಆದ್ದರಿಂದ ಅಪರಾಧಿಗಳಿಗೆ ಸಭ್ಯವೇಷವನ್ನು ತೊಡಿಸಿ ತನ್ನ ಮನೆಯ ಹಿಂಭಾಗದಲ್ಲಿದ್ದ ಅತಿಥಿ ಗೃಹದಲ್ಲಿ ಅವರನ್ನು ಉಳಿಸಿಕೊಂಡನು. ಅವರಿರುವ ಕೊಠಡಿಯೊಳಗೆ ಯಾರೂ ಹೋಗದಂತೆ ವ್ಯವಸ್ಥೆ ಮಾಡಿ, ಅವರಿಗೆ ಆ ಕೊಠಡಿಯಲ್ಲೇ ಊಟ, ಉಪಚಾರಗಳನ್ನು ಒದಗಿಸುವ ಏರ್ಪಾಡುಮಾಡಿ, ಅವರ ಯೋಗಕ್ಷೇಮವನ್ನು ನೋಡಿಕೊಳ್ಳಲು ತನಗಾಪ್ತನಾದ ಒಬ್ಬ ಸೇವಕನನ್ನು ನೇಮಿಸಿದನು. ಯಾರಿಗೂ ಅವರಿರುವ ವಿಚಾರವನ್ನು ತಿಳಿಸಬಾರದೆಂದೂ, ಯಾರಾದರೂ ಕೇಳಿದರೆ ನೆರೆರಾಜ್ಯದಿಂದ ಬಂದ ಅತಿಥಿಗಳೆಂದು ತಿಳಿಸಬೇಕೆಂದೂ, ಆ ಸೇವಕನಿಗೆ ಆಜ್ಞಾಪಿಸಿದನು.

ಯತೀಂದ್ರನು ಅಪರಾಧಿಗಳ ಪತ್ತೆಗಾಗಿ ರಾಜಧಾನಿಗೆ ಬಂದಿರುವುದನ್ನೂ, ಅವನು ರಣಧೀರನ ಸಹಾಯವನ್ನು ಪಡೆದಿರುವುದನ್ನೂ ಶಂಭು ಗೃಹ ಮಂತ್ರಿಯ ಮೂಲಕ ತಿಳಿದುಕೊಂಡಿದ್ದನು. ಸಾಹಸಿಗಳೂ, ಛಲಗಾರರೂ ಆದ ಆ ಅಧಿಕಾರಿಗಳನ್ನು ಹಿಡಿಯಲು ವಿಶ್ವಪ್ರಯತ್ನ ಮಾಡುತ್ತಾರೆಂಬ ವಿಷಯದಲ್ಲಿ ಶಂಭುವಿಗೆ ಎಳ್ಳಷ್ಟೂ ಸಂಶಯವಿರಲಿಲ್ಲ. ಅಪರಾಧಿಗಳು ಅವರ ಕೈಗೆ ಸಿಕ್ಕಿಬಿದ್ದರೆ ತನ್ನ ಗುಟ್ಟು ರಟ್ಟಾಗುವುದೆಂದು ಅವನು ಸ್ಪಷ್ಟವಾಗಿ ತಿಳಿದಿದ್ದನು. ಆದ್ದರಿಂದ ತನ್ನ ಉಳಿವಿಗಾಗಿಯೇ ಅಪರಾಧಿಗಳ ಸುಳಿವು ಪೋಲಿಸರಿಗೆ ಸಿಕ್ಕದಂತೆ ಮಾಡುವುದು ಅವನಿಗೆ ಅತ್ಯಾವಶ್ಯಕವಾಗಿತ್ತು. ಯತೀಂದ್ರನನ್ನೂ, ರಣಧೀರರನ್ನೂ ಮೀರಿಸುವ ರೀತಿಯಲ್ಲಿ ತಾನು ಸಾಹಸಪಡಬೇಕೆಂದು ಶಂಭು ಸಂಕಲ್ಪ ಮಾಡಿದನು. ಯತೀಂದ್ರನು ರಾಜಧಾನಿಗೆ ಬಂದ ದಿನ ರಾತ್ರಿಯೇ ಅವನಿದ್ದ ಭೋಜನಗೃಹದ ಸಮೀಪ ತನ್ನ ಗೂಢಚಾರನನ್ನು ನೇಮಿಸಿದನು. ಆ ಗೂಢಚಾರರು ಯತೀಂದ್ರನ ಮತ್ತು ರಣಧೀರನ ಚಲನವಲನಗಳನ್ನು ಅವಲೋಕಿಸುತ್ತಾ ಆಗಾಗ ಶಂಭುವಿಗೆ ವರದಿಯನ್ನೊಪ್ಪಿಸುತ್ತಿದ್ದರು.

ಮರುದಿನ ಬೆಳಿಗ್ಗೆ ಯತೀಂದ್ರನಿಗೆ ಒಂದು ಟೆಲಿಗ್ರಾಂ ಬಂದಿತು. ಆ ಟೆಲಿಗ್ರಾಂ ಅಮರಶಿಲೆಯ ಪೋಲಿಸ್ ಇನ್‌ಸ್ಪೆಕ್ಟರ್ ಕಳುಹಿಸಿದಂತೆ ಇತ್ತು. ಅದರ ಒಕ್ಕಣೆ ಈ ರೀತಿ ಇತ್ತು;

"ಅಪರಾಧಿಗಳು ಹೇಮಗಿರಿಯಲ್ಲಿದ್ದಾರೆಂದು ಖಚಿತ ವರ್ತಮಾನ ಬಂದಿದೆ. ನಾನೀಗ ಹೇಮಗಿರಿಗೆ ಹೊರಟಿದ್ದೇನೆ. ತಾವೂ ದಯವಿಟ್ಟು ಅಲ್ಲಿಗೆ ಹೊರಡಿ."

ಆ ತಂತಿಯ ಸಮಾಚಾರವನ್ನು ಓದಿದ ಯತೀಂದ್ರನಿಗೆ ಆ ಸಮಾಚಾರದ ವಿಚಾರದಲ್ಲಿ ಅದೇಕೋ ಅನುಮಾನವಾಯಿತು. ಅನುಮಾನ ನಿವಾರಣೆಗಾಗಿ ತನ್ನ ಕೊಠಡಿಯಿಂದಲೇ ಅಮರಶಿಲೆಯ ಪೋಲಿಸ್ ಇನ್‌ಸ್ಪೆಕ್ಟರಿಗೆ ಫೋನ್ ಮಾಡಿದನು. ಇನ್‌ಸ್ಪೆಕ್ಟರು ತಾನಾವ ತಂತಿಯನ್ನೂ ಕಳಿಸಿಲ್ಲವೆಂದು ಉತ್ತರವಿತ್ತರು. ಯತೀಂದ್ರನಿಗೆ ಆಶ್ಚರ್ಯವಾಯಿತು. ಅಪರಾಧಿಗಳೋ ಅಥವಾ ಅವರು ಪರವಾಗಿರುವವರೋ ತನ್ನನ್ನು ದಾರಿತಪ್ಪಿಸುವ ಪ್ರಯತ್ನದಲ್ಲಿ ತೊಡಗಿದ್ದಾರೆಂದು ಅವನು ಭಾವಿಸಿದನು.

ಆ ಬೆಳಿಗ್ಗೆ ಉಪಹಾರ ಮುಗಿದ ಬಳಿಕ ಯತೀಂದ್ರನೂ, ರಣಧೀರನೂ ಕೇಡಿಗಳಂತೆ ಮಾಸಲು ಬಟ್ಟೆಗಳನ್ನು ಧರಿಸಿ ಹೊರಟರು. ಶಂಭುವಿನ ಗೂಢಚಾರರು ಸಹ ಇನ್ನೊಂದು ಟ್ಯಾಕ್ಸಿಯಲ್ಲಿ ಕುಳಿತು ಅವರನ್ನು ಹಿಂಬಾಲಿಸಿ ಹೊರಟರು. ಕೊಲೆ, ಡಕಾಯಿತಿ ಮುಂತಾದ ಹೀನ ಕೃತ್ಯಗಳಲ್ಲಿ ತೊಡಗಿರುವ ಕೇಡಿಗಳು ಜೂಜಾಡಲು ರಾಜಧಾನಿಯ ಎರಡು ಗುಪ್ತ ದ್ಯೂತಮಂದಿರಗಳಲ್ಲಿ ಆಗಾಗ ಸೇರುತ್ತಾರೆಂಬ ವಿಚಾರವನ್ನು ರಣಧೀರನು ಕೇಳಿದ್ದನು. ಒಂದು ದ್ಯೂತಮಂದಿರವು ವೇಶ್ಯಾ ಮಂದಿರಗಳ ಕೇರಿಯಲ್ಲಿತ್ತು. ಇನ್ನೊಂದು ಊರಿನ ಹೊರಭಾಗದಲ್ಲಿ ಕುಡುಕರ ಮತ್ತು ಕೇಡಿಗಳ ಆವಾಸಸ್ಥಾನವಾಗಿದ್ದ ಕೊಳಚೆಯ ಪ್ರದೇಶದಲ್ಲಿತ್ತು. ಆ ದ್ಯೂತಮಂದಿರವನ್ನು 'ಯಮಸದನ' ವೆಂದು ಕರೆಯುತ್ತಿದ್ದರು.

ಯತೀಂದ್ರ ರಣಧೀರರು ಮೊದಲು ವೇಶ್ಯಾಮಂದಿರಗಳ ಕೇರಿಯಲ್ಲಿದ್ದ ಜೂಜಿನಕಟ್ಟೆಯ ಕಡೆಗೆ ಹೊರಟರು. ಟ್ಯಾಕ್ಸಿಯನ್ನು ಸ್ವಲ್ಪದೂರದಲ್ಲಿ ನಿಲ್ಲಿಸಿ ಸ್ನೇಹಿತರಿಬ್ಬರೂ ದ್ಯೂತಮಂದಿರಕ್ಕೆ ಕಾಲು ನಡಿಗೆಯಲ್ಲೇ ಹೋದರು. ದ್ಯೂತಮಂದಿರದ ಒಳಗಿನ ದೃಶ್ಯ ಅಸಹ್ಯಮಯವಾಗಿತ್ತು. ಜೂಜುಗಾರರು ಅಲ್ಲಲ್ಲಿ ಗುಂಪುಗುಂಪಾಗಿ ಕುಳಿತು, ಐದು ರೂಪಾಯಿಗಳಿಂದ ಐವತ್ತು ರೂಪಾಯಿಗಳವರೆಗೆ ಹಣ ಒಡ್ಡಿ ಜೂಜಾಡುತ್ತಿದ್ದರು. ಅವರಲ್ಲಿ ಕೆಲವರು ಅಲ್ಪಸ್ವಲ್ಪ ಕುಡಿದು ಆವೇಶಭರಿತರಾಗಿದ್ದರೆ, ಕೆಲವರು ಕಂಠಪೂರ್ತಿ ಕುಡಿದವರಾಗಿದ್ದು ಅಶ್ಲೀಲ ಸಂಭಾಷಣೆಯಲ್ಲಿ ತೊಡಗಿದ್ದರು.

ಯತೀಂದ್ರನೂ, ರಣಧೀರನೂ ಜೂಜುಗಾರರಂತೆ ನಟಿಸುತ್ತಾ ಒಂದೊಂದು ಗುಂಪನ್ನು ಸೇರಿ ಆಡತೊಡಗಿದರು. ಯತೀಂದ್ರನು ಪ್ರತಿ ಆಟದಲ್ಲೂ ಸೋಲುತ್ತಿದ್ದನು; ರಣಧೀರನು ಪ್ರತಿ ಆಟದಲ್ಲೂ ಗೆಲ್ಲುತ್ತಿದ್ದನು. ಒಂದು ಗಂಟೆಯೊಳಗಾಗಿ ಯತೀಂದ್ರನು ನೂರು ರೂಪಾಯಿಗಳನ್ನು ಕಳೆದುಕೊಂಡಿದ್ದನು; ರಣಧೀರನು ನೂರೈವತ್ತು ರೂಪಾಯಿಗಳನ್ನು ಸಂಪಾದಿಸಿದ್ದನು. ಜೂಜಾಡುತ್ತಿರುವಾಗಲೇ ಅವರಿಬ್ಬರೂ ಸಿಂಹಾವಲೋಕನ ಮಾಡಿ ಜೂಜಿನ ಮಂದಿರದಲ್ಲಿದ್ದವರನ್ನೆಲ್ಲಾ ಸೂಕ್ಷ್ಮವಾಗಿ ಗಮನಿಸುತ್ತಿದ್ದರು.

ತಾವು ಹುಡುಕುತ್ತಿದ್ದ ಕೊಲೆಪಾತಕಿಗಳು ಅಲ್ಲಿರಲಿಲ್ಲವೆಂಬುದು ಅವರಿಗೆ ಮನದಟ್ಟಾಗಿತ್ತು. ಆದ್ದರಿಂದ ಅಲ್ಲಿ ಸುಮ್ಮನೆ ವ್ಯರ್ಥ ಕಾಲಹರಣ ಮಾಡುವುದು ಅವರಿಗೆ ಸರಿ ಎನಿಸಲಿಲ್ಲ. ಆದರೆ ಅಲ್ಲಿಂದ ಕಾಲು ಕೀಳುವುದು ಸುಲಭವಾಗಿರಲಿಲ್ಲ ಯತೀಂದ್ರನೊಡನೆ ಆಡುತ್ತಿದ್ದವರು ಅವನಿಂದ ಇನ್ನೂ ಹೆಚ್ಚಿನ ಹಣವನ್ನು ಕೀಳಬೇಕೆಂದು ಯೋಚಿಸಿದ್ದರು. ರಣಧೀರನ ಜೊತೆಯಲ್ಲಿ ಆಡುತ್ತಿದ್ದವರು ಅವನು ದಕ್ಕಿಸಿಕೊಂಡಿದ್ದ ಹಣವನ್ನು ಪುನಃ ಕಕ್ಕಿಸಬೇಕೆಂದು ಯೋಚಿಸುತ್ತಿದ್ದರು.

ಏನು ಮಾಡಬೇಕೆಂದು ಇಬ್ಬರಿಗೂ ಯೋಚನೆಯಾಗಿತ್ತು. ಯತೀಂದ್ರನಿಗೆ ಒಂದು ಉಪಾಯ ಹೊಳೆಯಿತು. ಅವನು ಇದ್ದಕಿದ್ದಂತೆಯೇ ಹೊಟ್ಟೆನೋವೆಂದು ಹೇಳಿ ಒದ್ದಾಡತೊಡಗಿದನು. ರಣಧೀರನು ಮೆಲ್ಲಗೆದ್ದು ಅವನನ್ನು ಮೇಲಕ್ಕೆತ್ತಿ, ಅವನ ಕೈ ಹಿಡಿದುಕೊಂಡು, ಡಾಕ್ಟರ ಬಳಿಗೆ ಕರೆದೊಯ್ಯುವ ನೆಪದಲ್ಲಿ ರಸ್ತೆಗೆ ಕರೆತಂದನು.

ರಸ್ತೆಗೆ ಬಂದಮೇಲೆ ದ್ಯೂತ ಶಿಖಾಮಣಿಗಳು ಅವರನ್ನೇನೂ ಮಾಡಲಾಗಲಿಲ್ಲ. ಟ್ಯಾಕ್ಸಿ ಇದ್ದ ಸ್ಥಳಕ್ಕೆ ತಲುಪಿದ ನಂತರ ಅಲ್ಲಿಂದ ಟ್ಯಾಕ್ಸಿಯಲ್ಲಿ ಕುಳಿತು ಯಮಸದನದ ಕಡೆಗೆ ತೆರಳಿದರು. ಯಮಸದನವು ಒಂದು ಅಂಗಡಿಯ ಕೆಳಭಾಗದಲ್ಲಿ ನೆಲಮಾಳಿಗೆಯಲ್ಲಿ ನೆಲೆಗೊಂಡಿತ್ತು. ಆ ಅಂಗಡಿಯ ಮಾಲೀಕನೇ ಯಮಸದನದ ಮಾಲೀಕನೂ ಆಗಿದ್ದನು. ಅವನೊಬ್ಬ ಕಳ್ಳಮಾಲುಗಳನ್ನು ಕೊಂಡು ಮಾರುವ ಕಳ್ಳ ವ್ಯಾಪಾರಿಯಾಗಿದ್ದನು. ಯಮಸದನದಲ್ಲಿ ಜೂಜಾಡುವುದಕ್ಕಾಗಿ ಬರುತ್ತಿದ್ದವರಿಂದ ದಿನವೊಂದಕ್ಕೆ ಪತ್ರಿಯೊಬ್ಬರಿಂದಲೂ ಇಪ್ಪತ್ತು ರೂಪಾಯಿಗಳಂತೆ ಪ್ರವೇಶ ಧನವನ್ನು ಅವನು ವಸೂಲು ಮಾಡುತ್ತಿದ್ದನು. ಪ್ರವೇಶ ಧನದಿಂದಲೇ ಅವನಿಗೆ ಪ್ರತಿ ತಿಂಗಳಲ್ಲೂ ಸಾವಿರಾರು ರೂಪಾಯಿಗಳ ವರಮಾನವಿತ್ತು. ಹೆಸರಾದ ಕೇಡಿಗಳೂ, ಡಕಾಯಿತರೂ, ಕೊಲೆಗಡುಕರೂ ದ್ಯೂತ ಮಂದಿರದಲ್ಲಿ ಜೂಜಾಡುತ್ತಿದ್ದರು.

ಜೂಜಾಡುವ ವ್ಯಕ್ತಿಗಳನ್ನು ಪತ್ತೆ ಹಚ್ಚುವ ಉದ್ದೇಶದಿಂದ ಯಾರಾದರೂ ಯಮಸದನಕ್ಕೆ ಹೋದಲ್ಲಿ ಅಂತಹವರು ಜೀವಸಹಿತ ಹಿಂದಿರುಗಿ ಬರುವುದೇ ಕಷ್ಟವಾಗುತ್ತಿತ್ತು. ತಮ್ಮನ್ನು ಪತ್ತೆ ಹಚ್ಚುವ ಸಲುವಾಗಿ ಬಂದಿರುವರೆಂದು ಜೂಜಾಡುವವರಿಗೆ ಅನುಮಾನ ಬಂದಲ್ಲಿ, ಹಾಗೆ ಪತ್ತೆ ಹಚ್ಚಲು ಬಂದವರನ್ನು ಮುಗಿಸಿ ಪತ್ತೆಯಾಗದಂತೆ ನೆಲಮಾಳಿಗೆಯಲ್ಲಿ ಹೂತು ಬಿಡುತ್ತಿದ್ದರು. ಕೆಲವರು ಯಮಸದನದ ಗುಟ್ಟನ್ನು ತಿಳಿಯಲು ಹೋಗಿ ನಿಜವಾದ ಯಮಸದನವನ್ನೇ ಸೇರಿದ್ದರು. ಅದಕ್ಕಾಗಿಯೇ ಆ ದ್ಯೂತ ಮಂದಿರವನ್ನು ಜನರು "ಯಮಸದನ"ವೆಂದು ಕರೆಯುತ್ತಿದ್ದರು.

ಯತೀಂದ್ರನೂ, ರಣಧೀರನೂ ಟ್ಯಾಕ್ಸಿಯನ್ನು ನಿಲ್ಲಿಸಿ, ಅಂಗಡಿಯವನ ಬಳಿಗೆ ತಾವು ಜೂಜಾಡಲು ಬಂದವರೆಂದೂ ತಮ್ಮನ್ನು ನೆಲಮಾಳಿಗೆಯೊಳಕ್ಕೆ ಬಿಡಬೇಕೆಂದೂ ಪ್ರಾರ್ಥಿಸಿದರು. ಅಂಗಡಿಯವನಿಗೆ ಅವರ ಮೇಲೆ ಅನುಮಾನ ಬಂದು ಅಲ್ಲಿ ನೆಲಮಾಳಿಗೆ ಯಾವುದೂ ಇಲ್ಲವೆಂದು ಹೇಳಿದನು. ಆಗ ರಣಧೀರನು, ಯಮಸದನದಲ್ಲಿ ತಾನು ಹಿಂದೆ ಜೂಜಾಡಿದವನಂತೆ ನಟಿಸಿ ಮಾತನಾಡಿದ ಮೇಲೆ, ಅಂಗಡಿಯವನು ಅವರಿಬ್ಬರಿಂದಲೂ ಪ್ರವೇಶ ಧನವನ್ನು ವಸೂಲ್ಮಾಡಿ ಯಮಸದನದ ಒಳಗೆ ಬಿಟ್ಟನು.

ಯಮಸದನದ ದೃಶ್ಯವು ಭಯಾನಕವಾಗಿತ್ತು. ಹೆಸರಾದ ಕೇಡಿಗಳನೇಕರು ಅಲ್ಲಿ ಜೂಜಾಡುತ್ತಿದ್ದರು. ಅವರ ಪೈಕಿ ಕೆಲವರು ಹಿಂದೆ ರಣಧೀರನನ್ನು ನೋಡಿದ್ದರು. ಆದರೆ ಅಂದು ರಣಧೀರನು ವೇಷವನ್ನು ಬದಲಿಸಿಕೊಂಡಿದ್ದರಿಂದ ಅವನನ್ನು ಪಕ್ಕನೆ ಗುರುತಿಸಲು ಅವರಿಗೆ ಸಾಧ್ಯವಾಗಿರಲಿಲ್ಲ. ಕೇಡಿಗಳ ಸಂಶಯ ದೃಷ್ಟಿ, ಬೀಡಿ ಸಿಗರೇಟುಗಳ ಹೊಗೆ, ಸುರೆಯ ದುರ್ಗಂಧ, ಅಸಹ್ಯವಾದ ಮಾತುಗಳು, ತಲೆ ತಿರುಗಿಸುವ ಪಣ, ಇವುಗಳಿಂದ ಯಮಧೈರ್ಯಶಾಲಿಗಳೆನಿಸಿಕೊಂಡಿದ್ದ ಈರ್ವರೂ ದಿಗ್ಭ್ರಾಂತರಾದವರಂತೆ ತಬ್ಬಿಬ್ಬಾಗಿದ್ದರು.

ಜೂಜುಗಾರರು ಅವರಿಬ್ಬರನ್ನೂ ಕುರಿತು ಹಲವು ಪ್ರಶ್ನೆಗಳನ್ನು ಕೇಳುತ್ತಿದ್ದರು. ಯತೀಂದ್ರನು ತನ್ನ ಗರುಡ ದೃಷ್ಟಿಯನ್ನು ಸುತ್ತಲೂ ಬೀರಿ ಅಲ್ಲಿದ್ದ ಕೇಡಿಗಳನ್ನು

ಪರೀಕ್ಷಿಸುತ್ತಿದ್ದ ರೀತಿಯನ್ನು ಗಮನಿಸಿದ ಕೇಡಿಗಳಿಗೆ ಅವನ್ಯಾರನ್ನೋ ಅರಸುತ್ತಿರುವಂತೆ ಭಾಸವಾಯಿತು. ಅನುಮಾನಗೊಂಡು ಅವರುಗಳು ತಮ್ಮ ತಮ್ಮಲ್ಲೇ ಪಿಸುಮಾತಿನಲ್ಲಿ ಏನನ್ನೋ ಆಡಿಕೊಳ್ಳತೊಡಗಿದರು.

ಇದ್ದಕ್ಕಿದ್ದ ಹಾಗೆ ಕೇಡಿಯೊಬ್ಬನೆದ್ದು ರಣಧೀರನ ಬಳಿಗೆ ಧಾವಿಸಿ ಬಂದು "ಏ, ನೀನು ರಣಧೀರ ಅಲ್ಲವೇನೋ," ಎಂದು ಹೇಳುತ್ತಾ ರಣಧೀರನನ್ನು ಹಿಡಿದು ಕೊಳ್ಳಲೆತ್ನಿಸಿದ. ತಕ್ಷಣವೇ ರಣಧೀರನ ರಿವಾಲ್ವರಿನ ಗುಂಡು ಆ ಕೇಡಿಯನ್ನು ಕೆಳಗುರುಳಿಸಿತು. ನಿಮಿಷ ಮಾತ್ರದಲ್ಲಿ ಯತೀಂದ್ರನೂ ಸಹ ತನ್ನ ರಿವಾಲ್ವರನ್ನು ಹೊರಗೆಳೆದು, ದ್ಯೂತಮಂದಿರದಿಂದ ಹೊರಗೆ ಹೋಗಲು ಉದ್ಯುಕ್ತವಾಗಿ ರಣಧೀರನಿಗೆ ಸಂಜ್ಞೆ ಮಾಡಿ ಬಾಗಿಲೆಡೆಗೆ ನುಗ್ಗಿದನು.

ರಣಧೀರನು ಬಾಗಿಲ ಕಡೆಗೆ ತಿರುಗುವಷ್ಟರಲ್ಲೇ ಕೇಡಿಯೊಬ್ಬನ ಪಿಸ್ತೂಲಿನ ಗುಂಡು ಅವನ ಬಲ ಭುಜವನ್ನು ಕೀರಿಕೊಂಡು ಬಾಗಿಲಿಗೆ ಬಡಿಯಿತು. ಆ ನಂತರ ರಣಧೀರನೂ, ಯತೀಂದ್ರನೂ, ಬಾಗಿಲ ಕಡೆಗೆ ಹಿಮ್ಮುಖವಾಗಿ ಸರಿಯುತ್ತಾ ಗುಂಡಿನ ಮಳೆಯನ್ನೇ ಸುರಿಸಲಾರಂಭಿಸಿದರು. ಏಕಾಏಕಿ ಗುಂಡಿನ ಮಳೆ ಸುರಿಯುತ್ತಿರುವುದನ್ನು ಕಂಡ ಕೇಡಿಗಳು ಏನು ಮಾಡಲೂ ತೋರದೆ ಕಂಗಾಲಾದರು. ಅವರು ಪ್ರತಿಯಾಗಿ ಗುಂಡು ಹಾರಿಸುವುದರೊಳಗಾಗಿ ಯತೀಂದ್ರನೂ, ರಣಧೀರನು ಬಾಗಿಲನ್ನು ದಾಟಿ ಬೀದಿಯನ್ನು ಸೇರಿದ್ದರು.

ಆಗಲೇ ಸಂಜೆ ನಾಲ್ಕು ಗಂಟೆಯಾಗಿತ್ತು. ರಿವಾಲ್ವರಿನ ಗುಂಡಿನಿಂದ ರಣಧೀರನಿಗೆ ಅಗಾಧವಾದ ಗಾಯವಾಗದಿದ್ದರೂ ರಕ್ತಸ್ರಾವದಿಂದ ಬಳಲಿ ನೋವಿನಿಂದ ನರಳುತ್ತಿದ್ದನು. ಹೋಟೆಲನ್ನು ತಲಪಿದ ನಂತರ ಆಸ್ಪತ್ರೆಗೆ ಹೋಗಿ ಭುಜದ ಗಾಯಕ್ಕೆ ಚಿಕಿತ್ಸೆ ಮಾಡಿಸಿದನು. ಆ ನಂತರ ಮುಂದೇನು ಮಾಡಬೇಕೆಂಬ ವಿಚಾರದಲ್ಲಿ ಮತ್ತೊಮ್ಮೆ ಇಬ್ಬರು ಆಪ್ತಾಲೋಚನೆಯಲ್ಲಿ ಮಗ್ನರಾದರು. ಕೊಲೆಯಲ್ಲಿ ಶಂಭುವಿನ ಕೈವಾಡ ಇದೆಯೆಂಬುದು ಇಬ್ಬರಿಗೂ ಅರಿವಾಗಿತ್ತು. ಅಪರಾಧಿಗಳು ಶಂಭುವಿನ ರಕ್ಷಣೆಯಲ್ಲಿ ಇರಬಹುದೆಂಬ ಅನುಮಾನ ಅವರಿಬ್ಬರಿಗೂ ಉಂಟಾಗಿತ್ತು. ಆದ್ದರಿಂದ ಶಂಭುವಿನ ಚಲನವಲನಗಳನ್ನು ತಿಳಿಯುವುದಕ್ಕಾಗಿ ಗೂಢಚಾರರನ್ನು ನೇಮಿಸಿದರು. ಅಪರಾಧಿಗಳ ಪತ್ತೆಯಾಗದಿದ್ದರೂ ಆ ದಿನ ಯಮಸದನದಿಂದ ಬದುಕಿ ಬಂದಿದ್ದಕ್ಕಾಗಿ ಇಬ್ಬರು ಭಗವಂತ ನನ್ನು ಸ್ಮರಿಸಿಕೊಂಡರು. ಬಳಲಿದ್ದ ಅವರಿಬ್ಬರೂ ಆ ರಾತ್ರಿ ಚೆನ್ನಾಗಿ ನಿದ್ದೆ ಮಾಡಿದರು.

* * * *

ಮುಂಜಾನೆ ಯತೀಂದ್ರನು ತನ್ನ ಕೊಠಡಿಯಲ್ಲಿ ಮುಖಕ್ಷೌರ ಮಾಡಿಕೊಳ್ಳುತ್ತಿದ್ದಾಗ ಕಿಟಕಿಯಿಂದ ಯಾರೋ ಒಂದು ಲಕೋಟೆಯನ್ನೆಸೆದು ಓಡಿಹೋದರು. ಕ್ಷೌರ ಮಾಡಿಕೊಳ್ಳುತ್ತಿದ್ದ ಯತೀಂದ್ರನು ಕ್ಷೌರ ಮಾಡಿಕೊಳ್ಳುವುದನ್ನು ನಿಲ್ಲಿಸಿ, ಲಕೋಟೆಯನ್ನೆತ್ತಿಕೊಂಡು ಅದನ್ನೊಡೆದು ಒಳಗಿದ್ದ ಕಾಗದವನ್ನು ಆತುರದಿಂದ ಓದಲಾರಂಭಿಸಿದನು.ಆ ಕಾಗದ ಈ ರೀತಿಯಿತ್ತು.

"ಶ್ರೀ ಯತೀಂದ್ರನಾಥರಿಗೆ,

ನೀವು ಯಾರನ್ನು ಹುಡುಕಲು ಈ ಊರಿಗೆ ಬಂದಿದ್ದೀರೋ, ಅವರು ಒಂದು ಸಾವಿರ ಮೈಲಿಗಳಾಚೆ ಹೋಗಿದ್ದಾರೆ. ನೀವು ವ್ಯರ್ಥ ಶ್ರಮಪಡುತ್ತೀದ್ದೀರಿ. ಪತ್ತೆ ಮಾಡುವ ದಾರಿಯಲ್ಲಿ ನೀವು ಇನ್ನೂ ಮುಂದುವರಿದದ್ದೇ ಆದರೆ ನಿಮ್ಮ ಪ್ರಾಣಕ್ಕೆ ಅಪಾಯ ಖಂಡಿತ. ನೀವು ಬದುಕಬೇಕೆಂಬ ಆಸೆಯಿದ್ದರೆ, ಈ ದಿನ ಸಾಯಂಕಾಲ ನಾಲ್ಕು ಗಂಟೆಗೆ ದೊಡ್ಡ ಉದ್ಯಾನವನದಲ್ಲಿರುವ ಲತಾಮಂಟಪದ ಬಳಿಗೆ ಬಂದರೆ ನಿಮಗೆ ಐದು ಸಾವಿರ ರೂಪಾಯಿಗಳನ್ನು ಕೊಡುವ ಏರ್ಪಾಡು ಮಾಡುತ್ತೇವೆ. ಆದರೆ ನೀವೊಬ್ಬರೇ ಬರಬೇಕು.

ಇತಿ ನಿಮ್ಮ ಹಿತೈಷಿಗಳು."

ಕಾಗದವನ್ನು ಓದಿದೊಡನೆ ಯತ್ರೀಂದ್ರನಿಗೆ ಮೈ ಜುಮ್ಮೆಂದಿತು. ತಾನು ಕ್ಷೌರ ಮಾಡಿಕೊಳ್ಳುತ್ತಿದ್ದುದನ್ನೂ ಸಹ ಮರೆತು, ಲಕೋಟೆಯನ್ನೆಸೆದು ಓಡಿಹೋದವನನ್ನು ಹಿಡಿಯುವುದಕ್ಕಾಗಿ ಕೊಠಡಿಯಿಂದ ಹೊರಗೆ ಓಡಿ, ಹೋಟೆಲಿನ ಆವರಣದಲ್ಲಿ, ಅದರ ಸುತ್ತ ಮುತ್ತ ಎಲ್ಲಾ ಕಡೆಯೂ ಹುಡುಕಿದನು. ಯಾರು ಕಾಣಲಿಲ್ಲ. ಗುಪ್ತವಾಗಿ ಅಡಗಿಕೊಂಡಿದ್ದ ಶಂಭುವಿನ ಗೂಢಚಾರರು ಅರ್ಧ ಕ್ಷೌರವಾಗಿದ್ದ ಅವನ ಅವಸ್ಥೆಯನ್ನು ಕಂಡು ತಮ್ಮೊಳಗೆ ನಗುತ್ತಿದ್ದರು. ಯತೀಂದ್ರನು ತನಗೆ ಅರ್ಧ ಕ್ಷೌರವಾಗಿದೆಯೆಂಬುದನ್ನು ಜ್ಞಾಪಿಸಿಕೊಂಡು ತನ್ನ ಕೊಠಡಿಗೆ ಹಿಂತಿರುಗಿದನು.

ಹಿಂದಿನ ದಿನ ಬಂದಿದ್ದ ತಂತಿಯಿಂದಲೂ, ಆ ದಿನ ಬಂದಿದ್ದ ಕಾಗದದಿಂದಲೂ ಯತೀಂದ್ರನಿಗೆ ಗೊಂದಲವಾಗಿದ್ದ ತಲೆ ಬಹಳ ಬಿಸಿಯಾಗಿತ್ತು. ಅಪರಾಧಿಗಳು ಸಾಮಾನ್ಯ ವ್ಯಕ್ತಿಗಳಲ್ಲವೆಂಬುದೂ, ಕೊಲೆಗೆ ಶಂಭುವೇ ಮೂಲ ಕಾರಣವೆಂದೂ, ಅವನ ಮನಸ್ಸಿಗೆ ಇನ್ನಷ್ಟು ಧೃಢವಾಯಿತು. ಲತಾ ಮಂಟಪಕ್ಕೆ ಹೋಗುವ ಸಾಧಕಬಾಧಕಗಳನ್ನು ಯೋಚಿಸತೊಡಗಿದನು. ಅಲ್ಲಿಗೆ ಹೋಗಿ ಹಣ ಕೊಡುವವರನ್ನು ಹಿಡಿದರೆ ಅಪರಾಧಿಗಳ ಶೋಧನೆ ಸುಲಭವಾಗಬಹುದೆಂಬ ಆಸೆ; ಹಿಡಿಯಲು ಹೋದರೆ ತನ್ನ ಜೀವಕ್ಕೆ ಅಪಾಯ ಬಂದೀತೆಂಬ ಭಯ; ಲಂಚ ನಿರೋಧ ಇಲಾಖೆಯವರು ತನ್ನನ್ನು ಹಿಡಿಯಲು ಹೂಡಿರುವ ತಂತ್ರವಿದ್ದರೂ ಇರಬಹುದೆಂಬ ಶಂಕೆ; ಈ ರೀತಿ ನಾನಾ ಯೋಚನೆಗಳಿಗೆ ಸಿಕ್ಕಿ ಅವನ ಮನಸ್ಸು ಹೊಯ್ದಾಡುತ್ತಿತ್ತು.

ರಣಧೀರನು ಬಂದ ನಂತರ ಯತೀಂದ್ರನು ಅವನೊಡನೆ ಸಮಾಲೋಚನೆ ಮಾಡಿ, ಆ ನಂತರ ರವೀಂದ್ರನಾಥರ ಭೇಟಿಗಾಗಿ ತಾನೊಬ್ಬನೇ ಅವರ ಮನೆಗೆ ಹೋದನು. ತನಗೆ ಬಂದಿದ್ದ ಪತ್ರದ ವಿಚಾರವನ್ನು ರವೀಂದ್ರನಾಥರಿಗೆ ವರದಿ ಮಾಡಿ, ಸಂಜೆ ನಾಲ್ಕು ಗಂಟೆಗೆ ತಾನು ಲತಾ ಮಂಟಪಕ್ಕೆ ಹೋಗುವುದಾಗಿಯೂ, ತನ್ನ ರಕ್ಷಣೆಗಾಗಿ ಆ ಕಾಲಕ್ಕೆ ಸರಿಯಾಗಿ ಲತಾ ಮಂಟಪದ ಬಳಿಗೆ ಪೊಲೀಸ್ ಪಡೆಯೊಂದನ್ನು ಕಳುಹಿಸಿಕೊಡಬೇಕೆಂದು ಪ್ರಾರ್ಥಿಸಿದನು. ರವೀಂದ್ರನಾಥರು ಅವನ ಪ್ರಾರ್ಥನೆಯಂತೆ ಪೊಲೀಸ್ ಪಡೆಯನ್ನು ಕಳುಹಿಸುವುದಾಗಿ ಭರವಸೆಯನ್ನಿತ್ತರು.

ಶಂಭುವಿನ ಚಿತಾವಣೆಗೊಳಾಗಿದ್ದ ಗೃಹಮಂತ್ರಿಯು ಕೊಲೆ ಮೊಕದ್ದಮೆಯ ತನಿಖೆಯ ಪ್ರಗತಿಯನ್ನು ತನಗೆ ಆಗಾಗ ತಿಳಿಸುತ್ತಿರಬೇಕೆಂದು ರವೀಂದ್ರನಾಥರಿಗೆ ಆಜ್ಞಾಪಿಸಿದ್ದನು. ಆ ಆಜ್ಞೆಗನುಸಾರವಾಗಿ ರವೀಂದ್ರನಾಥರು ಆಗಾಗ ಗೃಹಮಂತ್ರಿಗೆ ವರದಿ ಮಾಡುತ್ತಿದ್ದರು. ಗೃಹಮಂತ್ರಿಯು ತನಗೆ ಬಂದ ವರದಿಯನ್ನು ಶಂಭುವಿಗೆ ವರದಿ ಮಾಡುತ್ತಿದ್ದನು. ಆದ್ದರಿಂದ ತನಿಖೆಗೆ ಸಂಬಂಧಪಟ್ಟ ಎಲ್ಲಾ ವಿಚಾರಗಳನ್ನು ಶಂಭು ತಿಳಿದುಕೊಳ್ಳಲು ಅವಕಾಶವಿತ್ತು. ಆ ದಿನ ಬೆಳಿಗ್ಗೆ ಯತೀಂದ್ರನು ತನ್ನೊಡನೆ ಹೇಳಿದ ವಿಚಾರಗಳನ್ನು ರವೀಂದ್ರನಾಥರು ಗೃಹಮಂತ್ರಿಗೆ ತಿಳಿಸಿದ್ದರು. ಗೃಹಮಂತ್ರಿಯು ಆ ವಿಚಾರವನ್ನು ತಕ್ಷಣ ಶಂಭುವಿಗೆ ತಿಳಸಿದ್ದನು. ಮುಂದಿನ ಮಂತ್ರಿ ಮಂಡಲದಲ್ಲಿ ತನಗೊಂದು ಸ್ಥಾನ ಲಭಿಸುವುದೆಂಬ ಆಸೆಯಿಂದ ಗೃಹಮಂತ್ರಿಯು ಶಂಭು ದಾಮೋದರರ ಕೈಗೊಂಬೆಯಾಗಿದ್ದನು.

ಸಂಜೆ ನಾಲ್ಕು ಗಂಟೆಗೆ ಸರಿಯಾಗಿ ಯತೀಂದ್ರ ಲತಾ ಮಂಟಪಕ್ಕೆ ಹೋದನು. ಲತಾ ಮಂಟಪದ ವಿಶಾಲ ಉದ್ಯಾನವನದಲ್ಲಿ ಓಡಾಡುವುದೇ ಒಂದು ಹರ್ಷದಾಯಕ ಅನುಭವ. ಅಲ್ಲಲ್ಲಿ ವರ್ಣರಂಜಿತ ಸೋಪಾನಗಳಿಂದಲೂ, ಜಲ ಧಾರೆಗಳಿಂದಲೂ, ಚಿಲುಮೆಗಳಿಂದಲೂ, ಬಗೆಬಗೆಯ ವೃಕ್ಷ ಲತೆಗಳಿಂದಲೂ, ವಿವಿಧಾಕೃತಿಯ ಹೊದರುಗಳಿಂದಲೂ, ನಾನಾ ವರ್ಣದ ನಾನಾ ಜಾತಿಯ ಪುಷ್ಪಮಯ ಗಿಡ ಬಳ್ಳಿಗಳಿಂದಲೂ, ಉದ್ಯಾನವನವು ಪರಿಶೋಭಿಸುತ್ತಿತ್ತು. ವಿವಿಧ ಮನೋಧರ್ಮದ ಜನರಿಗೆ ವಿವಿಧ ಸಂತೋಷ, ಸಂತೃಪ್ತಿಗಳನ್ನು ನೀಡುವ ಸಮ್ಮೋದಸ್ಥಳವಾಗಿತ್ತು. ಪಕ್ಷಿಗಳ ಮಧುರ ಗಾನದಿಂದಲೂ, ಸುವಾಸಿತ ಪುಷ್ಪ ಗಂಧಗಳಿಂದಲೂ ಕೂಡಿದ್ದ ಆ ಉದ್ಯಾನವನವು ನಿಜವಾಗಿಯೂ ರಮಣೀಯವಾಗಿತ್ತು.

ಯತೀಂದ್ರನು ಲತಾ ಮಂಟಪಕ್ಕೆ ಹೋಗಿ ಅರ್ಧ ಗಂಟೆ ಕಾದರೂ ಯಾರೂ ಅವನ ಬಳಿಗೆ ಸುಳಿಯಲಿಲ್ಲ. ಅವನ ರಕ್ಷಣೆಗೆ ರವೀಂದ್ರನಾಥರು ಕಳುಹಿಸಿದ್ದ ಶಸ್ತ್ರ ಸಜ್ಜಿತ ಪೋಲಿಸ್ ಪಡೆಯು ದೂರದಲ್ಲಿ ಬಂದು ನಿಂತಿದ್ದಿತು. ಯತೀಂದ್ರನು ಸುಮಾರು ಒಂದು ಗಂಟೆಯ ಕಾಲ ಅಲ್ಲಿ ಕಾದಿದ್ದರೂ ಯಾರನ್ನು ಕಾಣದೆ ನಿರಾಸೆಯಿಂದ ಹಿಂದಿರುಗಬೇಕಾಯಿತು. ಗೃಹ ಮಂತ್ರಿಯ ಸಹಾಯದಿಂದ, ಲಂಚ ನಿರೋಧ ಇಲಾಖೆಯ ಅಧಿಕಾರಿಗಳಿಂದ, ಅವನನ್ನು ಹಿಡಿಸಬೇಕೆಂದು ಶಂಭು ಹಂಚಿಕೆಯನ್ನು ಹೂಡಿದನು. ಆದರೆ ಯತೀಂದ್ರನು ತನಗೆ ಬಂದಿದ್ದ ಕಾಗದದ ವಿಚಾರವನ್ನು ಗೋಪ್ಯವಾಗಿಡದೆ ರವೀಂದ್ರನಾಥರಿಗೆ ವರದಿ ಮಾಡಿದ್ದರಿಂದ, ಶಂಭು ಆ ಹಂಚಿಕೆಯನ್ನು ಕೈ ಬಿಟ್ಟನು. ಆ ಕಾರಣದಿಂದ ಯತೀಂದ್ರನು ಹೋದಾಗ ಲತಾಮಂಟಪದ ಬಳಿ ಯಾರು ಸುಳಿದಿರಲಿಲ್ಲ.

ಶಂಭುವಿನ ಕಡೆಯ ಬೇಹುಗಾರರು ಯತೀಂದ್ರನ ಮತ್ತು ರಣಧೀರನ ಕಾರ್ಯ ಕಲಾಪಗಳನ್ನು ಕಾದು ನೋಡುತ್ತಾ , ಅವರನ್ನು ಹಿಂಬಾಲಿಸುತ್ತಾ, ಆಗಾಗ ಶಂಭುವಿಗೆ ವರದಿಯನ್ನೊಪ್ಪಿಸುತ್ತಿದ್ದರು. ಆ ಬೇಹುಗಾರರಿಗೆ ಅರಿವಾಗದ ರೀತಿಯಲ್ಲಿ, ಅವರ ಚಲನ ವಲನಗಳನ್ನು ರಣಧೀರನ ಬೇಹುಗಾರರು ಸದ್ದಿಲ್ಲದೆ ಅವಲೋಕಿಸುತ್ತಿದ್ದರು. ಅವರು

ಶಂಭುವಿನ ಮನೆಯ ಬಳಿ ಸುಳಿದಾಡುತ್ತಾ, ಅವನ ಕಾರುಬಾರುಗಳ ಮೇಲೆಯೂ ಸಹ ಕಣ್ಣಿಟ್ಟಿದರು.

ತಮ್ಮ ಗೂಢಚಾರದಿಂದ ಸಂಗ್ರಹಿಸಿದ್ದ ಸಮಾಚಾರಗಳ ಆಧಾರದ ಮೇಲೆ, ಅಪರಾಧಿಗಳು ಶಂಭುವಿನ ಮನೆಯಲ್ಲಿ ಇರಬಹುದೆಂಬ ಶಂಕೆ ಯತೀಂದ್ರನಿಗೂ, ರಣಧೀರನಿಗೂ ಉಂಟಾಗಿತ್ತು. ಶಂಭುವೂ, ಗೃಹಮಂತ್ರಿಯೂ ಸ್ನೇಹಿತರೆಂಬ ವಿಚಾರವು ಅವರಿಬ್ಬರಿಗೂ ಗೊತ್ತಿತ್ತು. ಈ ಕಾರಣದಿಂದ ಕೇವಲ ಅನುಮಾನದಿಂದ ಶಂಭುವನ್ನು ಬಂಧಿಸಲು ಅವರು ಹಿಂಜರಿದರು. ಮೊದಲು ಅಪರಾಧಿಗಳನ್ನು ಪತ್ತೆ ಹಚ್ಚಿ, ಆ ನಂತರ ಶಂಭುವನ್ನು ಬಂಧಿಸಬೇಕೆಂದು ಅವರು ಯೋಚಿಸುತ್ತಿದ್ದರು.

ಶಂಭುವನ್ನು ಹಿಡಿಯಬೇಕೆಂದು ಯತೀಂದ್ರನೂ, ಯತೀಂದ್ರನನ್ನು ಸೋಲಿಸ ಬೇಕೆಂದು ಶಂಭುವೂ, ಮನಸ್ಸಿನಲ್ಲಯೇ ಸಂಕಲ್ಪ ಮಾಡಿದ್ದರು. ಮರುದಿನ ರಣಧೀರನ ಬೇಹುಗಾರರು ಇನ್ನಷ್ಟು ಸಮಾಚಾರಗಳನ್ನು ಸಂಗ್ರಹಿಸಿದ್ದರು. ಆ ಸಮಾಚಾರಗಳ ಆಧಾರದ ಮೇಲೆ ಅಪರಾಧಿಗಳು ಶಂಭುವಿನ ರಕ್ಷಣೆಯಲ್ಲಿ, ಅವನ ಮನೆಯಲ್ಲೇ ಇದ್ದಾರೆಂಬ ಖಚಿತ ತೀರ್ಮಾನಕ್ಕೆ ಯತೀಂದ್ರನು ಬಂದಿದ್ದನು. ಅವನು ಉಪಹಾರವನ್ನು ಮುಗಿಸುವ ವೇಳೆಗೆ ಸರಿಯಾಗಿ ರಣಧೀರನು ಹೋಟೆಲಿಗೆ ಬಂದನು. ಇಬ್ಬರು ದೀರ್ಘಕಾಲ ಗುಪ್ತವಾಗಿ ಸಂಭಾಷಣೆ ನಡೆಯಿಸಿದರು. ಆ ನಂತರ ರಣಧೀರನು ತನ್ನ ಮನೆಗೆ ಹೊರಟು ಹೋದನು. ಯತೀಂದ್ರನು ತನ್ನ ಕೊಠಡಿಯಲ್ಲೆ ವಿಶ್ರಾಂತಿ ಪಡೆಯುತ್ತಿದ್ದನು.

ಮಧ್ಯಾಹ್ನದ ಊಟವಾದ ಬಳಿಕ, ಯತೀಂದ್ರನು ಹೋಟೆಲ್ ಮ್ಯಾನೇಜರನ ಬಳಿಗೆ ಹೋಗಿ, ತಾನು ಬಂದ ಕೆಲಸ ನೆರವೇರಲಿಲ್ಲವಾದ್ದರಿಂದ ಸಾಯಂಕಾಲ ಅಮರಶಿಲೆಗೆ ಹೋಗುವುದಾಗಿಯೂ, ಊಟ ವಸತಿಗಳ ಬಗ್ಗೆ ತನ್ನಿಂದ ಸಲ್ಲಬೇಕಾದ ಹಣದ ಪಟ್ಟಿಯನ್ನು ಕೊಡಬೇಕಾಗಿಯೂ, ಕೇಳಿದನು. ಮ್ಯಾನೇಜರನು ಪಟ್ಟಿಯನ್ನು ಕೊಟ್ಟ ನಂತರ ಯತೀಂದ್ರನು ಹಣವನ್ನು ಕೊಟ್ಟನು. ಇದನ್ನು ನೋಡಿದ ಶಂಭುವಿನ ಗೂಢಚಾರರು ಯತೀಂದ್ರನು ಸಂಜೆ ಅಮರಶಿಲೆಗೆ ಹೋಗುತ್ತಾನೆಂದು ಶಂಭುವಿಗೆ ವರದಿ ಮಾಡಿದರು. “ಬಡ್ತೀಮಗ ಸುಸ್ತಾಗ್ಯಾನೆ ಅವನಿಗೆ ಮಣ್ಣು ಮುಕ್ಕಸ್ತೀನಿ,” ಎಂದು ಶಂಭು ಮನಸ್ಸಿನಲ್ಲೇ ಅಂದು ಕೊಂಡನು.

ಸಾಯಂಕಾಲ ಏಳು ಘಂಟೆಯ ಹೊತ್ತಿಗೆ ಯತೀಂದ್ರನ ಜೀಪು ಹೋಟೆಲ್ ಮುಂಭಾಗದಲ್ಲಿ ಬಂದು ನಿಂತಿತು. ಯತೀಂದ್ರನು ಅದರಲ್ಲಿ ಕುಳಿತು ಅಮರಶಿಲೆಗೆ ಹೋಗುವ ಹಾದಿಯಲ್ಲಿ ಪ್ರಯಾಣ ಮಾಡಿದನು. ಶಂಭುವಿನ ಗೂಢಚಾರರು ಕೆಲವು ಮೈಲಿಗಳ ದೂರ ಅವನನ್ನು ಹಿಂಬಾಲಿಸಿದರು. ಯತೀಂದ್ರನು ಅಮರಶಿಲೆಯ ಹಾದಿಯಲ್ಲಿ ಹಿಂದೆ ಹೋಗುತ್ತಾನೆಂಬ ಭರವಸೆ ಬಂದ ಮೇಲೆ ಆ ಗೂಢಚಾರರು ಹಿಂದಿರುಗಿ ಬಂದು ಶಂಭುವಿಗೆ ವರದಿ ಮಾಡಿದರು.

ಪೋಲಿಸಿನವರು ತನ್ನ ಮನೆಯನ್ನು ಶೋಧಿಸಬಹುದೆಂಬ ಶಂಕೆಯಿಂದ ಶಂಭು ಕೆಲವು ದಿನಗಳಿಂದ ತನ್ನ ಮನೆಯನ್ನು ಬಿಟ್ಟು ಹೊರಗೆ ಹೊರಟಿರಲಿಲ್ಲ. ಆ ದಿನ

ರಾತ್ರಿ, ಅವನ ಗೂಢಚಾರರು ಯತೀಂದ್ರನು ಅಮರಶಿಲೆಗೆ ಹೊರಟು ಹೋದನೆಂದು ತಿಳಿಸಿದ ಮೇಲೆ, ಅವನು ನಿಶ್ಚಿಂತನಾಗಿ, ತನ್ನ ಗೆಳತಿಯೊಬ್ಬಳನ್ನು ಸ್ಮರಿಸಿಕೊಂಡು, ಅವಳ ಮನೆಗೆ ಹೊರಟು ಹೋದನು. ಅವನು ಮನೆಯನ್ನು ಬಿಟ್ಟ ನಂತರ ಅಪರಾಧಿಗಳ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದ ಸೇವಕನು ಅಪರಾಧಿಗಳಿದ್ದ ಗೃಹದ ಮುಂಬಾಗಿಲಿಗೆ ಬೀಗವನ್ನು ಹಾಕಿ ಹೊರಟು ಹೋದನು. ಆ ಸೇವಕನೂ ಸಹ ಕೆಲವು ದಿನಗಳಿಂದ ಶಂಭುವಿನ ಆಜ್ಞೆಗನುಸಾರವಾಗಿ ಹೊರಕ್ಕೆ ಹೋಗಿರಲಿಲ್ಲ. ಶಂಭು ಹೊರಕ್ಕೆ ಹೋದ ನಂತರ, ಆ ಸೇವಕನಿಗೆ ಸಾರಾಯಿ ಕುಡಿಯಬೇಕೆಂಬ ಇಚ್ಛೆಯುಂಟಾಗಿ ಹೊರಟು ಹೋದನು.

ಇತ್ತ ಯತೀಂದ್ರನು ಸುಮಾರು ಹದಿನೈದು ಕಿಲೋಮೀಟರು ದೂರ ಅಮರಶಿಲೆಯ ಹಾದಿಯಲ್ಲಿ ಪ್ರಯಾಣ ಮಾಡಿ, ಅನಂತರ ಸ್ವಲ್ಪ ಕಾಲ ಹಾದಿಯಲ್ಲೇ ಕಾಲಹರಣ ಮಾಡುತ್ತಿದ್ದು, ರಾತ್ರಿ ಸುಮಾರು ಒಂಬತ್ತು ಗಂಟೆಯ ಸುಮಾರಿಗೆ ಪುನಹ ರಾಜಧಾನಿಗೆ ವಾಪಸು ಹೋಗಿ ರಣಧೀರನ ಮನೆಯಲ್ಲಿ ತಂಗಿದನು. ಅಷ್ಟು ಹೊತ್ತಿಗಾಗಲೇ ರಣಧೀರನ ಬೇಹುಗಾರರು, ಶಂಭು ತನ್ನ ಮನೆಯನ್ನು ಬಿಟ್ಟು ಹೊರಗಡೆ ಹೋಗಿದ್ದಾನೆಂದು ವರದಿಯನ್ನೊಪ್ಪಿಸಿದ್ದರು. ಅದನ್ನು ತಿಳಿದ ಯತೀಂದ್ರನು ಕಾಂಗ್ರೆಸ್ಸಿನವನಂತೆ ಛದ್ಮವೇಷಧಾರಿಯಾಗಿ ರಣಧೀರನ ಮನೆಯಿಂದ ಟ್ಯಾಕ್ಸಿಯೊಂದರಲ್ಲಿ ಕುಳಿತು ಶಂಭುವಿನ ಮನೆಯತ್ತ ತೆರಳಿದನು.

ಯತೀಂದ್ರನು ಶಂಭುವಿನ ಮನೆಗೆ ಹೋದಾಗ ಮನೆಯಲ್ಲಿ ಸೇವಕನೊಬ್ಬನ ವಿನಹ ಇನ್ಯಾರು ಕಾಣಲಿಲ್ಲ. ತಾನು ನಿಂಬೂರಿನವನೆಂದೂ, ಶಂಭುವಿನ ಪ್ರಿಯ ಮಿತ್ರನೆಂದೂ ಆ ಸೇವಕನಿಗೆ ತಿಳಿಸಿದನು. ಶಂಭು ಒಂದೆರಡು ಗಂಟೆಗಳೊಳಗಾಗಿ ವಾಪಸು ಬರುತ್ತಾನೆಂದೂ, ಅಲ್ಲಿಯವರೆಗೆ ಮನೆಯಲ್ಲೇ ಇರಬಹುದೆಂದೂ ಸೇವಕನೂ ತಿಳಿಸಿದನು. ಯತೀಂದ್ರನು ಮನೆಯನ್ನು ನೋಡುವ ನೆಪದಲ್ಲಿ ಸೂಕ್ಷ್ಮದೃಷ್ಟಿಯನ್ನು ಬೀರುತ್ತಾ ಮನೆಯ ಸುತ್ತಲೂ ಓಡಾಡತೊಡಗಿದನು.

ಮನೆಯ ಹಿಂಭಾಗದಲ್ಲಿದ್ದ ಅತಿಥಿಗೃಹವು ಯತೀಂದ್ರನ ಗಮನವನ್ನು ಸೆಳೆಯಿತು. ದೂರದಿಂದಲೇ ಅದನ್ನು ನೋಡಿದನು. ಹೊರಗಡೆಯಿಂದ ಅತಿಥಿಗೃಹಕ್ಕೆ ಬೀಗ ಹಾಕಿತ್ತು. ಆದರೆ ಒಳಗೆ ಬೆಳಕು ಕಾಣಿಸುತ್ತಿತ್ತು. ಯತೀಂದ್ರನ ಕುತೂಹಲ ಕೆರಳಿತು. ಪ್ರಾಕಾರದಲ್ಲಿ ಓಡಾಡಿ ವಾಯು ಸೇವನೆ ಮಾಡುವವನಂತೆ ಅಭಿನಯಿಸುತ್ತಾ, ಅತಿಥಿಗೃಹದ ಸಮೀಪಕ್ಕೆ ಹೋದನು. ಒಳಗಡೆ ಯಾರೋ ಮಾತನಾಡುವ ಶಬ್ದ ಕೇಳಿಸಿತು. ಬಾಗಿಲಿನಲ್ಲಿದ್ದ ಸಣ್ಣ ರಂಧ್ರದಿಂದ ಇಣಿಕಿ ನೋಡಿದನು. ಒಳಗೆ ಮೂವರು ಟೋಣಪರು ಇಸ್ಪೀಟನ್ನು ಆಡುತ್ತಿದ್ದರು ಅವರೇ ಅಪರಾಧಿಗಳಾಗಿರಬೇಕೆಂದು ಯತೀಂದ್ರನು ತೀರ್ಮಾನಿಸಿದನು. ಅಲ್ಲಿಂದ ತಕ್ಷಣ ಹಿಂದಿರುಗಿ ಬಂದು, ಮನೆಯ ಮುಂಬಾಗದಲ್ಲಿದ್ದ ಸೇವಕನಿಗೆ ತಾನು ಅರ್ಧ ಗಂಟೆಯ ನಂತರ ಪುನಹ ಬರುವುದಾಗಿ ತಿಳಿಸಿ ಕಾಲಿಗೆ ಬುದ್ಧಿ ಹೇಳಿದನು.

* * * *

ಮರುದಿನ ಪ್ರಾತಃಕಾಲ ಯತೀಂದ್ರನು ರಣಧೀರನ ಮನೆಯಲ್ಲಿ ನಿತ್ಯವಿಧಿಗಳನ್ನು ಪೂರೈಸಿದ ನಂತರ ರವೀಂದ್ರನಾಥರ ಮನೆಗೆ ಹೊರಟನು. ಅಪರಾಧಿಗಳನ್ನು ಪತ್ತೆಮಾಡಿದ ಹಿಗ್ಗಿನಿಂದ ಅವನ ಮುಖವು ಪ್ರಫುಲ್ಲವಾಗಿತ್ತು. ಮೊದಲೇ ಸ್ಫುರದ್ರೂಪಿ. ಆ ದಿನ ಪೊಲೀಸ್ ಸಮವಸ್ತ್ರಗಳನ್ನು ಧರಿಸಿ ರಾಜಕುಮಾರನಂತೆ ಕಾಣುತ್ತಿದ್ದನು. ಒಂಬತ್ತು ಗಂಟೆಗೆ ಅವನ ಜೀಪು ರವೀಂದ್ರನಾಥರ ಮನೆ ಮುಂದೆ ನಿಂತಿತು. ಜಗುಲಿಯಲ್ಲಿ ನಿಂತಿದ್ದ ಜವಾನನನ್ನು ಕರೆದು, ತಾನು ಬಂದಿದ್ದ ಸಮಾಚಾರವನ್ನು ಧಣಿಗಳಿಗೆ ತಿಳಿಸಬೇಕೆಂದು ಸೂಚಿಸಿದನು. ರವೀಂದ್ರನಾಥರಿಗೆ ಯತೀಂದ್ರನನ್ನು ಕಂಡರೆ ಬಲು ಪ್ರೇಮ. ಅವನ ದಕ್ಷತೆ ಮತ್ತು ಪ್ರಾಮಾಣಿಕತೆಗಳನ್ನು ಅವರು ಬಹಳವಾಗಿ ಮೆಚ್ಚಿದ್ದರು. ಅವನು ಬಂದಿರುವ ಸಮಾಚಾರವನ್ನು ಜವಾನನು ತಿಳಿಸಿದೊಡನೆ ಅವರೇ ಸ್ವತಃ ಹೊರಗಡೆ ಬಂದು ಯತೀಂದ್ರನಿಗೆ ಹಸ್ತಲಾಘವನ್ನಿತ್ತು ಒಳಕ್ಕೆ ಕರೆದೊಯ್ದರು.

"ನೀನು ನಿನ್ನೆ ರಾತ್ರಿಯೇ ಅಮರಶಿಲೆಗೆ ವಾಪಸು ತೆರಳಿದೆ ಎಂದು ನನಗ್ಯಾರೋ ತಿಳಿಸಿದರು. ಅಮರಶಿಲೆಗೆ ಹೋಗಿ ಬಂದೆ ಏನು ?"

"ತಮ್ಮ ಅಪ್ಪಣೆಯನ್ನು ಪಡೆಯದೆ ಅಮರಶಿಲೆಗೆ ಹೋಗುವುದೆಂತು. ತಮಗ್ಯಾರೋ ತಪ್ಪು ಸಮಾಚಾರವನ್ನು ಹೇಳಿರಬೇಕು. ನಾನು ಇಲ್ಲೇ ಇದ್ದೆ."

"ತಪ್ಪು ಸಮಾಚಾರವಲ್ಲ. ಜವಾಬ್ಧಾರಿಯುಳ್ಳ ದೊಡ್ಡ ಮನುಷ್ಯರೊಬ್ಬರು ನನ್ನೊಡನೆ ಫೋನಿನಲ್ಲಿ ಮಾತನಾಡುತ್ತಿರುವಾಗ ಹೇಳಿದರು."

"ಹಾಗಾದರೆ ಆ ದೊಡ್ಡ ಮನುಷ್ಯರು ಶಂಭುವಿನ ಕಡೆಯವರಾಗಿರಬೇಕು."

"ಅನಾವಶ್ಯಕವಾಗಿ ರಾಜಕಾರಣಿಗಳ ಹೆಸರನ್ನು ಯಾಕೆ ಎಳೆಯುತ್ತೀಯ? ನಮಗೇಕೆ ಸರ್ಕಾರಿ ನೌಕರರಿಗೆ ರಾಜಕಾರಣಿಗಳ ಗೊಡವೆ? ನೀನು ಅಮರಶಿಲೆಗೆ ಹೋದ ಸಮಾಚಾರವನ್ನು ಗೃಹಮಂತ್ರಿಗಳೇ ನನಗೆ ಹೇಳಿದರು."

"ರಾಜಕಾರಣಿಗಳ ಗೊಡವೆ ಅವಶ್ಯಕವಾಗಿ ಪರಿಣಮಿಸಿದ್ದರಿಂದ ಈಗ ನಾನು ತಮ್ಮಲಿಗೆ ಬಂದಿದ್ದೇನೆ."

"ಅದೇನು ಸಮಾಚಾರ, ಯತೀಂದ್ರಾ?"

ತಮ್ಮ ಆಶೀರ್ವಾದದಿಂದ ಸೋಮಶೇಖರನನ್ನು ಕೊಲೆ ಮಾಡಿದ ಅಪರಾಧಿ ಗಳನ್ನು ಪತ್ತೆ ಹಚ್ಚಿದ್ದೇನೆ. ಅವರು ಶಂಭುನಾಥನ ರಕ್ಷಣೆಯಲ್ಲಿ ಹಾಲಿ ಅವನ ಮನೆಯಲ್ಲೇ ಇದ್ದಾರೆ. ಕೊಲೆಯ ಹಿನ್ನಲೆಯಲ್ಲಿ ಶಂಭುನಾಥನ ಕೈವಾಡವಿದೆಯೆಂದು ನಾನು ಇದುವರೆಗೆ ಸಂಗ್ರಹಿಸಿದ ಸಮಾಚಾರಗಳಿಂದ ವ್ಯಕ್ತವಾಗುತ್ತದೆ. ಸೋಮಶೇಖರನು ತನ್ನೆದುರು ಚುನಾವಣೆಯಲ್ಲಿ ಸ್ಪರ್ಧಿಸಿದರೆ ತಾನು ಸೋಲುತ್ತೇನೆಂಬ ಭಯದಿಂದ ಶಂಭು ಅವನನ್ನು ಕೊಲ್ಲಿಸಿದ್ದಾನೆ. ಶಂಭುನಾಥನು ಪ್ರಮುಖ ರಾಜಕಾರಣಿ ಯಾಗಿರುವುದರಿಂದ ಈ ವಿಚಾರವನ್ನ ಮೊದಲು ತಮ್ಮ ಕಿವಿಗೆ ಹಾಕಿ, ಆ ನಂತರ ಅವನನ್ನೂ ಅವನ ರಕ್ಷಣೆಯಲ್ಲಿರುವ ಅಪರಾಧಿಗಳನ್ನೂ ಬಂಧಿಸಬೇಕೆಂದಿರುತ್ತೇನೆ."

ಯತೀಂದ್ರನು ಹೇಳಿದ ಮಾತುಗಳನ್ನು ಕೇಳಿ ರವೀಂದ್ರನಾಥರಿಗೆ ಝುಲ್ಲನೆ ಮೈ ಮೇಲೆ ತಣ್ಣೀರನ್ನೆರಚಿದಂತಾಯಿತು. ರವೀಂದ್ರನಾಥರು ಆರು ಅಡಿ ಎತ್ತರದ ಆಕರ್ಷಕ ವ್ಯಕ್ತಿ. ಥಳಥಳಿಸುವ ಕಣ್ಣುಗಳು, ಭೇದಿಸುವ ದೃಷ್ಟಿ, ದಿಟ್ಟ ನೋಟ, ದೊಡ್ಡ ಮೀಸೆ ಇವುಗಳಿಂದ ಕೂಡಿದ್ದ ಅವರನ್ನು ನೋಡಿದ ಕೂಡಲೆ ಕಾನೂನು ಬಾಹಿರ ಕೃತ್ಯಗಳಲ್ಲಿ ತೊಡಗಿರುವ ಜನರು ಗಡಗಡನೆ ನಡುಗುತ್ತಿದ್ದರು. ಅವರ ಕೆಲವು ಸಾಹಸದ ಕಾರ್ಯಗಳಿಗಾಗಿ ರಾಷ್ಟ್ರಾಧ್ಯಕ್ಷರು ಅವರಿಗೆ ಪ್ರಶಸ್ತಿಯನ್ನು ನೀಡಿದ್ದರು.

ಆದರೆ ನಿರ್ಭಯ ಮೂರ್ತಿಯಂತಿದ್ದ ಅವರಿಗೆ ಆಳುವ ಪಕ್ಷದ ಪುಢಾರಿಗಳನ್ನು ಕಂಡರೆ ವಿಪರೀತ ಭಯ. ಆ ಪುಢಾರಿಗಳ ಆಗ್ರಹಕ್ಕೆ ಪಾತ್ರರಾಗಲು ಅವರು ಅಂಜುತ್ತಿದ್ದರು. ಅಲ್ಲದೆ ಶಂಭು ಗೃಹಮಂತ್ರಿಯ ಆಪ್ತ ಸ್ನೇಹಿತನೆಂಬುದನ್ನು ಅವರು ತಿಳಿದಿದ್ದರು. ಈ ಕಾರಣಗಳಿಂದ ರವೀಂದ್ರನಾಥರು ಮಂಕು ಹಿಡಿದವರಂತೆ ಸ್ವಲ್ಪಹೊತ್ತು ಮೌನವಾಗಿ ಕುಳಿತುಬಿಟ್ಟರು. ಸ್ವಲ್ಪಕಾಲದ ತರುವಾಯ, " ಯತೀಂದ್ರಾ, ನೀನು ನನ್ನನ್ನು ಇಂದು ದೊಡ್ಡ ತೊಡಕಿಗೆ ಸಿಕ್ಕಿಸಿರುವೆ," ಎಂದರು

"ಯಾಕೆ ಸ್ವಾಮಿ, ಇದರಲ್ಲಿ ತೊಡಕಿನ ಪ್ರಶ್ನೆ ಏನಿದೆ? ಕಾನೂನನ್ನು ಉಲ್ಲಂಘಿಸಿದವರು ಶಿಕ್ಷಾರ್ಹರು. ಅವರಿಗೆ ಶಿಕ್ಷೆಯಾಗುವಂತೆ ಮಾಡುವುದು ನನ್ನ, ತಮ್ಮ ಮತ್ತು ಸರ್ಕಾರದ ಪವಿತ್ರ ಕರ್ತವ್ಯ."

"ಯತೀಂದ್ರಾ, ನೀನಿನ್ನೂ ಬಿಸಿರಕ್ತದ ಆದರ್ಶ ಭ್ರಮಿತ ಯುವಕ. ಲೋಕಾನುಭವ ಸಾಲದು. ಶಂಭು ಮುಂತಾದ ಪುಢಾರಿಗಳು ಕಾನೂನಿಗೆ ಮೀರಿದವರು. ಕಾನೂನು ಅನ್ವಯಿಸುವವರನ್ನು ರಕ್ಷಿಸಬಹುದು. ಕಾನೂನು ಮೀರಿದವರನ್ನು ಶಿಕ್ಷಿಸುವುದು ಹೇಗೆ?"

"ಸ್ವಾಮಿ, ನನಗೆ ಲೋಕಾನುಭವ ಸಾಲದು. ಆದರೆ ತಾವು ಹೇಳಿದ ಮಾತು ನನಗರ್ಥವಾಗುವುದಿಲ್ಲ. ಕಾನೂನು ಈ ಪುಢಾರಿಗಳಿಗೆ ಅನ್ವಯಿಸುವುದಿಲ್ಲವೆಂದು ಸರ್ಕಾರದವರು ಫರ್ಮಾನ್ ಹೊರಡಿಸಿದ್ದಾರೇನು ? ನಾವು ದೇವರು ಮೆಚ್ಚುವಂತೆ ವರ್ತಿಸಬೇಕಲ್ಲವೇ ?"

"ನಮಗೆ ಈ ಪುಢಾರಿಗಳೇ ದೇವರಪ್ಪಾ. ಅವರು ಮುನಿದರೆ ದೇವರೂ ಕೂಡ ನಮ್ಮನ್ನು ಕಾಪಾಡಲಾರ."

"ಹಾಗಾದರೆ ಈ ರಾಜ್ಯದ ಗತಿ ಏನು ಸ್ವಾಮಿ ?"

"ಗತಿ ಏನು ! ಮೂಕ ಪ್ರಜೆಗಳಿಗೆ ಕಿವುಡು ಸರ್ಕಾರ; ಮೂರ್ಖ ಜನರಿಗೆ ಧೂರ್ತ ಮುಖಂಡರು. ನಾನೂ, ನೀನು ಏನು ತಾನೆ ಮಾಡಲು ಸಾಧ್ಯ."

"ಹಾಗಾದರೆ ನಾನೇನು ಮಾಡಲಿ ?"

"ನಾನು ಈ ದಿನ ಬೇರೊಂದು ಕೆಲಸದ ನಿಮಿತ್ತ ಗೃಹಮಂತ್ರಿಗಳನ್ನು ನೋಡಬೇಕಾಗಿದೆ. ಆಗ ನಿನ್ನ ಸಮಸ್ಯೆಯನ್ನು ಸೂಕ್ಷ್ಮವಾಗಿ ಅವರೊಡನೆ ಚರ್ಚಿಸಿ, ಅವರ ಸಲಹೆಯನ್ನು ಪಡೆಯುತ್ತೇನೆ. ನೀನು ಪುನಃ ಸಾಯಂಕಾಲ ನಾಲ್ಕು ಗಂಟೆಗೆ ನನ್ನನ್ನು ನೋಡು. ಅಲ್ಲಿಯವರೆಗೆ ದುಡುಕಬೇಡ."

* * * *

ಹೊತ್ತಿನಂತೆ ರವೀಂದ್ರನಾಥರು ಗೃಹಮಂತ್ರಿಯ ಕಛೇರಿಗೆ ಹೋಗಿ ಉಳಿದ ವಿಚಾರಗಳಲ್ಲಿ ಮಾತುಕತೆ ನಡೆಸಿದ ನಂತರ ಸೋಮಶೇಖರನ ಕೊಲೆಯ ವಿಚಾರವನ್ನು ಪ್ರಸ್ತಾಪಿಸಿದರು.

"ಮೊಕದ್ದಮೆಯಲ್ಲಿ ತನಿಖೆ ಕ್ರಮ ಎಲ್ಲಿಯವರೆಗೆ ಸಾಗಿದೆ?" ಎಂದು ಗೃಹಮಂತ್ರಿಯು ಪ್ರಶ್ನಿಸಿದನು.

"ತನಿಖೆ ಇಲ್ಲಿಯವರೆಗೆ ಸುಸೂತ್ರವಾಗಿ ಸಾಗಿದೆ. ಆದರೆ ಈ ಮಧ್ಯೆ ಅನಿರೀಕ್ಷಿತ ತೊಡಕೊಂದು ಉದ್ಭವಿಸಿರುವುದರಿಂದ ಮುಂದಿನ ಕ್ರಮಕ್ಕೆ ತಮ್ಮ ಅಪ್ಪಣೆ ಬೇಕಾಗಿದೆ."

"ತನಿಖೆಯ ಬಗ್ಗೆ ನನ್ನ ಅಪ್ಪಣೆ ಯಾಕೆ ಬೇಕು? ಮಂತ್ರಿಯಾದವರು ಮೊಕದ್ದಮೆಗಳ ತನಿಖೆಯಲ್ಲಿ ಕೈ ಹಾಕಬಾರದು."

"ತಾವು ತನಿಖೆಯಲ್ಲಿ ಕೈ ಹಾಕಬೇಕಾಗಿಲ್ಲ. ತನಿಖೆಗೆ ಬಂದ ಆತಂಕವನ್ನು ಹೋಗಲಾಡಿಸಬೇಕು."

"ಅಪರಾಧಿಗಳ ವಿಚಾರದಲ್ಲಿ ಯಾವ ಕುರುಹೂ ಸಿಕ್ಕದೆ ಹೋದ್ದರಿಂದ ಯತೀಂದ್ರನು ನಿರಾಶನಾಗಿ ನಿನ್ನೆ ರಾತ್ರಿಯೇ ಅಮರಶಿಲೆಗೆ ಹೋದನೆಂದು ನನಗೆ ವರದಿ ಬಂದಿದೆ. ಅಪರಾಧಿಗಳ ವಿಚಾರದಲ್ಲಿ ಯಾವ ಕುರುಹೂ ಸಿಕ್ಕದೆ ಇರುವಾಗ ಆತಂಕದ ಪ್ರಶ್ನೆ ಎಲ್ಲಿ ಬಂತು.?"

"ತಮಗೆ ಬಂದ ವರದಿ ಸರಿಯಲ್ಲ. ಯತೀಂದ್ರನು ಇಲ್ಲೇ ಇದ್ದಾನೆ."

"ಆಶ್ಚರ್ಯ ! ನೀವು ಅವನನ್ನು ಇಂದು ನೋಡಿದ್ದೀರಾ ?"

"ಹೌದು, ಈ ದಿನ ಬೆಳಿಗ್ಗೆ ಅವನು ಮನೆಗೆ ಬಂದಿದ್ದನು."

"ಯತೀಂದ್ರನು ಜೀಪಿನಲ್ಲಿ ಅಮರಶಿಲೆಯ ಮಾರ್ಗದಲ್ಲಿ ಹೋಗುತ್ತಿರುವುದನ್ನು ನಿನ್ನೆ ಸಾಯಂಕಾಲ ಕಣ್ಣಾರೆ ಕಂಡವರೊಬ್ಬರು ನನಗೆ ತಿಳಿಸಿದರಲ್ಲಾ."

"ಬಹುಶಃ ಅವರು ಯಾರನ್ನೋ ನೋಡಿ ಯತೀಂದ್ರನೆಂದು ಭ್ರಮಿಸಿರಬೇಕು."

"ಹೋಗಲಿ ಬಿಡಿ. ಈಗ ತನಿಖೆಗೆ ಬಂದಿರುವ ಆತಂಕವೇನು? ಸಾಕಾದಷ್ಟು ರುಜುವಾತು ಸಿಕ್ಕಿದೆಯೇ?"

"ರುಜುವಾತು ಸಿಕ್ಕಿದೆ."

"ಹಾಗಾದರೆ ನನ್ನ ಅಪ್ಪಣೆ ಯಾತಕ್ಕೆ?"

"ಅಪರಾಧಿಗಳು ರಾಜಧಾನಿಯಲ್ಲಿ ಶಂಭುನಾಥರ ಮನೆಯಲ್ಲಿ ಅವರ ರಕ್ಷಣೆಯಲ್ಲಿ ಇದ್ದಾರೆ, ಸೋಮಶೇಖರನ ಕೊಲೆಗೆ ಶಂಭುನಾಥರೇ ಕಾರಣರೆಂದು ಊಹಿಸಲು ತಕ್ಕಷ್ಟು ರುಜುವಾತು ಇದೆ. ಶಂಭುನಾಥರನ್ನೂ ಉಳಿದ ಅಪರಾಧಿಗಳನ್ನೂ ದಸ್ತಗಿರಿ ಮಾಡಬೇಕಾಗಿದೆ. ಶಂಭುನಾಥರು ಆಳುವ ಪಕ್ಷದ ಪ್ರಧಾನ ಕಾರ್ಯದರ್ಶಿಗಳಾಗಿರುವುದ ರಿಂದ ಮುಂದಿನ ಕ್ರಮಕ್ಕೆ ತಮ್ಮ ಅಪ್ಪಣೆ ಬೇಕಾಗಿದೆ."

"ರವೀಂದ್ರನಾಥ್, ನೀವು ಕನಸಿನಲ್ಲಿ ಕಂಡ ವಿಚಾರಗಳನ್ನು ಹೇಳುತ್ತಿದ್ದೀರೋ ಅಥವಾ ನಿಜವನ್ನು ಹೇಳುತ್ತಿದ್ದೀರೋ? ಶಂಭುನಾಥರು ಗೌರವಸ್ಥರು. ನಾನು ಅವರನ್ನು

ಸಂಪೂರ್ಣವಾಗಿ ಬಲ್ಲೆ. ಚುನಾವಣೆಗಳು ಸಮೀಪಿಸುತ್ತಿರುವ ವೇಳೆಯಲ್ಲಿ ಅವರನ್ನು ಕೊಲೆ ಮೊಕದ್ದಮೆಯಲ್ಲಿ ಸಿಕ್ಕಿಸಬೇಕೆಂಬ ದುರುದ್ದೇಶದಿಂದ ಅವರಿಗಾಗದವರು ಯತೀಂದ್ರನೊಡನೆ ಸರೀಕಾಗಿ ಹುಟಾರು ಸಂಗತಿಗಳನ್ನು ಹೆಣೆದಿರುತ್ತಾರೆ."

"ನಾನು ಹೇಳುವುದರಲ್ಲಿ ಸುಳ್ಳೂ ಇಲ್ಲ. ಉತ್ಪ್ರೇಕ್ಷೆಯೂ ಇಲ್ಲ. ಯತೀಂದ್ರನೊಬ್ಬ ನಿಷ್ಠಾವಂತ ಅಧಿಕಾರಿ. ಬಹಳ ಸತ್ಯವಂತ;ಯಾರ ಹಂಗಿಗೂ ಒಳಗಾಗುವವನಲ್ಲ. ನಾನು ತಮ್ಮ ಹಿತ ಚಿಂತಕ. ತಮಗೆ ಕೀರ್ತಿ ಬರಬೇಕೆಂಬುದೇ ನನ್ನ ಆಸೆ. ತಾವು ಅಪ್ಪಣೆ ಕೊಟ್ಟರೆ ತಮ್ಮಲ್ಲಿ ಕೆಲವು ಗುಟ್ಟಿನ ವಿಚಾರಗಳನ್ನು ಅರಿಕೆ ಮಾಡಿಕೊಳ್ಳುತ್ತೇನೆ.

"ನಿಸ್ಸಂಕೋಚವಾಗಿ ಹೇಳಬಹುದು"

"ಸ್ವಾಮಿ, ಶಂಭುನಾಥನ ಚಾರಿತ್ರ್ಯ ಸ್ವಚ್ಛವಾದುದಲ್ಲ. ಅವನ ಇತಿಹಾಸವನ್ನು ನಮ್ಮ ಇಲಾಖೆಯವರು ಸಂಗ್ರಹಿಸಿರುತ್ತಾರೆ. ಅಂತಹ ವ್ಯಕ್ತಿಯನ್ನು ಕಾಂಗ್ರೆಸ್ಸಿಗೆ ಸೇರಿಸಬಾರದಾಗಿತ್ತು. ಸೋಮಶೇಖರನು ತನಗೆ ಪ್ರತಿಸ್ಪರ್ಧಿಯಾಗಿ ಚುನಾವಣೆಯಲ್ಲಿ ನಿಂತರೆ ತಾನು ಸೋಲುತ್ತೇನೆಂಬ ಭಯದಿಂದ ಅವನಿಲ್ಲದಂತೆ ಮಾಡಿದ್ದಾನೆ. ಇದರಲ್ಲಿ ಸಂಶಯವಿಲ್ಲ. ತಮ್ಮ ಕೀರ್ತಿಗೆ ಕಳಂಕ ಬಾರದ ರೀತಿಯಲ್ಲಿ ವರ್ತಿಸಬೇಕೆಂದು ಪ್ರಾರ್ಥಿಸುತ್ತೇನೆ."

"ರವೀಂದ್ರನಾಥ್, ನೀವು ನನ್ನ ಹಿತಚಿಂತಕರೆಂಬುದರಲ್ಲಿ ಸಂಶಯವಿಲ್ಲ. ಆದರೆ ನೀವು ಹೇಳುವುದು ನಿಜವಲ್ಲ. ಚುನಾವಣೆಯ ದೃಷ್ಟಿಯಿಂದ ಪ್ರತಾಪರಾಜನ ಕಡೆಯವರು ಶಂಭುನಾಥರ ಮೇಲೆ ಸುಳ್ಳು ಆರೋಪಗಳನ್ನು ಸೃಷ್ಟಿಸಲು ತೊಡಗಿದ್ದಾರೆ. ಕೊಲೆಯ ವಿಚಾರದಲ್ಲಿ ನಾನೂ ಸಹ ಸಾಕಷ್ಟು ಮಾಹಿತಿಯನ್ನು ಸಂಗ್ರಹಿಸಿದ್ದೇನೆ. ಸೋಮಶೇಖರನು ತನ್ನ ತಂಗಿಯ ಮನೆಗೆ ಹೋಗುತ್ತಿದ್ದಾಗ ಹಾದಿಯಲ್ಲಿ ಆಕಸ್ಮಿಕವಾಗಿ ಮೋಟಾರು ವಾಹನದ ಚಕ್ರಕ್ಕೆ ಸಿಕ್ಕಿ ಸಾವಿಗೀಡಾದನೆಂದು ಸ್ವರ್ಣಗಿರಿ ಮತ್ತು ಅಮರಶಿಲೆ ತಾಲ್ಲೂಕುಗಳ ಮುಖಂಡರು ನನಗೆ ತಿಳಿಸಿದ್ದಾರೆ."

"ಯತೀಂದ್ರನು ಕೊಲೆಯಾದ ಸ್ಥಳಕ್ಕೆ ಹೋಗುವ ಮುನ್ನವೇ ಸ್ವರ್ಣಗಿರಿಯ ಪೋಲಿಸ್ ಇನ್‌ಸ್ಪೆಕ್ಟರೂ, ಡಾಕ್ಟರೂ ಅಲ್ಲಿಗೆ ಹೋಗಿ, ಮರಣವು ಆಕಸ್ಮಿಕವಾಗಿ ಸಂಭವಿಸಿದ್ದೆಂದು ಮಹಜರ್ ತಯಾರು ಮಾಡಿದ್ದರು. ನಿಮ್ಮ ಯತೀಂದ್ರನು ಆ ಮಹಜರನ್ನು ಬಲತ್ಕಾರವಾಗಿ ಕಸಿದುಕೊಂಡು, ತನಿಖೆಯನ್ನು ಸ್ವತಃ ತಾನೇ ನಡೆಸಲಾರಂಭಿಸಿದ್ದನು. ಸ್ವರ್ಣಗಿರಿಯ ಪೋಲಿಸರ ದೃಷ್ಟಿಯಲ್ಲಿ ಆಕಸ್ಮಿಕವೆನಿಸಿದ್ದ ಮರಣ, ಯತೀಂದ್ರನ ದೃಷ್ಟಿಯಲ್ಲಿ ಕೊಲೆಯಾಗಲು ಕಾರಣವೇನು? ದಯವಿಟ್ಟು ನೀವೇ ಊಹಿಸಿ. ಸೋಮಶೇಖರನ ಹೆಣದ ಮೇಲೆ ಮೋಟಾರು ವಾಹನದ ಚಕ್ರಗಳು ಹರಿದ ಗುರುತು ಸಹ ಇತ್ತೆಂದು ನನಗೆ ಗೊತ್ತಾಗಿದೆ. ನಾನೇನೂ ಸುಮ್ಮನೆ ಕುಳಿತಿರಲಿಲ್ಲ. ನಿಜವನ್ನು ಕಂಡು ಹಿಡಿಯಲು ಸರ್ವಪ್ರಯತ್ನವನ್ನೂ ಮಾಡಿದ್ದೇನೆ. ದಯವಿಟ್ಟು ಶಂಭುನಾಥರ ಹೆಸರನ್ನು ನೀವು ಇನ್ನೆಲೂ ಎತ್ತಬೇಡಿ. ಗೌರವಸ್ಥನೊಬ್ಬನ ಹೆಸರಿಗೆ ಮಸಿಬಳಿಯುವ ಕಾರ್ಯಕ್ಕೆ ನೀವು ಬೆಂಬಲ ನೀಡಬಾರದು."

ನನಗೆ ಬಂದ ವರದಿಯ ಪ್ರಕಾರ ಸೋಮಶೇಖರನನ್ನು ಶಂಭುನಾಥರ ಕಡೆಯವರು ಕೊಲೆ ಮಾಡಿ, ಅವನ ಮರಣ ಆಕಸ್ಮಿಕವಾಗಿ ಸಂಭವಿಸಿದ್ದೆಂದು ತೋರ್ಪಡಿಸುವುದಕ್ಕಾಗಿ ಹೆಣದ ಮೇಲೆ ಜೀಪನ್ನು ಓಡಾಡಿಸಿದ್ದಾರೆ."

"ನಿಮ್ಮ ಮೊಂಡುವಾದ ನನಗರ್ಥವಾಗುವುದಿಲ್ಲ. ನೀವು ಸರ್ಕಾರಿ ಅಧಿಕಾರಿ. ನಿಮಗೆ ರಾಜಕಾರಣ ಬೇಡ."

"ಹಾಗಾದರೆ ಹೊರಡಲು ನನಗೆ ಅಪ್ಪಣೆ ದಯಪಾಲಿಸಿ.'

"ಹೊರಡಬಹುದು, ಆದರೆ ಶಂಭುನಾಥರ ತಂಟೆಗೆ ಹೋಗಬಾರದು."

* * * *

ನಾಲ್ಕು ಗಂಟೆಗೆ ಸರಿಯಾಗಿ ಯತೀಂದ್ರನು ರವೀಂದ್ರನಾಥರ ಆಫೀಸಿಗೆ ಹೋದನು. ರವೀಂದ್ರನಾಥರು ಬಹಳ ದುಗುಡಕ್ಕೆ ಒಳಗಾದವರಂತೆ ಕಾಣುತ್ತಿದ್ದರು. ಅವರು ಮ್ಲಾನವದನರಾಗಿ ಕುಳಿತ್ತಿದ್ದರು. ಯತೀಂದ್ರನು ಅವರಿಗೆ ನಮಸ್ಕರಿಸಿ, "ತಾವು ಗೃಹಮಂತ್ರಿಗಳನ್ನು ನೋಡಿದ್ದಿರಾ? ಅವರೇನು ಹೇಳಿದರು?" ಎಂದು ಪ್ರಶ್ನಿಸಿದನು.

"ಯತೀಂದ್ರಾ, ನಾನೇನು ಹೇಳಲಿ? ರಾಜಲಕ್ಷ್ಮಿಯು ಹೀನ ಜನರ ಕೈಯಲ್ಲಿ ಸೇರಿ ಹೋಗಿದ್ದಾಳೆ. ಇಂತಹ ಜನರ ಕೈಕೆಳಗೆ ನೌಕರಿ ಮಾಡುವುದಕ್ಕಿಂತ ಆತ್ಮಗೌರವದಿಂದ ದನ ಕಾಯುವುದು ಮೇಲು. ಸರ್ಕಾರಿ ನೌಕರಿಯಲ್ಲಿ ಈಗಾಗಲೇ ಅರ್ಧ ಆಯಸ್ಸನ್ನು ಕಳೆದಿದ್ದೇನೆ. ನಾನು ಈ ಇಳಿ ವಯಸ್ಸಿನಲ್ಲಿ ಬೇರಾವ ಉದ್ಯೋಗವನ್ನು ಮಾಡಲಾರೆ. ನನಗೆ ಬೇರಾವುದಾದರೂ ವರಮಾನ ಇದ್ದಿದ್ದರೆ ನನ್ನ ನೌಕರಿಗೆ ಇಂದೇ ರಾಜೀನಾಮೆ ನೀಡುತ್ತಿದ್ದೆ. ಪೋಲಿಸ್ ಇಲಾಖೆಯ ಮುಖ್ಯಾಧಿಕಾರಿಯಾಗಿ ಕೊಲೆಪಾತಕಿಗಳನ್ನು ಶಿಕ್ಷೆಗೆ ಗುರಿಪಡಿಸಲು ಅಸಮರ್ಥನಾಗಿದ್ದೇನೆ."

"ಏನಾಯ್ತು ಸ್ವಾಮಿ ?"

"ಏನಾಗುತ್ತದೆ ! ಬೆಳಿಗ್ಗೆ ಗೃಹಮಂತ್ರಿಗಳನ್ನು ನೋಡಿದ್ದೆ. ಅವರಲ್ಲಿ ನಿಜ ಸಂಗತಿಗಳನ್ನು ಅರಿಕೆ ಮಾಡಿಕೊಂಡೆ. ಆದರೆ ಅವರು ನಾನು ಹೇಳಿದ್ದೆಲ್ಲಾ ಸುಳ್ಳೆಂದು ಸಮರ್ಥಿಸಿದರು. ನಾನು ತೆಪ್ಪಗೆ ಹಿಂದಿರುಗಿ ಬಂದೆ. ಈಗ ತಾನೆ, ನೀನು ಬರುವುದಕ್ಕೆ ಕಾಲು ಗಂಟೆಯ ಹಿಂದೆ, ಗೃಹಖಾತೆಯ ಕಾರ್ಯದರ್ಶಿಗಳಿಂದ ಒಂದು ಸರ್ಕಾರಿ ಆಜ್ಞೆ ಬಂತು. ಅದನ್ನು ನೋಡಿ ನಾನು ಹತಾಶನಾದೆ. ನಿನ್ನನ್ನು ರಾಜಧಾನಿ ಪೊಲೀಸ್ ಟ್ರೈನಿಂಗ್ ಕಾಲೇಜಿನ ಪ್ರಿನ್ಸಿಪಾಲ್ ಆಗಿ ಸರ್ಕಾರದವರು ನೇಮಕಮಾಡಿದ್ದಾರೆ. ಜೊತೆಗೆ ಅಮರಶಿಲೆಯ ಪೊಲೀಸ್ ಇನ್‌ಸ್ಪೆಕ್ಟರನ್ನು ಪದ್ಮಗಿರಿಗೆ ವರ್ಗಾಹಿಸಿ, ಪದ್ಮಗಿರಿಯ ಪೊಲೀಸ್ ಇನ್‌ಸ್ಪೆಕ್ಟರನ್ನು ಅಮರಶಿಲೆಗೆ ವರ್ಗಾಹಿಸಿದ್ದಾರೆ. ಸೋಮಶೇಖರನ ಕೊಲೆ ಮೊಕದ್ದಮೆಯ ತನಿಖೆಯನ್ನು ಅಮರಶಿಲೆಯ ಪೊಲೀಸ್ ಇನ್‌ಸ್ಪೆಕ್ಟರು ನಡೆಸಬೇಕೆಂದು ಆಜ್ಞೆಯಾಗಿದೆ."

"ನಾನ್ಯಾವ ತಪ್ಪನ್ನು ಮಾಡಿದ್ದೇನೆಂದು ಸರ್ಕಾರದವರು ಈ ರೀತಿ ಆಜ್ಞೆ ಮಾಡಿದ್ದಾರೆ ಸ್ವಾಮಿ."

"ನೀನು ನಿಸ್ಪೃಹನಾಗಿರುವುದೇ ದೊಡ್ಡ ತಪ್ಪು. ಯತೀಂದ್ರಾ, ಇಂದಿನ ಕೆಲವು ರಾಜಕಾರಣಿಗಳಿಗೆ ನಿಸ್ಪೃಹತೆ ಯಾಕೆ ಬೇಕು? ಸಾಲದುದಕ್ಕೆ ನೀನು ಅವರ ಜಾತಿಯವನಲ್ಲ."

"ಹಾಗಾದರೆ ನಾನೇನು ಮಾಡಲಿ?"

"ನಿನಗೆ ನಿನ್ನ ನೌಕರಿಯ ಮೇಲೆ ಆಸೆಯಿದ್ದರೆ, ತೆಪ್ಪಗೆ ಸರ್ಕಾರಿ ಆಜ್ಞೆಯಂತೆ ನಡೆದುಕೊಳ್ಳುವವನಾಗು. ಇಂದಿನ ಕಾಲದಲ್ಲಿ ದಿಟ್ಟನಾಗಿರುವುದಕ್ಕಿಂತ ದೀನನಾಗಿರುವುದೇ ಮೇಲು."

* * * *

ಅಮರಶಿಲೆಗೆ ಹೊಸದಾಗಿ ಬಂದಿದ್ದ ಪೊಲೀಸ್ ಇನ್‌ಸ್ಪೆಕ್ಟರು ದಾಮೋದರನ ದೂರದ ಬಂಧು. ಆ ಕಾರಣದಿಂದಲೇ ಗೃಹಮಂತ್ರಿಯು ಶಂಭುವಿನ ಸೂಚನೆ ಮೇರೆಗೆ ಅವನನ್ನು ಪದ್ಮಗಿರಿಯಿಂದ ಅಮರಶಿಲೆಗೆ ವರ್ಗಮಾಡಿದ್ದನು. ಅಮರಶಿಲೆಗೆ ಹೋಗಿ ಹತ್ತು ದಿನಗಳು ಕಳೆಯುವುದರೊಳಗಾಗಿ, ಹೊಸ ಇನ್‌ಸ್ಪೆಕ್ಟರು ಸೋಮಶೇಖರನ ಕೊಲೆ ಮೊಕದ್ದಮೆಯಲ್ಲಿ ತನಿಖೆಯ ಶಾಸ್ತ್ರವನ್ನು ಮುಗಿಸಿ, ಮರಣವು ಆಕಸ್ಮಿಕವಾಗಿ ಮೋಟಾರು ಅಪಘಾತದಿಂದ ಆಗಿದ್ದೆಂದು ಕೋರ್ಟಿಗೆ ಕಳುಹಿಸಿ, ಕೊಲೆ ಮೊಕದ್ದಮೆಯನ್ನು ಕೊನೆ ಮಾಡಿದನು.

ಕೊಲೆ ಮೊಕದ್ದಮೆ ಕೊನೆಗಂಡಿದ್ದರೂ, ಕಮಲಶಿಲೆ ತಾಲ್ಲೂಕಿನ ಜನರ ಕೋಪೋದ್ರೇಕಗಳು ಕೊನೆಗಂಡಿರಲಿಲ್ಲ. ಸೋಮಶೇಖರನ ಮರಣವು ಆಕಸ್ಮಿಕವಾಗಿ ಸಂಭವಿಸಿದ್ದೆಂದು ಇನ್‌ಸ್ಪೆಕ್ಟರು ತೀರ್ಮಾನ ಮಾಡಿದ್ದರೆ, ಮರಣಕ್ಕೆ ಶಂಭುವೇ ಕಾರಣನೆಂದು ಜನರು ತೀರ್ಮಾನಿಸಿದ್ದರು. ಶಂಭುವಿನ ಪ್ರೇರಣೆಯಿಂದಲೇ ಯತೀಂದ್ರನ ಮತ್ತು ಅಮರಶಿಲೆಯ ಪೋಲಿಸ್ ಇನ್‌ಸ್ಪೆಕ್ಟರ ವರ್ಗವಾಯಿತೆಂಬುದೂ, ಹೊಸ ಇನ್‌ಸ್ಪೆಕ್ಟರು ದಾಮೋದರನ ಕೈ ಗೊಂಬೆ ಎಂಬುದೂ ಜನತೆಗೆ ಜನಜನಿತವಾಗಿ ಗೊತ್ತಾಗಿತ್ತು.

ಸೋಮಶೇಖರನ ದುರ್ಮರಣವು ದುರ್ಗಾದಾಸರನ್ನೂ, ಅವರ ಹಿಂಬಾಲಕರನ್ನೂ ದುಃಖ ಸಾಗರದಲ್ಲಿ ಮುಳುಗಿಸಿತ್ತು. ಪ್ರತಾಪರಾಜನು ತನ್ನ ಗೆಳೆಯನ ಮರಣದಿಂದ ಅತ್ಯಂತ ದುಃಖಿತನಾಗಿದ್ದನು. ಸೋಮಶೇಖರನನ್ನು ಶಂಭುವೇ ಕೊಲ್ಲಿಸಿದನೆಂದು ರಾಜ್ಯದ ಎಲ್ಲಾ ಕಡೆಗಳಲ್ಲೂ ಗುಲ್ಲು ಹಬ್ಬಿತ್ತು. ಆದರೆ ಶಂಭು ಮಾತ್ರ ಜನರಾಡುವ ಮಾತಿನಿಂದಾಗಲೀ, ತಾನು ಮಾಡಿದ ಪಾಪದಿಂದಾಗಲೀ ಎಳ್ಳಷ್ಟೂ ಎದೆಗುಂದಿರಲಿಲ್ಲ. ಅವನು ಪಶ್ಚಾತ್ತಾಪ ಪಡುವ ಬದಲು ಅಹಂಕಾರದಿಂದ ಮೆರೆಯುತ್ತಿದ್ದನು. ಚುನಾವಣೆಯಲ್ಲಿ ತನ್ನೆದುರು ಯಾರೂ ನಿಲ್ಲಲಾರರೆಂದೂ, ಅವಿರೋಧವಾಗಿ ಆಯ್ಕೆಯಾಗಿ ಮಂತ್ರಿಯಾಗುತ್ತೇನೆಂದೂ, ಮನಸ್ಸಿನಲ್ಲೇ ಮಂಡಿಗೆಯನ್ನು ಸವಿಯುತ್ತಿದ್ದನು. ಸೋಮಶೇಖರನ ಮರಣದಿಂದ ತನ್ನ ರಾಜಕೀಯ ವಿರೋಧಿಗಳು ತಲ್ಲಣಿಸಿ ಹೋಗಿದ್ದಾರೆಂದು ಅವನು ಭಾವಿಸಿದ್ದನು.

* * * *

# ೮. ಚುನಾವಣೆ

ಚುನಾವಣೆಗೆ ರಾಜ್ಯದಲ್ಲಿ ನೂರಾರು ಜನರು ತಮ್ಮ ಉಮೇದುವಾರಿಕೆಯ ಅರ್ಜಿಗಳನ್ನು ಸಲ್ಲಿಸಿದ್ದರು. ದುರ್ಗಾದಾಸರೂ, ಅವರ ಕಡೆಯವರೂ, ಅವರವರಿಗೆ ಗೊತ್ತಾಗಿದ್ದ ಕ್ಷೇತ್ರಗಳಿಂದ ಚುನಾವಣೆಗೆ ಸ್ಪರ್ಧಿಸಿದ್ದರು. ಅಂತೆಯೇ ಶಂಭು ದಾಮೋದರರೂ, ಅವರ ಅನುಯಾಯಿಗಳೂ ಅವರವರ ಕ್ಷೇತ್ರಗಳಿಂದ ಸ್ಪರ್ಧಿಸಿದ್ದರು.

ಪ್ರತಾಪರಾಜನು ಮೊದಲು ದಾಮೋದರನ ವಿರುದ್ಧ ಸ್ಪರ್ಧಿಸುವುದಾಗಿ ಬಹಿರಂಗ ಹೇಳಿಕೆಯನ್ನು ನೀಡಿದ್ದನು. ಆದರೆ ಸೋಮಶೇಖರನ ಕೊಲೆಯಾದ ನಂತರ, ತನ್ನ ಮೊದಲಿನ ತೀರ್ಮಾನವನ್ನು ಬದಲಾಯಿಸಿ, ತನ್ನ ಗೆಳೆಯನನ್ನು ಕೊಲೆ ಮಾಡಿದ್ದ ಶಂಭುವಿನ ವಿರುದ್ಧ ತಾನೇ ಸ್ಪರ್ಧಿಸಬೇಕೆಂದು ನಿರ್ಧರಿಸಿ, ಕಮಲಶಿಲೆ ಕ್ಷೇತ್ರದಿಂದ ಸ್ವತಂತ್ರ ಉಮೇದುವಾರನಾಗಿ ನಿಂತಿದ್ದನು. ದುರ್ಗಾದಾಸರ ವಿರುದ್ಧ ಭಗವಾನ್ ದಾಸನು ಸ್ವತಂತ್ರ ಉಮೇದುವಾರನಾಗಿ ನಿಂತಿದ್ದನು. ದಾಮೋದರನ ಎದುರು ಪ್ರತಾಪರಾಜನ ಶಿಷ್ಯ ಭಕ್ತಾರಾಮ್ ಎನ್ನುವವನು ಸ್ಪರ್ಧಿಸಿದ್ದನು.

ಸಾರ್ವತ್ರಿಕ ಚುನಾವಣೆಗಳು ನಡೆಯಲು ಕೇವಲ ಇಪ್ಪತ್ತು ದಿನಗಳ ಅವಧಿಯಿತ್ತು. ರಾಜ್ಯದ ಆದ್ಯಂತ ಬಿರುಸಿನ ಚುನಾವಣಾ ಪ್ರಚಾರ ನಡೆದಿತ್ತು. ಪ್ರಚಾರದ ಜೊತೆಗೆ ಅಪಪ್ರಚಾರವೂ, ಆರೋಪಗಳ ಜೊತೆಗೆ ಪ್ರತ್ಯಾರೋಪಗಳೂ ನಡೆದಿದ್ದುವು. ಸಣ್ಣ ಪುಟ್ಟ ಪತ್ರಿಕೆಗಳು ಎಲ್ಲಾ ಚುನಾವಣಾ ಕ್ಷೇತ್ರಗಳಲ್ಲೂ ತೂರಾಡುತ್ತಿದ್ದುವು. ಕೆಲವು ಪತ್ರಿಕೆಗಳು ಕೆಲವರ ಪರವಾಗಿ ಪ್ರಚಾರ ಮಾಡುತ್ತಿದ್ದರೆ, ಮತ್ತೆ ಕೆಲವು ಕೆಲವರ ವಿರುದ್ಧ ಅಪಪ್ರಚಾರದಲ್ಲಿ ತೊಡಗಿದ್ದುವು. ಸ್ಪರ್ಧಿಗಳೂ, ಅವರ ಬೆಂಬಲಿಗರೂ ಮತದಾರರ ಮನವನ್ನು ಒಲಿಸಿಕೊಳ್ಳಲು ನಾನಾ ವಿಧವಾದ ತಂತ್ರ ಕುತಂತ್ರಗಳನ್ನು ಹೂಡಿದ್ದರು.

ದುರ್ಗಾದಾಸರ ಚುನಾವಣಾ ಕ್ಷೇತ್ರವು ಕುರುಕ್ಷೇತ್ರವೇ ಆಗಿತ್ತು. ಶಂಭು ದಾಮೋದರರು ದುರ್ಗಾದಾಸರನ್ನು ಸೋಲಿಸಲು ತಮ್ಮ ಸರ್ವ ಶಕ್ತಿಯನ್ನೂ ಉಪಯೋಗಿಸಿದ್ದರು. ಭಗವಾನ್‌ದಾಸನಿಗೆ ನೂರಾರು ವಾಹನಗಳನ್ನೂ, ಇತರ ಸಾಧನ ಸೌಕರ್ಯಗಳನ್ನೂ ಗುಪ್ತವಾಗಿ ಒದಗಿಸಿದ್ದರು. ಜೊತೆಗೆ ಇಪ್ಪತ್ತು ಸಾವಿರ ರೂಪಾಯಿಗಳನ್ನೂ ಸಹ ಅವನಿಗೆ ಕೊಟ್ಟಿದ್ದರು. ದುರ್ಗಾದಾಸರ ಪರವಾಗಿ ಕೆಲಸ ಮಾಡುವುದಕ್ಕೆಂದು, ತೋರುಗಾಣಿಕೆಗೆ ತಮ್ಮ ಗುಂಪಿನ ನೂರಾರು ಕಾಂಗ್ರೆಸ್ ಕೆಲಸಗಾರರನ್ನು ನಿಂಬೂರು ಕ್ಷೇತ್ರಕ್ಕೆ ಕಳುಹಿಸಿದ್ದರು. ಆ ಕಾರ್ಯಕರ್ತರು ಬಹಿರಂಗವಾಗಿ ದುರ್ಗಾದಾಸರ ಪರವಾಗಿ ಕೆಲಸ ಮಾಡುವವರಂತೆ ನಟಿಸುತ್ತಿದ್ದರೂ, ಅಂತರಂಗದಲ್ಲಿ ಭಗವಾನ್‌ದಾಸನ ಪರವಾಗಿ ಕೆಲಸ ಮಾಡುತ್ತಿದ್ದರು.

ದುರ್ಗಾದಾಸರ ಅವಹೇಳನಕ್ಕಾಗಿ ಶಂಭು ಅಲ್ಲಲ್ಲಿ ಗೂಂಡಾ ಜನರನ್ನು ಎತ್ತಿ ಕಟ್ಟಿದ್ದನು. ದಾಸರನ್ನು ಬಯ್ಯುವುದಕ್ಕಾಗಿಯೇ ಕೆಲವರನ್ನು ದಿನವೊಂದಕ್ಕೆ ಐವತ್ತು ರೂಪಾಯಿಗಳ ಸಂಬಳವನ್ನು ಗೊತ್ತು ಮಾಡಿ ನೇಮಕ ಮಾಡಿದ್ದನು. ಚುನಾವಣೆಯ ಕರ್ತವ್ಯ ನಿರ್ವಹಣೆಗಾಗಿ ನೇಮಕ ಮಾಡಲ್ಪಟ್ಟಿದ್ದ ಕೆಲವರು ಸಣ್ಣ ಪುಟ್ಟ ಅಧಿಕಾರಿಗಳನ್ನೂ ಸಹ ಲಂಚದಿಂದ ತನ್ನ ವಶಪಡಿಸಿಕೊಂಡಿದ್ದನು. ಶಂಭುವಿನ ಆಪ್ತಮಿತ್ರನೊಬ್ಬನು ನಿಂಬೂರಿನಲ್ಲಿ "ಚಿತ್ರ ವಿಚಿತ್ರ" ವೆಂಬ ಆರು ಕಾಸಿನ ದಿನಪತ್ರಿಕೆಯನ್ನು ಹೊರಡಿಸುತ್ತಿದ್ದನು. ಪ್ರತಿ ದಿನವೂ ಆ ಪತ್ರಿಕೆಯಲ್ಲಿ ದುರ್ಗಾದಾಸರ ಮೇಲೆ ವಿವಿಧ ರೀತಿಯ ಸುಳ್ಳು ಆಪಾದನೆಗಳನ್ನು ಹೊರಿಸಿ, ಅದರ ಸಾವಿರಾರು ಪ್ರತಿಗಳನ್ನು ಚುನಾವಣಾ ಕ್ಷೇತ್ರದ ಮೂಲೆ ಮೂಲೆಗಳಿಗೂ ಖಚಿತವಾಗಿ ಹಂಚುವ ವ್ಯವಸ್ಥೆ ಮಾಡಿದ್ದನು. ಆ ಪತ್ರಿಕೆಯ ಜೊತೆಗೆ ದಾಸರ ನಿಂದೆಗಾಗಿ ಆಗ ತಾನೆ ಹುಟ್ಟಿದ್ದ ಕೆಲವು ಪುಡಿ ಪತ್ರಿಕೆಗಳ ಹಂಚುವಿಕೆಯೂ ಸಾರೋದ್ಧಾರವಾಗಿ ನಡೆದಿತ್ತು. ನಿಂಬೂರು ಕ್ಷೇತ್ರದಲ್ಲಿ ವೃತ್ರಪತ್ರಿಕೆಗಳನ್ನು ಹಂಚುವುದಕ್ಕಾಗಿಯೇ ಶಂಭು ಒಂದು ಜೀಪನ್ನು ಮೀಸಲಾಗಿಟ್ಟಿದ್ದನು.

ಭಗವಾನ್‌ದಾಸನ ಕಡೆಯ ವಾಹನ ಸಮೂಹವನ್ನು, ಅವನ ಪರವಾಗಿ ಪ್ರಚಾರಕ್ಕಾಗಿ ಹೊರಡುತ್ತಿದ್ದ ಜನರ ತಂಡವನ್ನೂ, ಆ ಜನರು ಮಾಡುತ್ತಿದ್ದ ಆರ್ಭಟಗಳನ್ನೂ, ನೋಡಿದವರಿಗೆ ದುರ್ಗಾದಾಸರು ಚುನಾವಣೆಯಲ್ಲಿ ಗೆಲ್ಲುವುದು ಅಸಂಭವವೆಂದು ತೋರುತ್ತಿತ್ತು. ಭಗವಾನ್‌ದಾಸನ ಕಡೆಯವರು ಅಪಪ್ರಚಾರ, ಅವಹೇಳನಗಳ ಜೊತೆಗೆ ಹಣ, ಹೆಂಡ, ಜಾತಿ, ದಾಕ್ಷಿಣ್ಯ, ಭಯೋತ್ಪಾದನೆ ಮುಂತಾದವುಗಳಿಂದ ಜನರನ್ನು ತಮ್ಮ ಕಡೆಗೆ ಎಳೆಯಲು ಪ್ರಯತ್ನಿಸುತ್ತಿದ್ದರು. ದುರ್ಗಾದಾಸರು ಚುನಾವಣೆಗಾಗಿ ಸಾಲ ಮಾಡಿದ್ದರೂ, ಅವರ ಅಕ್ರಮ ಸಂಪಾದನೆಯಿಂದ ಕೂಡಿಟ್ಟಿದ್ದ ಹಣವನ್ನು ಚೆಲ್ಲಿ ಓಟನ್ನು ಪಡೆಯುವ ಪ್ರಯತ್ನದಲ್ಲಿ ತೊಡಗಿದ್ದಾರೆಂದು ಶಂಭು ಅಲ್ಲಲ್ಲಿ ಪಿಸುಮಾತಿನ ಅಪಪ್ರಚಾರವನ್ನು ಕೈಗೊಂಡಿದ್ದನು.

ಕಮಲಶಿಲೆ ಕ್ಷೇತ್ರದಲ್ಲಿ ಶಂಭುವಿಗೂ, ಪ್ರತಾಪರಾಜನಿಗೂ ನೇರವಾದ ಹೋರಾಟ ನಡೆದಿತ್ತು. ಪ್ರತಾಪನು ವೀರಕೇಸರಿಯಂತೆ ಪ್ರಚಾರದಲ್ಲಿ ತೊಡಗಿದ್ದನು. ಶಂಭುವು ಸುಳ್ಳು ಮೋಸಗಳಿಂದಲೂ, ಹಣ ಹೆಂಡಗಳಿಂದ ಮತದಾರರನ್ನು ಒಲಿಸಿಕೊಳ್ಳಲು ಹೆಣಗಾಡುತ್ತಿದ್ದನು. ಪ್ರತಾಪರಾಜನ ವಿರುದ್ಧ ಅಪಪ್ರಚಾರದ ಹೊಳೆಯನ್ನೇ ಹರಿಸಿದ್ದನು. ಕೆಲವು ಕಡೆಗಳಲ್ಲಿ ಪ್ರತಾಪನ ಕಡೆಯವರು ಏರ್ಪಡಿಸುತ್ತಿದ್ದ ಪ್ರಚಾರ ಸಭೆಗಳೂ ಕೂಡ ನಡೆಯದಂತೆ ತನ್ನ ಕಡೆಯ ಗೂಂಡಾಗಳಿಂದ ಗೊಂದಲವನ್ನೆಬ್ಬಿಸುತ್ತಿದ್ದನು. ಆ ಸಭೆಗಳ ನಡುವೆ ಕಲ್ಲು ಮತ್ತು ಪಾದರಕ್ಷೆಗಳನ್ನು ಎಸೆಯುವಂತೆ ಮಾಡುತ್ತಿದ್ದನು. ಪ್ರತಾಪನ ಚುನಾವಣಾ ಪ್ರಣಾಳಿಕೆಗಳನ್ನು ಹಂಚದಂತೆ ಅಡ್ಡಿ ಆತಂಕಗಳನ್ನು ತಂದೊಡ್ಡುತ್ತಿದ್ದನು. ಪ್ರತಾಪನ ಕಡೆಯವರು ಅಂಟಿಸುತ್ತಿದ್ದ ಪ್ರಣಾಳಿಕೆಗಳನ್ನು ಕಿತ್ತೊಗೆಯುವುದಕ್ಕಾಗಿಯೇ ಒಂದು ತುಂಟರ ತಂಡವನ್ನು ಏರ್ಪಡಿಸಿದ್ದನು.

ದಾಮೋದರನು ಮುಖ್ಯಮಂತ್ರಿಯಾಗುವುದೂ, ಶಂಭು ಮಂತ್ರಿಯಾಗುವುದೂ, ಶತಸಿದ್ಧವೆಂದು ಶಂಭುವಿನ ಭಕ್ತರು ಬಹಿರಂಗವಾಗಿ ಸಾರುತ್ತಿದ್ದರು. ಮತದಾರರಿಗೆ ಅವರವರ ಯೋಗ್ಯತೆಗೆ ಅನುಸಾರವಾಗಿ ಆಸೆಗಳನ್ನು ಆ ಭಕ್ತರು ತೋರಿಸುತ್ತಿದ್ದರು. ಶಂಭು ಅಧಿಕಾರಕ್ಕೆ ಬಂದಾಗ ಅವರ ಅಭೀಷ್ಟಗಳನ್ನು ಈಡೇರಿಸಿಕೊಡುವುದಾಗಿ ಜನರಿಗೆ ಭರವಸೆ ಹೇಳುತ್ತಿದ್ದರು. ಆಸೆಗೆ ಮನಸೋಲದಿದ್ದವರಿಗೆ, ಶಂಭು ಮಂತ್ರಿ ಯಾದಾಗ ಒಂದು ಕೈ ತೋರಿಸುವುದಾಗಿ ಬೆದರಿಸುತ್ತಿದ್ದರು. ಒಮ್ಮೊಮ್ಮೆ ಪ್ರತಾಪರಾಜನೂ ಅವನ ಕಡೆಯವರೂ ಹೋಗಬೇಕಾಗಿದ್ದ ಮಾರ್ಗಗಳ ಮಧ್ಯೆ ಬಂಡೆಗಳನ್ನೂ, ಮರಗಳನ್ನು ಉರುಳಿಸುತ್ತಿದ್ದರು. ಪ್ರತಾಪನ ಕಡೆಯ ಮೋಟಾರು ವಾಹನಗಳ ಚಕ್ರಗಳ ಟೈರುಗಳಿಗೆ ಮೊಳೆಗಳನ್ನು ಹೊಡೆಯಿಸಿ, ಆ ವಾಹನಗಳು ನಿಂತಲ್ಲಿಯೇ ನಿಲ್ಲುವಂತೆ ಮಾಡುತ್ತಿದ್ದರು. ಇಷ್ಟೆಲ್ಲಾ ಅಡೆ ತಡೆಗಳಿದ್ದರೂ ಪ್ರತಾಪನ ಚುನಾವಣಾ ಪ್ರಚಾರ ಸ್ವಚ್ಛವಾಗಿ ಕ್ರಮಬದ್ಧವಾಗಿ ನಡೆದಿತ್ತು. ಅವನು ಹೋದೆಡೆಗಳಲ್ಲೆಲ್ಲಾ ಜನರು ತಂಡೋಪತಂಡವಾಗಿ ಬಂದು ಅವನಿಗೆ ಗೌರವ ಸಲ್ಲಿಸುತ್ತಿದ್ದರು. ಅವನ ಸತ್ವಪೂರ್ಣ ಭಾಷಣಗಳು ಜನರ ಮನಸ್ಸನ್ನು ಸೂರೆಗೊಂಡಿದ್ದುವು.

ಶಂಭುವಿನ ಚುನಾವಣಾ ಪ್ರಚಾರ ತಂತ್ರ ಬಹಳ ಸ್ವಾರಸ್ಯಕವಾಗಿತ್ತು. ಶಂಭು ಪ್ರಚಾರಕ್ಕಾಗಿ ಯಾವುದಾದರೊಂದು ಊರಿಗೆ ಹೋಗುವ ಮುನ್ನ, ತನ್ನ ಕಡೆಯ ಜನರನ್ನು ಒಂದೆರಡು ದಿನಗಳ ಮುಂಚಿತವಾಗಿಯೇ ಆ ಊರಿಗೆ ಕಳುಹಿಸುತ್ತಿದ್ದನು. ಆ ಜನರು ಕೊಟ್ಟ ಹಣದಿಂದಲೇ ಹಾರ ತುರಾಯಿಗಳನ್ನು ಕೊಂಡು, ಓಲಗದವರನ್ನು ಗೊತ್ತು ಮಾಡಿ, ಅವನ ಸ್ವಾಗತಕ್ಕಾಗಿ ಸಿದ್ಧತೆಗಳನ್ನು ಮಾಡಿಸುತ್ತಿದ್ದರು. ಶಂಭು ಆ ಊರಿಗೆ ಹೋದೊಡನೆ ಅವರು ಅವನನ್ನು ಇದಿರ್ಗೊಂಡು ಹಾರ ತುರಾಯಿಗಳನ್ನು ಅರ್ಪಿಸಿ, ಜಯ ಘೋಷಣೆಗಳನ್ನು ಮಾಡಿ, ವಾದ್ಯ ಸಮೇತ ಅವನನ್ನು ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆಗಳಲ್ಲಿ ಕೊಂಡೊಯ್ಯುತ್ತಿದ್ದರು.

ಶಂಭುವಿನ ಆ ಶಿಷ್ಯರು ಊರಿನ ಮಕ್ಕಳಿಗೆ ಮಿಠಾಯಿಗಳನ್ನು ಹಂಚಿ ಕೆಲಸವಿಲ್ಲದ ಕಾಕಪೋಕರಿಗೆ ಪುಡಿಗಾಸನ್ನು ಕೊಟ್ಟು, ಮೆರವಣಿಗೆಯ ತಂಡಕ್ಕೆ ಸೇರುವಂತೆ ಪುಸಲಾಯಿಸುತ್ತಿದ್ದರು. ಹೀಗಾಗಿ ಮೊದಲು ಕೇವಲ ಶಂಭುವಿನ ಕಡೆಯವರಿಂದ ಕೂಡಿದ್ದ ಮೆರವಣಿಗೆ ಕ್ರಮೇಣ ಸಾರ್ವಜನಿಕ ಮೆರವಣಿಗೆಯಾಗಿ ಪರಿಣಮಿಸುತ್ತಿತ್ತು. ದಾರಿಯುದ್ದಕ್ಕೂ ಅವನ ಭಕ್ತರು "ಶಂಭುನಾಥರಿಗೆ ಜಯವಾಗಲಿ; ಯಾರಿಗೆ ಓಟು? ಶಂಭುನಾಥರಿಗೆ ಓಟು" ಎಂಬುದಾಗಿ ಘೋಷಣೆ ಮಾಡುತ್ತಿದ್ದರು. ಇದು ಮತದಾರರ ಮನಸೆಳೆಯುವ ಕೃತಕ ನಾಟಕವೆಂಬುದು ಜನ ಸಾಮಾನ್ಯರಿಗೆ ಸುಲಭವಾಗಿ ಗೊತ್ತಾಗುತ್ತಿರಲಿಲ್ಲ. ಆದ್ದರಿಂದ ಏನೂ ತಿಳಿಯದ ಕೃಷಿಕರೂ, ಕಾರ್ಮಿಕರೂ ಶಂಭು ಒಬ್ಬ ಜನಪ್ರಿಯ ನಾಯಕನೆಂದು ಭಾವಿಸುತ್ತಿದ್ದರು.

ಪ್ರಚಾರ ಸಭೆಗಳಲ್ಲಿ ತನ್ನನ್ನು ಕೊಂಡಾಡುವುದಕ್ಕಾಗಿಯೇ ಶಂಭು ಕೆಲವು ಭಾಷಣಕಾರರನ್ನು ಸಂಬಳ ಕೊಟ್ಟು ನೇಮಿಸಿದ್ದನು. ಆ ಭಾಷಣಕಾರರು, ತಾವು

ಶಂಭುವಿನ ನೌಕರರೆಂಬುದನ್ನು ತೋರ್ಪಡಿಸಿಕೊಳ್ಳದೆ, ಸಭೆಗಳಲ್ಲಿ ಯಥೇಚ್ಛವಾಗಿ ಅವನ ಗುಣಗಾನ ಮಾಡುತ್ತಿದ್ದರು. ಶಂಭುವಿನ ಇತಿಹಾಸ ಗೊತ್ತಿಲ್ಲದವರು, ಇಷ್ಟೆಲ್ಲಾ ಹೊಗಳಿಕೆಗೆ ಪಾತ್ರನಾದ ಶಂಭು ಗಣ್ಯನಾಯಕನಾಗಿರಬಹುದೆಂದು ಭಾವಿಸುತ್ತಿದ್ದರು. ಇಷ್ಟೆಲ್ಲಾ ಪ್ರಯತ್ನ ಪ್ರಚಾರಗಳು ಜರುಗಿದ್ದರೂ, ಕಮಲಶಿಲೆ ತಾಲ್ಲೂಕಿನ ಜನರು ಶಂಭುವಿನ ಸವಿಮಾತಿಗಾಗಲೀ, ಅವನ ಗುಣಗಾನಕ್ಕಾಗಲೀ, ಮಾರುಹೋಗಲು ಸಿದ್ಧರಿರಲಿಲ್ಲ. ತಮ್ಮ ಅಚ್ಚು ಮೆಚ್ಚಿನ ನಾಯಕ ಸೋಮಶೇಖರನನ್ನು ಕೊಲ್ಲಿಸಿದ ಕೊಲೆಪಾತಕಿಯನ್ನು ಆರಿಸಲು ಅವರು ಸಿದ್ಧರಿರಲಿಲ್ಲ.

ಇತ್ತ ದಾಮೋದರನ ಚುನಾವಣಾ ಕ್ಷೇತ್ರದಲ್ಲಿ, ಅವನಿಗೂ ಅವನ ಪ್ರತಿಸ್ಪರ್ಧಿ ಭಕ್ತಾರಾಮನಿಗೂ ನೇರವಾದ ಪೈಪೋಟಿ ನಡೆದಿತ್ತು. ಕುಟಿಲ ಶಿಖಾಮಣಿಯಾದ ದಾಮೋದರನು ತನ್ನ ಕಪಟನಾಟಕದಿಂದ ಜನರನ್ನು ಒಲಿಸಿಕೊಳ್ಳುವ ಕಲೆಯಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಪಡೆದವನಾಗಿದ್ದನು. ಅವನು ಧೀರೋದ್ದಾತನಂತೆ ನಟಿಸುತ್ತಾ, ಮಾಡಬಾರದ ಚಿಲ್ಲರೆ ಕೆಲಸಗಳೆಲ್ಲವನ್ನೂ ತನ್ನ ಭಕ್ತ ಮಂಡಳಿಯವರಿಂದ ಮಾಡಿಸುತ್ತಿದ್ದನು. ತನ್ನ ಕ್ಷೇತ್ರದಲ್ಲಿ, ಅಲ್ಲಲ್ಲಿ ಮತದಾರರ ಮುಖಂಡರೆನ್ನಿಸಿಕೊಂಡಿದ್ದ ವ್ಯಕ್ತಿಗಳನ್ನು ಹಿಡಿದು ತನ್ನ ಕಾರ್ಯಭಾರಿಗಳನ್ನಾಗಿ ನೇಮಕ ಮಾಡಿದ್ದನು. ಆ ಕಾರ್ಯಭಾರಿಗಳಿಗೆ ಅವರವರ ಪ್ರಭಾವಕ್ಕನುಗುಣವಾಗಿ ತಲಾ ಒಂದು ಸಾವಿರ ರೂಪಾಯಿಗಳಿಂದ ಹಿಡಿದು ಐದಾರು ಸಾವಿರ ರೂಪಾಯಿಗಳವರೆಗೆ ಸಂಭಾವನೆಯನ್ನು ನೀಡುತ್ತಿದ್ದನು.

ಒಂದು ವಿಚಿತ್ರ ಸಂಗತಿಯೆಂದರೆ ವಿರೋಧ ಪಕ್ಷಕ್ಕೆ ಸೇರಿದ ಕೆಲವರೂ ಸಹ ದಾಮೋದರನ ಕಾರ್ಯಭಾರಿಗಳಾಗಿದ್ದರು. ದಾಮೋದರನು ಮುಖ್ಯಮಂತ್ರಿಯಾಗುವ ಯೋಚನೆ ಆಗಲೇ ಕಂಡುಬರುತ್ತಿದ್ದುದರಿಂದ ಕಂಟ್ರಾಕ್ಟ್, ಪರ್ಮಿಟ್, ಲೈಸನ್ಸ್ ಮುಂತಾದ ಅನುಗ್ರಹಗಳಿಂದ ಜೀವಿಸಲು ಬಂದಳಿಕೆ ರೀತಿಯ ಜನರು ಮುಂದಾಲೋಚನೆಯಿಂದ ಸ್ವಯಂ ಪ್ರೇರಿತರಾಗಿ ನೋಟಿನ ಕಟ್ಟುಗಳನ್ನು ಅವನ ಮುಂದೆ ಸುರಿಯುತ್ತಿದ್ದರು. ಆದ್ದರಿಂದ ದಾಮೋದರನಿಗೆ ಹಣದ ಕೊರತೆಯೇನೂ ಇರಲಿಲ್ಲ.

ದಾಮೋದರನು ಮುಖ್ಯಮಂತ್ರಿಯಾದಾಗ, ಮತದಾರರ ಸಾಮೂಹಿಕ ಮತ್ತು ವೈಯಕ್ತಿಕ ಬೇಡಿಕೆಗಳನ್ನು ಈಡೇರಿಸಿಕೊಡುವುದಾಗಿ, ಅವನ ಕಾರ್ಯಭಾರಿಗಳು ನಾನಾ ವಿಧವಾಗಿ ಪೊಳ್ಳು ಭರವಸೆಗಳನ್ನು ನೀಡುತ್ತಿದ್ದರು. ಆಸೆ ಭರವಸೆಗಳು ಪ್ರಯೋಜನವಾಗದ ಕಡೆಗಳಲ್ಲಿ ಮತದಾರರನ್ನು ಹೆದರಿಸುತ್ತಿದ್ದರು. ಚುನಾವಣೆಗಳು ಸಮೀಪಿಸುತ್ತಿದ್ದಂತೆ ದಾಮೋದರನು ಮತದಾರರಿಗೆ ಹಂಚುವುದಕ್ಕಾಗಿ ತನ್ನ ಕಾರ್ಯಭಾರಿಗಳ ವಶಕ್ಕೆ ಒಟ್ಟು ಎರಡು ಲಕ್ಷರೂಪಾಯಿಗಳನ್ನು ಕೊಟ್ಟಿದ್ದನು. ಅಲ್ಲದೆ ಬಡವರಾದ ಮತದಾರರಿಗೆ ಹಂಚುವುದಕ್ಕಾಗಿ ಹಲವು ಸಾವಿರ ಬಂಗಾರದ ಮೂಗುತಿಗಳನ್ನೂ, ಪಂಚೆಗಳನ್ನೂ ಒದಗಿಸಿದ್ದನು. ಅವನ ಕಾರ್ಯಭಾರಿಗಳು ಹಣ, ಹೆಂಡ, ಮೂಗುತಿ, ವಸ್ತ್ರ ಮುಂತಾದವುಗಳನ್ನು ಮತದಾರರಿಗೆ ನೀಡಿ, ಅವರನ್ನು ವಶಪಡಿಸಿಕೊಳ್ಳುವ ಕಾರ್ಯದಲ್ಲಿ

ತತ್ಪರರಾಗಿದ್ದರು. ದಾಮೋದರನ ಈ ದೊಡ್ಡ ಮೋಡಿಯ ಮುಂದೆ ನಿಲ್ಲಲಾರದೆ ಬಡ ಭಕ್ತಾರಾಮನು ತತ್ತರಿಸುತ್ತಿದ್ದನು.

* * * *

ಚುನಾವಣೆಯ ಹಿಂದಿನ ದಿನ ದಾಮೋದರ, ಶಂಭು ಮತ್ತು ದುರ್ಗಾದಾಸರ ಕ್ಷೇತ್ರಗಳಲ್ಲಿ, ಶಂಭು ದಾಮೋದರರ ಕಡೆಯವರು ನಡೆಸಿದ್ದ ಅಕ್ರಮ ಅನೀತಿಗಳಿಗೆ ಮಿತಿಯೇ ಇರಲಿಲ್ಲ. ಹಲವು ಕಡೆಗಳಲ್ಲಿ ಅವರು ಚುನಾವಣೆಯ ಹಿಂದಿನ ರಾತ್ರಿ ಹೆಂಡ ಮಾಂಸಗಳ ಸಮಾರಾಧನೆ ಮಾಡಿಸಿದರು. ಆ ರಾತ್ರಿ ಕೆಲವು ಕಡೆಗಳಲ್ಲಿ ಮತದಾರರಿಗೆ ಧಾರಾಳವಾಗಿ ಹಣವನ್ನು ಹಂಚಿದರು. ಹಣ, ಹೆಂಡ, ದಾಕ್ಷಿಣ್ಯ, ಮುಂತಾದ ಆಸೆಪಾಸೆಗಳಿಗೆ ಒಲಿಯದಿದ್ದವರನ್ನು ಹೆದರಿಕೆ, ಬೆದರಿಕೆಗಳಿಂದ ವಶಪಡಿಸಿಕೊಳ್ಳುತ್ತಿದ್ದರು. ಅದಕ್ಕೂ ಜಗ್ಗದವರನ್ನು ಕಪಟ, ಬೆದರಿಕೆಗಳಿಂದ ಮೋಸಗೊಳಿಸುತ್ತಿದ್ದರು.

ತಮಗೊಲಿಯದ ಜನರನ್ನು ಮೋಸಗೊಳಿಸುವುದಕ್ಕಾಗಿ, ಮತನೀಡುವ ಮತಗಟ್ಟೆ ಒಂದಾಗಿದ್ದರೆ, ಬೇರೊಂದು ಮತಗಟ್ಟೆಯನ್ನು ಅವರಿಗೆ ತೋರಿಸುತ್ತಿದ್ದರು. ದುರ್ಗಾದಾಸರ ಚುನಾವಣಾ ಚಿಹ್ನೆಯನ್ನು ಸರ್ಕಾರದವರು ಬದಲಾವಣೆ ಮಾಡಿದ್ದಾರೆಂದು ಕೆಲವು ಕಡೆ ಸಾರಿದರು. ದುರ್ಗಾದಾಸರ ಅಚ್ಚುಮೆಚ್ಚಿನ ಶಿಷ್ಯರಾಗಿದ್ದ ಹರಿಜನ ಗಿರಿಜನರಿಗೆ, ಅವರು ಎರಡು ಮತಗಳನ್ನು ನೀಡಬಹುದೆಂದೂ, ದುರ್ಗಾದಾಸರಿಗೊಂದು ಮತವನ್ನೂ, ಭಗವಾನ್‌ದಾಸನಿಗೊಂದು ಮತವನ್ನೂ ನೀಡಿದರೆ ಇಬ್ಬರು ಆರಿಸಿ ಬರುತ್ತಾರೆಂದೂ ಉಪದೇಶ ಮಾಡಿದರು. ಅವಿದ್ಯಾವಂತರಿದ್ದ ಕೆಲವು ಕಡೆಗಳಲ್ಲಿ ಭಗವಾನ್‌ದಾಸನ ಚುನಾವಣೆ ನಾಳೆ ನಡೆಯುವುದೆಂದೂ, ದುರ್ಗಾದಾಸರ ಚುನಾವಣೆ ನಾಡಿದ್ದು ನಡೆಯುವುದೆಂದೂ ಹೇಳಿದರು.

ಚುನಾವಣೆ ನಡೆಯಿತು. ನಿಂಬೂರು ಹಳ್ಳಿಗಾಡು ಕ್ಷೇತ್ರದಲ್ಲಿ ದುರ್ಗಾದಾಸರ ವಿರೋಧಿಗಳು, ಅವರನ್ನು ಸೋಲಿಸಲು ಅಸಾಧಾರಣ ಪ್ರಯತ್ನ ಮಾಡಿದ್ದರೂ, ಮತದಾರರು ತಂಡೋಪತಂಡವಾಗಿ ಬಂದು ತಮ್ಮ ಮೆಚ್ಚಿನ ನಾಯಕರಾದ ದುರ್ಗಾದಾಸರಿಗೆ ಮತ ನೀಡಿದರು. ಕೆಲವು ಕಡೆಗಳಲ್ಲಿ ಭಗವಾನ್‌ದಾಸನಿಂದ ಹಣವನ್ನು ತೆಗೆದುಕೊಂಡಿದ್ದರೂ, ಅವನ ಹೆಂಡವನ್ನು ಕುಡಿದವರು ಸಹ ತಮ್ಮ ಮತಗಳನ್ನು ದುರ್ಗಾದಾಸರಿಗೆ ಅರ್ಪಿಸಿದರು.

ಶಂಭು, ದಾಮೋದರರು ಹಣ ಹೆಂಡಗಳಿಂದ ಹಳ್ಳಿಯ ರೈತರನ್ನು ಕೊಂಡುಕೊಳ್ಳಬಹುದೆಂದು ಭಾವಿಸಿದ್ದರು. ಆದರೆ ಹಳ್ಳಿಯ ರೈತರು ತಮ್ಮ ಪವಿತ್ರ ಮತಗಳನ್ನು ಹಣಕ್ಕಾಗಿ ಅಥವಾ ಹೆಂಡಕ್ಕಾಗಿ ಮಾರುವಷ್ಟು ತುಚ್ಛರಾಗಿರಲಿಲ್ಲ. ದುರ್ಗಾದಾಸರು ಪ್ರಚಂಡ ಬಹುಮತಗಳಿಸಿ ಆರಿಸಿ ಬಂದರು. ಭಗವಾನ್‌ದಾಸನು ಠೇವಣಿ ಕಳೆದುಕೊಂಡು ಪರಾಜಿತನಾದನು. ಆದರೆ ಶಂಭುವಿನ ಕಡೆಯವರು ದುರ್ಗಾದಾಸರು ಹಣ ಹೆಂಡಗಳ ಸಹಾಯದಿಂದ ಗೆದ್ದು ಬಂದರೆಂದು ಸಾರುತ್ತಿದ್ದರು.

ದಾಮೋದರನ ಕ್ಷೇತ್ರದಲ್ಲಿ, ಸ್ವಾರ್ಥಿಗಳಾದ ಪಟ್ಟಣದ ಕೆಲವರು ಮತದಾರರು ಹಣ, ಹೆಂಡಗಳ ಆಸೆಗಾಗಿ ತಮ್ಮ ಓಟುಗಳನ್ನು ಅವನಿಗೆ ಮಾರಿದರು. ವಿದ್ಯಾವಂತರನೇಕರು ತಮ್ಮ ಮತಗಳನ್ನು ಚಲಾಯಿಸಲೇ ಇಲ್ಲ. ಅವರು ಚುನಾವಣೆಯ ದಿನ ಕ್ಲಬ್ಬುಗಳಿಗೋ, ಸಿನಿಮಾ ಮಂದಿರಗಳಿಗೋ ಹೋಗಿ, ರಾಜ್ಯಾಂಗವು ತಮಗಿತ್ತ ಪವಿತ್ರ ಹಕ್ಕನ್ನು ವ್ಯರ್ಥಮಾಡಿಕೊಂಡರು. ದಾಮೋದರನು ಗೆದ್ದನು; ಅವನ ಪ್ರತಿಸ್ಪರ್ಧಿ ಭಕ್ತಾರಾಮ್ ಸೋತನು.

ಕಮಲಶಿಲೆ ಕ್ಷೇತ್ರದಲ್ಲಿ ನಡೆದ ಪ್ರಚಂಡ ಹೋರಾಟದಲ್ಲಿ ಪ್ರತಾಪರಾಜನು ಪ್ರಚಂಡ ಬಹುಮತ ಗಳಿಸಿ ಜಯಭೇರಿಯನ್ನು ಹೊಡೆದನು. ಶಂಭು ಸೋತು ಠೇವಣಿಯನ್ನು ಕಳೆದು ಕೊಂಡನು. ಮಂತ್ರಿಯಾಗಬೇಕೆಂದು ಹಗಲುಗನಸು ಕಾಣುತ್ತಿದ್ದ ಶಂಭುವಿಗೆ ಆಕಾಶವೇ ಕಳಚಿ ತಲೆಯ ಮೇಲೆ ಬಿದ್ದಂತಾಗಿತ್ತು. ತನ್ನ ಸೋಲಿಗೆ ದುರ್ಗಾದಾಸರೇ ಕಾರಣರೆಂದೂ, ಅವರು ಒಳಗಿಂದೊಳಗೆ ಕಾಂಗ್ರೆಸ್ಸಿಗೆ ದ್ರೋಹವೆಸಗಿ ಪ್ರತಾಪರಾಜನಿಗೆ ಸಹಾಯ ಮಾಡಿದರೆಂದೂ ಅವನು ಅಪಪ್ರಚಾರ ಮಾಡತೊಡಗಿದನು.

ಪುನಃ ಮಂತ್ರಿಯಾಗಬೇಕೆಂಬ ದುರಾಸೆಯಿಂದ ಶಂಭು ದಾಮೋದರರ ಗುಂಪಿಗೆ ಸೇರಿಕೊಂಡು, ಸೋಮಶೇಖರನ ಕೊಲೆಯ ರಹಸ್ಯವನ್ನೂ ಸಹ ಬಚ್ಚಿಟ್ಟು, ಸತ್ಯಕ್ಕೆ ಅಪಚಾರವೆಸಗಿದ್ದ ಗೃಹಮಂತ್ರಿಯು ಚುನಾವಣೆಯಲ್ಲಿ ಪರಾಭವ ಹೊಂದಿ ಅನಾಮಧೇಯ ವ್ಯಕ್ತಿಯಾದನು. ದುರ್ಗಾದಾಸರ ಬೆಂಬಲಿಗರಾಗಿದ್ದ ಅಮರ್‌ಚಂದ್ ಮುಂತಾದವರೂ, ವಿರೋಧ ಗುಂಪಿನ ಧುರೀಣರಾಗಿದ್ದ ಹೆಮ್ಮಾರ, ಕೆಮ್ಮಾರ, ಜಲೋದರ, ಗಾಂಢೀವ ಮುಂತಾದವರೂ ಚುನಾವಣೆಯಲ್ಲಿ ಆರಿಸಿ ಬಂದಿದ್ದರು.

ಚುನಾವಣೆಯಲ್ಲಿ ಆರಿಸಿ ಬಂದ ಕಾಂಗ್ರೆಸ್ ಶಾಸಕರನ್ನು ತಮ್ಮ ಕಡೆಗೆ ಎಳೆದು ಕೊಳ್ಳುವುದಕ್ಕಾಗಿ, ಶಂಭು ದಾಮೋದರರು ತಮ್ಮ ಕಡೆಯ ಜನರನ್ನು ಪ್ರತಿಯೊಂದು ಚುನಾವಣಾ ಕ್ಷೇತ್ರಕ್ಕೂ ಅಟ್ಟಿದ್ದರು. ಆ ಜನರು ಗೆದ್ದವರನ್ನು ಸಂದರ್ಶಿಸಿ, ಅವರಿಗೆ ನಾನಾ ಆಸೆ ಆಮಿಷಗಳನ್ನು ತೋರಿಸಿ, ದಾಮೋದರನಿಗೆ ಮುಖ್ಯಮಂತ್ರಿಯಾಗಲು ಬೆಂಬಲ ನೀಡಬೇಕೆಂದು ಪ್ರೋತ್ಸಾಹಿಸುತ್ತಿದ್ದರು.

ದಾಮೋದರನ ಕಡೆಯ ಕೆಲವು ವೃತ್ತಪತ್ರಿಕೆಗಳು ದಾಮೋದರನು ಮುಖ್ಯಮಂತ್ರಿಯಾಗುವುದು ಖಂಡಿತವೆಂದು ಪ್ರತಿದಿನವೂ ಸಾರುತ್ತಿದ್ದುವು. ರಾಜ್ಯದಾದ್ಯಂತ ಶಂಭು ದಾಮೋದರರ ಹಿಂಬಾಲಕರು ದಾಮೋದರನು ಕಾಂಗ್ರೆಸ್ ಪಕ್ಷದ ನಾಯಕನಾಗುವುದು ಖಂಡಿತವೆಂದು ಪ್ರಚಾರ ನಡೆಸುತ್ತಿದ್ದರು. ಶಾಸಕರ ಮನಸ್ಸು ದಾಮೋದರನ ಕಡೆಗೆ ಹರಿಯಲೆಂಬ ಉದ್ದೇಶದಿಂದ ಈ ಪ್ರಚಾರವನ್ನು ಕೈಗೊಂಡಿದ್ದರು.

* * * *

ಈ ಮಧ್ಯೆ ರಾಜಧಾನಿಯಲ್ಲಿ ಒಂದು ಸ್ವಾರಸ್ಯಕರವಾದ ಘಟನೆ ನಡೆಯಿತು. ಚುನಾವಣೆಯ ಕಾಲದಲ್ಲಿ ದಾಮೋದರನು ತನ್ನ ಕಾರ್ಯಭಾರಿಯೊಬ್ಬನಿಗೆ, ಮತದಾರರಿಗೆ ಹಂಚಲಿಕ್ಕಾಗಿ, ಹತ್ತು ಸಾವಿರ ರೂಪಾಯಿಗಳನ್ನು ಕೊಟ್ಟಿದ್ದನು. ಆ ಕಾರ್ಯಭಾರಿಯು ಆ

ಹಣದಲ್ಲಿ ಐದು ಸಾವಿರ ರೂಪಾಯಿಗಳ ಕರೆನ್ಸಿ ನೋಟುಗಳನ್ನು ಗುಪ್ತವಾಗಿ ತನ್ನ ಬೊಕ್ಕಸಕ್ಕೆ ಸೇರಿಸಿದ್ದನು. ಆ ಐದು ಸಾವಿರ ರೂಪಾಯಿಗಳ ಕರೆನ್ಸಿ ನೋಟುಗಳನ್ನು ಕಂಟ್ರಾಕ್ಟರ್ ಮಹಾಶಯನೊಬ್ಬನು ದಾಮೋದರನಿಗೆ ಚುನಾವಣಾ ವೆಚ್ಚಕ್ಕಾಗಿ ಕೊಟ್ಟಿದ್ದನು.

ಚುನಾವಣೆ ಮುಗಿದ ನಂತರ, ಆ ಕಾರ್ಯಭಾರಿಯು ತಾನು ಜೋಪಾನವಾಗಿ ಪೆಟ್ಟಿಗೆಯಲ್ಲಿಟ್ಟಿದ್ದ ನೋಟುಗಳ ಪೈಕಿ ಒಂದು ನೂರು ರೂಪಾಯಿಗಳ ನೋಟೊಂದನ್ನು ತೆಗೆದುಕೊಂಡು ಹೋದನು. ರಾಜಧಾನಿಯಲ್ಲಿದ್ದ ಕ್ಲಬ್ ಒಂದರಲ್ಲಿ ಇಸ್ಪೀಟು ಆಡುತ್ತಿದ್ದನು. ಅವನು ಆಟದಲ್ಲಿ ಸೋತು ಹೋದದ್ದರಿಂದ, ಗೆದ್ದ ಆಟಗಾರರಿಗೆ ಕೊಡಬೇಕಾಗಿದ್ದ ಹಣಕ್ಕಾಗಿ, ಆ ನೂರು ರೂಪಾಯಿ ನೋಟನ್ನು ಕೊಟ್ಟನು. ಆ ನೋಟನ್ನು ಕೈಗೆ ತೆಗೆದುಕೊಂಡ ಚಾಣಾಕ್ಷನಾದ ಗೆದ್ದ ಆಟಗಾರನೊಬ್ಬನು ಅದು ಕೋಟಾ ನೋಟೆಂದೂ, ಅದನ್ನು ತೆಗೆದು ಕೊಳ್ಳಲಾಗುವುದಿಲ್ಲವೆಂದೂ ಹೇಳಿ ಹಿಂದಕ್ಕೆ ಕೊಟ್ಟನು. ದಾಮೋದರನ ಕಾರ್ಯಭಾರಿಯ ಮುಖ ಕಪ್ಪಾಯಿತು. ತನ್ನ ಬಳಿ ಇದ್ದ ಉಳಿದ ನೋಟುಗಳೂ ಕೂಡ ಅದೇ ರೀತಿಯ ಕೋಟಾ ನೋಟುಗಳಾಗಿದ್ದರೆ ತಾನು ಚುನಾವಣೆಯಲ್ಲಿ ದಾಮೋದರನಿಗೆ ಶ್ರಮಿಸಿದ್ದು ವ್ಯರ್ಥವಾಯಿತೆಂದು ಮನಸ್ಸಿನಲ್ಲೇ ಅಂದುಕೊಂಡನು.

ಆ ಕಾರ್ಯಭಾರಿಯು ರಾತ್ರಿ ಮನೆಗೆ ಹೋದೊಡನೆ ತನ್ನ ಬಳಿಯಿದ್ದ ಇತರ ನೋಟುಗಳನ್ನು ಆ ನೋಟಿನೊಂದಿಗೆ ಹೋಲಿಸಿ ನೋಡಿದನು. ಅವೆಲ್ಲವೂ ಆ ನೋಟಿನಂತೆಯೇ ಇದ್ದುವು. ಮರುದಿನ ಬೆಳಿಗ್ಗೆ ಕೆಲವು ನೋಟುಗಳನ್ನು ತೆಗೆದುಕೊಂಡು ಹೋಗಿ, ತನಗೆ ಪರಿಚಿತರಾಗಿದ್ದ ಸ್ಥಳೀಯ ಬ್ಯಾಂಕಿನ ತಜ್ಞರೊಬ್ಬರಿಗೆ ತೋರಿಸಿದನು. ಆ ತಜ್ಞರು ಅವುಗಳು ಕೋಟಾ ನೋಟುಗಳೆಂದು ಹೇಳಿಬಿಟ್ಟರು. ಕಾರ್ಯಭಾರಿಗೆ ಸಿಡಿಲು ಬಡಿದಂತಾಯಿತು. ನೋಟು ತನ್ನ ಬಳಿಯಲ್ಲಿದ್ದರೆ ಕಾರಾಗೃಹವನ್ನು ಸೇರಬೇಕಾದೀತೆಂಬ ಭಯ ಅವನನ್ನು ಬಾಧಿಸತೊಡಗಿತು. ಆ ದಿನವೇ ಎಲ್ಲಾ ನೋಟುಗಳನ್ನೂ ಅಗ್ನಿ ದೇವನಿಗೆ ಸಮರ್ಪಿಸಿ, ಭಯದಿಂದ ಮುಕ್ತನಾಗಿ, ಮೊದಲಿನಂತೆ ಬಡವನಾದನು.

* * * *

# ೯. ಮುಖ್ಯಮಂತ್ರಿ ದಾಮೋದರ, ಮಂತ್ರಿ ಶಂಭು

ಚುನಾವಣೆಯ ಫಲಿತಾಂಶವು ಹೊರಬಿದ್ದ ಹದಿನೈದು ದಿನಗಳಾಗಿದ್ದುವು. ಇನ್ನೆರಡು ದಿನಗಳಲ್ಲಿ ಕಾಂಗ್ರೆಸ್ ಪಕ್ಷದ ನಾಯಕರ ಚುನಾವಣೆ ನಡೆಯಬೇಕಾಗಿತ್ತು. ಆ ಚುನಾವಣೆಗಾಗಿ ರಾಜ್ಯದ ವಿವಿಧ ಕ್ಷೇತ್ರಗಳಿಂದ ಶಾಸಕರು ರಾಜಧಾನಿಗೆ ಆಗಮಿಸತೊಡಗಿದ್ದರು. ಕೆಲವರು ಬಸ್ಸುಗಳಲ್ಲಿಯೂ, ಕೆಲವರು ಕಾರುಗಳಲ್ಲಿಯೂ, ಕೆಲವರು ರೈಲುಗಳಲ್ಲಿಯೂ, ಕೆಲವರು ವಿಮಾನದಲ್ಲಿಯೂ ಬಂದಿಳಿಯುತ್ತಿದ್ದರು.

ಶಾಸಕರೆಲ್ಲರನ್ನು ಒಂದು ಕಡೆ ಸೇರಿಸಿ, ದಾಮೋದರನಿಗೆ ಅವರೆಲ್ಲರ ಬೆಂಬಲ ವಿದೆ ಎಂಬುದನ್ನು ತೋರ್ಪಡಿಸುವುದಕ್ಕಾಗಿ, ಶಂಭು ದಾಮೋದರರು ಕೃತಕ ವಾತಾವರಣವನ್ನು ನಿರ್ಮಿಸುವ ತರದೂದಿನಲ್ಲಿದ್ದರು. ಶಾಸಕರ ವಸತಿಗಾಗಿ ಪಟವಾರನ ಛತ್ರವನ್ನು ಮೀಸಲಾಗಿಟ್ಟಿದ್ದರು. ರಾಜಧಾನಿಗೆ ಆಗಮಿಸುತ್ತಿದ್ದ ಶಾಸಕರನ್ನು ಬಸ್ಸು, ರೈಲು ಮತ್ತು ವಿಮಾನ ನಿಲ್ದಾಣಗಳಲ್ಲಿ ಸ್ವಾಗತಿಸಿ, ಅವರನ್ನು ಟ್ಯಾಕ್ಸಿಗಳಲ್ಲಿ ಆ ಛತ್ರಕ್ಕೆ ಕೊಂಡೊಯ್ಯುತ್ತಿದ್ದರು. ಛತ್ರದಲ್ಲಿ ಅವರಿಗೆ ಉಚಿತವಾಗಿ ಸಕಲೋಪಚಾರಗಳನ್ನು ಮಾಡುವ ವ್ಯವಸ್ಥೆ ಮಾಡಿದ್ದರು. ಕುಡಿಯುವ ಚಟವಿದ್ದವರಿಗೆ ಬ್ರಾಂದಿ ವ್ಹಿಸ್ಕಿಗಳನ್ನೂ ಸಹ ಒದಗಿಸುತ್ತಿದ್ದರು. ಪಕ್ಷದ ನಾಯಕರು ಚುನಾವಣೆಯ ಹಿಂದಿನ ದಿನದ ರಾತ್ರಿ ಪಟವಾರನೂ, ಮಹೋದರನೂ ಗಾಂಢೀವನೂ ಸೇರಿ ದಾಮೋದರನ ಗೌರವಾರ್ಥ ವಾಗಿ ಆ ಛತ್ರದಲ್ಲಿ ಒಂದು ಭೋಜನ ಕೂಟವನ್ನು ಏರ್ಪಡಿಸಿದ್ದರು. ಆ ಕೂಟಕ್ಕೆ ಕಾಂಗ್ರೆಸ್ ಪಕ್ಷದ ಎಲ್ಲಾ ಶಾಸಕರೂ, ರಾಜಧಾನಿಯ ಪ್ರಮುಖ ರಾಜಕಾರಣಿಗಳೂ, ಆಹ್ವಾನಿತರಾಗಿದ್ದರು. ಆ ರಾತ್ರಿ ಛತ್ರವು ತಳಿರುತೋರಣಗಳಿಂದಲೂ, ಕಣ್ಣು ಕೋರೈಸುವ ವಿದ್ಯುತ್ ದೀಪಗಳಿಂದಲೂ ಶೋಭಿಸುತ್ತಿತ್ತು.

ಪಕ್ಷದ ಬಹುಮಂದಿ ಸದಸ್ಯರು ಆ ಛತ್ರದಲ್ಲೇ ಬಿಡಾರಮಾಡಿದ್ದರು. ಉಳಿದ ಅತಿಥಿಗಳು ಒಬ್ಬೊಬ್ಬರಾಗಿ ಆಗಮಿಸುತ್ತಿದ್ದರು. ಮುಖ್ಯ ಅತಿಥಿಯಾಗಿದ್ದ ದಾಮೋದರನೂ, ಅವನ ಸ್ನೇಹಿತನಾದ ಶಂಭುವೂ ಇನ್ನೂ ಬಂದಿರಲಿಲ್ಲ. ಪಟವಾರನು ಹಾರ ತುರಾಯಿ ಗಳನ್ನು ಹಿಡಿದು ಅವರಿಬ್ಬರ ಸ್ವಾಗತಕ್ಕಾಗಿ ಛತ್ರದ ಮುಂದೆ ಕಾಯುತ್ತಿದ್ದನು.

ಛತ್ರದ ಕೊಠಡಿಯೊಂದರಲ್ಲಿ ತಂಗಿದ್ದ ಶಾಸಕರಿಬ್ಬರು ಸಂಭಾಷಣೆಯಲ್ಲಿ ಮಗ್ನರಾಗಿದ್ದರು. ಒಬ್ಬನು ನಿಂಬೂರು ಜಿಲ್ಲೆಯವನು ಅವನು ದುರ್ಗಾದಾಸರ ಬಣಕ್ಕೆ ಸೇರಿದವನು. ಇನ್ನೊಬ್ಬ ಹೇಮಗಿರಿ ಜಿಲ್ಲೆಯವನು. ಅವನು ದಾಮೋದರನ ಕೂಟಕ್ಕೆ ಸೇರಿದವನು.

"ಇದೇನ್ರಿ, ಲೀಡರ್ ಎಲೆಕ್ಷನ್ ಕೆಡ್ಡಾ ಆಪರೇಶನ್ ಮಾಡದ್ಹಾಗೆ ನಡೀತಾ ಇದೆ. ಇದೇನನ್ಯಾಯ? ಈ ನಮೂನಿ ಆಗೋದು ನಾವೆಲ್ಲೂ ಕೇಳಿಲ್ಲ" ಎಂದು ನಿಂಬೂರು ಜಿಲ್ಲೆಯ ಶಾಸಕ ಹೇಮಗಿರಿ ಜಿಲ್ಲೆಯವನನ್ನು ಕುರಿತು ನುಡಿದನು.

"ಏನಾಗದ್ರೀ? ನೀವಂಬೋದು ನನಗೆ ಅರ್ಥ ಆಗೋದಿಲ್ಲ."

"ಅರ್ಥ ಆಗೋದಿಲ್ವೆ? ಎಣಿಕೆ ಮುಗಿಯೋದ್ರೊಳ್ಗೆ ದಾಮೋದರನ ಕಡೆಯವ್ರು ಶಾಸಕರ ಬೆನ್ನು ಹತ್ತಿದ್ರು. ರೈಲು, ಬಸ್ಸು, ವಿಮಾನದಿಂದ ಮೆಂಬರ್ಸ್ ಕರಕೊಂಡ್ ಬಂದು ಈ ಛತ್ರ ತುಂಬ್ಯಾರೆ. ಎರಡ್ ದಿನದಿಂದ ಎಲ್ಲರಿಗೂ ಸಮಾರಾಧನೆ. ಒಬ್ಬೊಬ್ಬರ ಮ್ಯಾಲು ಇಬ್ಬಿಬ್ಬರು ಸಿ. ಐ. ಡಿ ಹಾಕ್ಯಾರೆ. ದುಡ್ಡು, ಜಾತಿ, ಹೆಂಡ, ಎಲ್ಲಾನೂ ಪ್ರಯೋಗ ಮಾಡ್ತಾ ಇದ್ದಾರೆ. ಇದು ಕೆಡ್ಡಾ ಆಪರೇಶನ್ ಅಲ್ಲವೇ?"

"ಇದ್ರಾಗೆ ಏನ್ ಹೆಚ್ಚಾಗ್ರಿ ಅದೆ. ರಾಜಕಾರಣದೊಳಗೆ ಇದೆಲ್ಲಾ ನಡಿಯೂದೇ."

"ಹೀಗೇ ನಡದ್ರೆ ಪ್ರಜಾಪ್ರಭುತ್ವ ಬಹಳ ಕಾಲ ಉಳಿಯೋಕಿಲ್ಲ. ನಿಂಕಡೆಯವರೆಲ್ಲಾ ಯಾರನ್ನ ಲೀಡರ್ ಮಾಡ್ಬೇಕು ಅಂತ ಇದ್ದಾರೆ?"

"ನಮ್ಕಡಿ ಮಂದಿ ದಾಮೋದರಗೆ ಓಟು ಹಾಕೋದು ಮಾಡ್ಯಾರೆ."

"ದುರ್ಗಾದಾಸರು ದಕ್ಷರೂ, ಸತ್ಯವಂತರೂ ಅಲ್ಲವೇನ್ರಿ?"

"ಹೌದು ಆದರೆ ಅವರ ಹಿಂದುಗುಟಿ ಮೆಜಾರಿಟಿ ಇಲ್ಲ. ನಾಯಲ್ಲಾ ತಿಳಿದೀನಿ."

"ಹಾಗಾದರೆ ಆ ಡಕಾಯಿತಿಗೇ ಓಟು ಕೊಡ್ತೀರಿ?"

"ಅವನ ಹ್ಯಾಂಗ ಬಿಡೂಕಾಗ್ತದ. ನಮಗೆ ತಿಕೀಟು ಕೊಟ್ಟಾನ, ಎಲೆಕ್ಷನ್ನಿಗೆ ರೊಕ್ಕ ಕೊಟ್ಟಾನ. ಜಾತಿಮಗ ಬ್ಯಾರೆ."

ಅವರಿಬ್ಬರ ಸಂಭಾಷಣೆ ನಡೆಯುತ್ತಿರುವಲ್ಲಿ ಊಟಕ್ಕೆ ಕರೆ ಬಂದುದರಿಂದ, ಸಂಭಾಷಣೆ ಅಲ್ಲಿಗೆ ಮುಕ್ತಾಯವಾಯಿತು.

ಭೋಜನವಾದ ನಂತರ ಛತ್ರದ ಒಳಾಂಗಣದಲ್ಲಿ ಸಭೆ ಏರ್ಪಟ್ಟಿದ್ದಿತು. ಶಂಭು ಆ ಸಭೆಗೆ ಅಧ್ಯಕ್ಷನಾಗಿದ್ದನು. ಮಠಾಧಿಪತಿಗಳು ಅಥವಾ ಮಹಾರಾಜರು ಕುಳಿತು ಕೊಳ್ಳತಕ್ಕ ಪೀಠಗಳನ್ನು ಶಂಭು, ದಾಮೋದರರು ಅಲಂಕರಿಸಿದ್ದರು. ಶಾಸಕರ ಸಮ್ಮುಖದಲ್ಲಿ ದಾಮೋದರನನ್ನು ಹೊಗಳಿ, ಅವನಿಗೆ ಬಹುಜನ ಶಾಸಕರ ಬೆಂಬಲವಿದೆ ಎಂದು ತೋರ್ಪಡಿಸುವುದೇ ಆ ಭೋಜನ ಕೂಟದ ಮತ್ತು ಸಭೆಯ ಮುಖ್ಯ ಉದ್ದೇಶವಾಗಿತ್ತು. ಸಭೆಯನ್ನು ಕುರಿತು ಮೊಟ್ಟ ಮೊದಲು ಗಾಂಢೀವನು ಭಾಷಣ ಮಾಡಿದನು. ಅವನ ಭಾಷಣದ ಸಾರಾಂಶ ಈ ರೀತಿ ಇತ್ತು;

"ಸ್ನೇಹಿತರೇ, ನಮ್ಮ ನೆಚ್ಚಿನ ನಾಯಕರಾದ ಶ್ರೀ ದಾಮೋದರ ಗೌರವಾರ್ಥವಾಗಿ ಏರ್ಪಡಿಸಿದ್ದ ಈ ಭೋಜನ ಕೂಟಕ್ಕೆ ಆಗಮಿಸಿದ್ದಕ್ಕಾಗಿ ತಮ್ಮೆಲ್ಲರಿಗೂ ನನ್ನ ಪರವಾಗಿಯೂ, ನನ್ನ ಮಿತ್ರರಾದ ಮಹೋದರ ಮತ್ತು ಪಟವಾರ ಇವರುಗಳ ಪರವಾಗಿಯೂ ಹೃತ್ಪೂರ್ವಕ ವಂದನೆಗಳು. ಶ್ರೀ ದಾಮೋದರರು ಶಾಸನಸಭೆಗೆ

ಚುನಾಯಿತರಾಗಿರುವುದು ಈ ರಾಜ್ಯದ ಭಾಗ್ಯೋದಯವೆಂದು ನನ್ನ ಭಾವನೆ. ನನ್ನಂತೆಯೇ ಈ ರಾಜ್ಯದ ಲಕ್ಷಾಂತರ ಜನರು ಈ ರೀತಿ ಭಾವಿಸುತ್ತಾರೆ.

"ಶ್ರೀ ದಾಮೋದರರಿಗೆ ಮೇಧಾಶಕ್ತಿ ಇದೆ. ಜನ ಬೆಂಬಲವಿದೆ. ದೈವಾನುಗ್ರಹವೂ ಇದೆ. ಅವರ ಸೇವೆಯನ್ನು ಉಪಯೋಗಿಸಿಕೊಳ್ಳುವುದು ಅಥವಾ ಬಿಡುವುದು ತಮಗೆ ಸೇರಿದ್ದಾಗಿದೆ. ತಾವು ಅವರ ಸೇವೆಯನ್ನು ಉಪಯೋಗಿಸಿಕೊಳ್ಳದಿದ್ದರೆ ಅವರಿಗೇನೂ ನಷ್ಟವಾಗುವುದಿಲ್ಲ; ಆದರೆ ರಾಜ್ಯಕ್ಕೆ ಬಹಳ ನಷ್ಟವಾಗುತ್ತದೆ. ದಾಮೋದರರವರೇ, ತಮಗೆ ಉಜ್ವಲ ಭವಿಷ್ಯವಿದೆಯೆಂದು ನನ್ನ ಮನಸ್ಸು ಹೇಳುತ್ತಾ ಇದೆ. ತಾವು ಆಮಂತ್ರಣವನ್ನು ಮನ್ನಿಸಿ ಈ ದಿನ ಇಲ್ಲಿ ಬಂದುದಕ್ಕಾಗಿ ನಾವು ತಮಗೆ ಋಣಿಯಾಗಿದ್ದೇವೆ. ಭಗವಂತನು ತಮಗೂ ತಮ್ಮ ಕುಟುಂಬವರ್ಗದವರಿಗೂ ಸಕಲ ಸನ್ಮಂಗಳಗಳನ್ನೂ ಕರುಣಿಸಲಿ"

ಆ ನಂತರ ಮಾತನಾಡಿದ ದಾಮೋದರನ ಭಕ್ತರಾದ ಹೆಮ್ಮೊರ, ಕೆಮ್ಮೊರ, ಜಲೋದರ ಮುಂತಾದವರು ದಾಮೋರನಲ್ಲಿಲ್ಲದ ಹಲವು ಸದ್ಗುಣಗಳನ್ನು ಪ್ರಸ್ತಾಪಿಸಿ, ಅವನು ರಾಜ್ಯದ ಏಕೈಕ ನಾಯಕನೆಂದೂ, ಸ್ವರಾಜ್ಯಕ್ಕೆ ಎಂದೂ ಲಭಿಸಿರಲಿಲ್ಲವೆಂದೂ ಕಾಂಗ್ರೆಸ್ ಪಕ್ಷದ ನಾಯಕನಾಗುವುದು ಅವಶ್ಯಕವೆಂದೂ ನುಡಿದರು.

ಮುಖ್ಯ ಅತಿಥಿಯಾದ ದಾಮೋದರನ ಭಾಷಣ ಈ ರೀತಿ ಇತ್ತು:

"ಪ್ರಿಯ ಸ್ನೇಹಿತ ಶಂಭುನಾಥವರೇ, ಸ್ನೇಹಿತರೇ,

ನನ್ನ ಗೌರವಾರ್ಥವಾಗಿ ಈ ಸತ್ಕಾರ ಕೂಟವನ್ನು ಏರ್ಪಡಿಸಿರುವ ಗಾಂಢೀವ, ಪಟವಾರ ಮತ್ತು ಮಹೋದರರಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು. ಗಾಂಢೀವರವರು ನನ್ನ ವಿಚಾರದಲ್ಲಿ ಕೆಲವು ಒಳ್ಳೆಯ ಮಾತನ್ನಾಡಿದ್ದಾರೆ. ಅದಕ್ಕಾಗಿ ಅವರಿಗೆ ನಾನು ಋಣಿಯಾಗಿದ್ದೇನೆ. ನಾನು ಕಾಂಗ್ರೆಸ್ಸಿನ ನಮ್ರ ಸೇವಕ; ನನಗೆ ಅಧಿಕಾರ ಲಾಲಸೆ ಇಲ್ಲ. ಕಾಂಗ್ರೆಸ್ಸಿನವರು ನನಗೆ ಯಾವ ಕೆಲಸವನ್ನು ವಹಿಸಿದರೂ ಅದನ್ನು ನಿಷ್ಠೆಯಿಂದ ನಿರ್ವಹಿಸಲು ಸದಾ ಸಿದ್ಧನಾಗಿದ್ದೇನೆ.

"ಶಾಸಕರನೇಕರು ಬಹು ಸಂಖ್ಯೆಯಲ್ಲಿ ಈ ಸತ್ಕಾರ ಕೂಟಕ್ಕೆ ಆಗಮಿಸಿರುವುದು ಬಹಳ ಸಂತೋಷದ ಸಂಗತಿ. ರಾಜ್ಯದ ಮಹಾಜನರು ನನ್ನ ಮೇಲಿಟ್ಟಿರುವ ಅಭಿಮಾನದಿಂದ ನಾನು ಶಾಸಕನಾಗಿದ್ದೇನೆ. ಅದಕ್ಕಾಗಿ ನಾನು ಅವರಿಗೆ ಋಣಿಯಾಗಿದ್ದೇನೆ. ನನ್ನ ಸ್ನೇಹಿತರಾದ ಶಂಭುನಾಥನು ನನಗಿಂತ ದಕ್ಷರು. ಅವರ ಸೇವೆ ರಾಜ್ಯಕ್ಕೆ ಬಹಳ ಅಗತ್ಯ. ಅವರು ಚುನಾವಣೆಯಲ್ಲಿ ಸೋತಿದ್ದು ದುರ್ದೈವದ ಸಂಗತಿ. ಅವರ ಸೋಲಿಗೆ ನಮ್ಮ ಪಕ್ಷದ ಕೆಲವರ ವಂಚನೆಯೇ ಮುಖ್ಯ ಕಾರಣ. ತಮ್ಮೆಲ್ಲರ ಆಶೀರ್ವಾದ ನನ್ನ ಮೇಲೂ, ಶಂಭುನಾಥರ ಮೇಲೂ ಇರಲೆಂದು ಹಾರೈಸುತ್ತೇನೆ."

ಶಂಭು ತನ್ನ ಅಧ್ಯಕ್ಷರ ಭಾಷಣದಲ್ಲಿ ದಾಮೋದರನನ್ನು ಬಾಯಿ ತುಂಬ ಕೊಂಡಾಡಿ, ರಾಜ್ಯದ ಹಿತ ದೃಷ್ಟಿಯಿಂದ ಅವನು ಪಕ್ಷದ ನಾಯಕನಾಗುವುದು ಅತ್ಯಾವಶ್ಯಕವೆಂದು ನುಡಿದನು. ದಾಮೋದರನನ್ನು ಹಲವರು ಹೊಗಳಿದ್ದುದನ್ನೂ, ಕೆಲವರು ಅವನನ್ನು

ದೇವರಂತೆ ಕಂಡಿದ್ದುದನ್ನೂ ನೋಡಿದ, ಹಳ್ಳಿಗಾಡು ಪ್ರದೇಶಗಳಿಂದ ಚುನಾಯಿತರಾಗಿದ್ದ ಶಾಸಕರಿಗೆ ಅವನು ರಾಜ್ಯದ ಏಕೈಕ ನಾಯಕನೆಂದು ಭಾವನೆ ಮೂಡಿದ್ದು ಆಶ್ಚರ್ಯವೇನೂ ಆಗಿರಲಿಲ್ಲ. ಅಂದಿನ ವಾತಾವರಣವು ದುರ್ಗಾದಾಸರ ಬೆಂಬಲಿರಾಗಿದ್ದ ಶಾಸಕರ ಮನಸ್ಸಿನ ಮೇಲೂ ಸಾಕಾದಷ್ಟು ವಿರೋಧ ಪರಿಣಾಮವನ್ನುಂಟುಮಾಡಿತ್ತು. ಆ ವಾತಾವರಣವನ್ನು ನೋಡಿದ್ದ ಅವರಿಗೆ ದುರ್ಗಾದಾಸರಿಗೆ ಬಹುಮತವಿಲ್ಲವೆಂಬ ಭಾವನೆ ಸಹಜವಾಗಿ ಉದ್ಭವಿಸಿತು.

ಮರುದಿನ ಕಾಂಗ್ರೆಸ್ ಪಕ್ಷದ ಸಭೆ ಸೇರಿತು. ಕೆಲವರು ಶಾಸಕರು ದುರ್ಗಾದಾಸರ ಹೆಸರನ್ನು ನಾಯಕ ಸ್ಥಾನಕ್ಕೆ ಸೂಚಿಸಬೇಕೆಂದು ಯೋಚಿಸುತ್ತಿದ್ದರು. ಆದರೆ ಅವರು ಯೋಚಿಸುತ್ತಿರುವಷ್ಟರಲ್ಲಿಯೇ, ಕೆಮ್ಮಿರನೆದ್ದು ದಾಮೋದರನನ್ನು ಒಮ್ಮತದಿಂದ ಪಕ್ಷದ ನಾಯಕನನ್ನಾಗಿ ಆರಿಸಬೇಕೆಂಬ ಸೂಚನೆಯನ್ನು ಮಂಡಿಸಿದನು. ಆ ತಕ್ಷಣ ದಾಮೋದರನ ಬಾಲ ಬಡುಕರಾದ ಹೆಮ್ಮಿರ, ಜಲೋದರ ಗಾಂಢೀವ ಮುಂತಾದವರು, “ಆಗಬಹುದು, ಆಗಬಹುದು,” ಗಟ್ಟಿಯಾಗಿ ಅರಚಿ, ಚಪ್ಪಾಳೆಯನ್ನು ತಟ್ಟಿದರು. ಅವರ ಆರ್ಭಟವನ್ನು ನೋಡಿದ ದುರ್ಗಾದಾಸರ ಬೆಂಬಲಿಗರು ಮಾತನಾಡದೆ ತೆಪ್ಪಗಾದರು. ಉಳಿದ ಸದಸ್ಯರು ಕೆಮ್ಮಿರನ ಸೂಚನೆಯ ಪರವಾಗಿ ಚಪ್ಪಾಳೆಯನ್ನೂ ಹೊಡೆಯಲಿಲ್ಲ. ಸೂಚನೆಗೆ ವಿರೋಧವಾಗಿ ಮಾತನಾಡಲು ಇಲ್ಲ.

ಅಷ್ಟರಲ್ಲಿಯೇ, ದಾಮೋದರನು ಸರ್ವಾನುಮತದಿಂದ ಪಕ್ಷದ ನಾಯಕನಾದನೆಂದು ಹೆಮ್ಮಿರ ಮುಂತಾದವರು ಕೇಕೆ ಹಾಕಿದರು. ಯಾರೂ ಯಾವ ಮಾತನ್ನೂ ಆಡಲಿಲ್ಲ. ಮೊದಲೇ ಸಿದ್ಧತೆ ಮಾಡಿಕೊಂಡಂತೆ ದಾಮೋದರನ ಭಕ್ತರು ಜಯಕಾರವನ್ನು ಹಾಕಿ ಹಾರ ತುರಾಯಿಗಳನ್ನು ಅವನಿಗೆ ಅರ್ಪಿಸಿದರು. ಅಂತೂ ಕಳ್ಳ ವ್ಯಾಪಾರಿ ಎಂದು ನಾಮಾಂಕಿತವನ್ನು ಪಡೆದಿದ್ದ ಕಳ್ಳರ ಗುರು ರಾಜ್ಯದ ಮುಖ್ಯಮಂತ್ರಿಯಾದನು. ಬಹುಶಃ ದುರ್ಗಾದಾಸರ ಹೆಸರನ್ನು ಸಭೆಯಲ್ಲಿ ಸೂಚಿಸಿದ್ದರೆ ಅವರಿಗೂ ದಾಮೋದರನಿಗೂ ಸರಿಸಮ ಸ್ಪರ್ಧೆ ನಡೆಯುತ್ತಿತ್ತು. ಆದರೆ ದಾಮೋದರನ ಕಡೆಯವರು ಸ್ಪರ್ಧೆಗೆ ಅವಕಾಶ ಕೊಡದೆ ಆರ್ಭಟದಿಂದಲೇ ಚುನಾವಣೆಯಲ್ಲಿ ಗೆದ್ದರು.

ಮರುದಿನ ಎಲ್ಲಾ ವೃತ್ತ ಪತ್ರಿಕೆಗಳಲ್ಲಿಯೂ ದಾಮೋದರನ ಭಾವ ಚಿತ್ರವೂ, ಅವನ ಸಂಕ್ಷಿಪ್ತ ಜೀವನ ಚರಿತ್ರೆಯೂ ಪ್ರಕಟಿಸಲ್ಪಟ್ಟಿದ್ದುವು. ಕೆಲವು ಪತ್ರಿಕೆಗಳಲ್ಲಿ ಅವನನ್ನು ಅತ್ಯಂತ ಜನಾನುರಾಗಿಯೆಂದು ಅಪ್ರತಿಮ ದೇಶಭಕ್ತನೆಂದೂ, ಬಹಳ ದಕ್ಷನೆಂದೂ ದಪ್ಪ ದಪ್ಪ ಅಕ್ಷರಗಳಲ್ಲಿ ಹೊಗಳಲಾಗಿತ್ತು. ಕಾಳಸಂತೆಯ ಖದೀಮನೊಬ್ಬನು ರಾಜ್ಯದ ಮುಖ್ಯಮಂತ್ರಿಯಾದನೆಂದು ಜನಸಾಮಾನ್ಯರು ಗೊಣಗಾಡಿದರು. ಆದರೆ ಅವರ ಗೊಣಗಾಟದಿಂದ ದಾಮೋದರನಿಗೆ ಯಾವ ತೊಂದರೆಯೂ ಆಗುವಂತಿರಲಿಲ್ಲ. ಅವನು ಗೊಣಗಾಡುವವರ ಹಿಡಿತಕ್ಕೆ ಸಿಕ್ಕದಿರುವಷ್ಟು ಮೇಲೇರಿದ್ದನು.

ಒಮ್ಮತದಿಂದ ನಾಯಕನಾಗಿ ಆರಿಸಲ್ಪಟ್ಟಿದ್ದರೂ ದಾಮೋದರನಿಗೆ ಭಯ ತಪ್ಪಿರಲಿಲ್ಲ. ಒಮ್ಮತದ ಅಭಿಪ್ರಾಯ ಅಶಾಶ್ವತವೆಂಬುದನ್ನು ಕುಶಾಗ್ರಮತಿಯಾದ ಅವನು

ಮನಗಂಡಿದ್ದನು. ದುರ್ಗಾದಾಸರೂ, ಅಮರ್‌ಚಂದರೂ ಶಾಸನ ಸಭೆಯ ಸದಸ್ಯರಾಗಿ ಆರಿಸಿ ಬಂದಿದ್ದು ಅವನಿಗೆ ಅಳ್ಳೆಯಲ್ಲಿ ಹೊಕ್ಕ ಮುಳ್ಳಿನಂತಾಗಿತ್ತು. ಅವರಿಬ್ಬರೂ ಸೇರಿ ತನ್ನ ನಾಯಕತ್ವದ ತಕ್ಕಡಿಯನ್ನು ಎಂದಾದರೊಂದು ದಿನ ಏರು ಪೇರು ಮಾಡಬಹುದೆಂಬ ಹೆದರಿಕೆ ಅವನನ್ನು ಬಾಧಿಸುತ್ತಿತ್ತು. ಆದ್ದರಿಂದ ಕಾಂಗ್ರೆಸ್ ಪಕ್ಷದಲ್ಲಿ ಸದಾ ತನ್ನ ಪರವಾಗಿ ಖಚಿತ ಬಹುಮತವಿರುವಂತೆ ಮಾಡುವುದಕ್ಕಾಗಿ, ಮಂತ್ರಿಗಳೂ, ಉಪಮಂತ್ರಿಗಳೂ, ಪಾರ್ಲಿಮೆಂಟರಿ ಸೆಕ್ರೆಟರಿಗಳೂ ಸೇರಿ, ಒಟ್ಟು ಐವತ್ತು ಜನರನ್ನೊಳಗೊಂಡ ಒಂದು ಅಭೇದ್ಯವಾದ ಮಂತ್ರಿಮಂಡಲವನ್ನು ರಚಿಸಿದನು. ಶಂಭುವು ಚುನಾವಣೆಯಲ್ಲಿ ಸೋತು, ಠೇವಣಿಯನ್ನು ಕಳೆದುಕೊಂಡಿದ್ದರೂ, ದಾಮೋದರನು ಅವನನ್ನು ಮೇಲ್ಮನೆಗೆ ನಾಮಕರಣಮಾಡಿ ಮಂತ್ರಿಯಾಗಿ ನೇಮಿಸಿದ್ದಲ್ಲದೆ, ಅವನಿಗೆ ಸಚಿವ ಸಂಪುಟದಲ್ಲಿ ದ್ವಿತೀಯ ಸ್ಥಾನವನ್ನು ಕೊಟ್ಟನು.

* * * *

ದಾಮೋದರನ ಮಂತ್ರಿಮಂಡಲವು ಅಧಿಕಾರಕ್ಕೆ ಬಂದ ಒಂದು ತಿಂಗಳೊಳಗಾಗಿ, ಸರ್ಕಾರದ ಹಲವು ಇಲಾಖೆಗಳಲ್ಲಿ ಹಲವು ಬದಲಾವಣೆಗಳಾಗಿದ್ದುವು. ದುರ್ಗಾದಾಸರಿಗೆ ಅಪ್ತರೆನಿಸಿಕೊಂಡಿದ್ದ ಅಧಿಕಾರಿಗಳೆಲ್ಲರನ್ನೂ ಅಪ್ರಯೋಜಕ ಸ್ಥಾನಗಳಿಗೆ ಅಥವಾ ದೂರದ ಜಿಲ್ಲೆಗಳಿಗೆ ವರ್ಗಮಾಡಿದರು. ಶಂಭು ದಾಮೋದರರು ಆಪ್ತರಾಗಿದ್ದ ಅಥವಾ ತಮ್ಮ ಜಾತಿಗೆ ಸೇರಿದ್ದ ಅಧಿಕಾರಿಗಳನ್ನು ವಿವಿಧ ಇಲಾಖೆಗಳಲ್ಲಿ ಆಯಕಟ್ಟಿನ ಸ್ಥಾನಗಳಿಗೆ ನೇಮಿಸಿಕೊಂಡಿದ್ದರು. ಸೂಪರಿಂಟೆಂಡಿಂಗ್ ಇಂಜಿನಿಯರ್ ಆನಂದನ ಮೇಲೆ ಹೊರಿಸಿದ್ದ ಆಪಾದನೆಗಳು ನಿರಾಧಾರವಾದುವೆಂದು ತೀರ್ಮಾನ ಮಾಡಿ, ಅವನನ್ನು ಚೀಫ್ ಇಂಜಿನಿಯರ್ ಆಗಿ ನೇಮಕ ಮಾಡಿದರು. ಪೋಲಿಸ್ ಇನ್‌ಸ್ಪೆಕ್ಟರ್ ಜನರಲ್ ರವೀಂದ್ರನಾಥರನ್ನೂ, ಡೆಪ್ಯೂಟಿ ಪೋಲಿಸ್ ಸೂಪರಿಂಟೆಂಡೆಂಟ್ ಯತೀಂದ್ರನಾಥರನ್ನೂ, ಕೇಂದ್ರ ಸರ್ಕಾರದ ಸೇವೆಗಾಗಿ ಎರವಲು ಕಳುಹಿಸಿಕೊಟ್ಟರು.

ತಮಗಾಪ್ತರಾದ ಅಧಿಕಾರಿಯೊಬ್ಬನನ್ನು ಪೊಲೀಸ್ ಇನ್ಸ್ಪೆಕ್ಟರ್ ಜನರಲ್ ಆಗಿ ನೇಮಕ ಮಾಡಿದರು. ಉಮಾನಾಥನೆಂಬ ಪೊಲೀಸ್ ಅಧಿಕಾರಿಯನ್ನು ನಿಂಬೂರು ಜಿಲ್ಲೆಯ ಪೊಲೀಸ್ ಸೂಪರಿಂಟೆಂಡೆಂಟ್ ಆಗಿ ನೇಮಕ ಮಾಡಿದರು. ದುರ್ಗಾದಾಸರ ಕಾಲದಲ್ಲಿ ಆ ಪೊಲೀಸ್ ಅಧಿಕಾರಿಯನ್ನು ಅಂತ್ಯದಲ್ಲಿ ಲಂಚದ ಆಪಾದನೆಯಮೇಲೆ ವಿಚಾರಣೆಗೆ ಗುರಿಪಡಿಸಿ, ವಿಚಾರಣೆಯ ಸೂಪರಿಂಟೆಂಡೆಂಟ್ ಆಗಿದ್ದ ಅವನನ್ನು ಇನ್‌ಸ್ಪೆಕ್ಟರ್ ಆಗಿ ನೇಮಕ ಮಾಡಿದ್ದರು. ದಾಮೋದರನ ಮಂತ್ರಿಮಂಡಲ ಅಧಿಕಾರಕ್ಕೆ ಬಂದೊಡನೆ ಅವನಿಗೆ ವಿಧಿಸಿದ್ದ ಶಿಕ್ಷೆಯನ್ನು ರದ್ದುಮಾಡಿ, ಅವನನ್ನು ಪುನಃ ಸೂಪರಿಂಟೆಂಡೆಂಟ್ ಹುದ್ದೆಗೇರಿಸಿ, ನಿಂಬೂರು ಜಿಲ್ಲಾ ಪೊಲೀಸ್ ಸೂಪರಿಂಟೆಂಡೆಂಟ್ ಆಗಿ ನೇಮಕ ಮಾಡಿದರು.

ದುರ್ಗಾದಾಸರ ದೂರದ ಬಂಧುವಾಗಿದ್ದ ಶಾಮಸುಂದರನೆಂಬ ಅಧಿಕಾರಿಯನ್ನು ನಿಂಬೂರು ಜಿಲ್ಲೆಯ ಜಿಲ್ಲಾಧಿಕಾರಿಯಾಗಿ ವರ್ಗಮಾಡಿದರು. ಶಾಮಸುಂದರನು

ದುರ್ಗಾದಾಸರ ಸಹಾಯದಿಂದ ಸರ್ಕಾರಿ ನೌಕರಿಯನ್ನು ಪಡೆದವನು. ದಾಸರು ಮುಖ್ಯಮಂತ್ರಿಯಾಗಿದ್ದಾಗ ತನಗೆ ಅಕ್ರಮ ಬಡ್ತಿಯನ್ನು ನೀಡಬೇಕೆಂದು ಅವನು ಅವರನ್ನು ಹಲವು ಬಾರಿ ಅಂಗಲಾಚಿ ಬೇಡಿಕೊಂಡಿದ್ದನು. ಆದರೆ ದಾಸರು ಅವನ ಅಕ್ರಮ ಕೋರಿಕೆಯನ್ನು ತಿರಸ್ಕರಿಸಿದ್ದರು. ಆದ್ದರಿಂದ ಅವನು ಅವರ ಮೇಲೆ ಕುಪಿತನಾಗಿದ್ದನು. ಉಮಾನಾಥನಿಗೂ ದಾಸರ ಮೇಲೆ ಅಸಮಾಧಾನವಿತ್ತು. ಇದನ್ನರಿತಿದ್ದ ಶಂಭು ಅವರಿಂದ ದಾಸರಿಗೆ ಕಿರುಕುಳ ಕೊಡಿಸಬೇಕೆಂಬ ದುರುದ್ದೇಶದಿಂದ ಅವರಿಬ್ಬರನ್ನೂ ನಿಂಬೂರು ಜಿಲ್ಲೆಗೆ ವರ್ಗಮಾಡಿಸಿದನು.

ನೂತನ ಸರ್ಕಾರ ಅಧಿಕಾರಕ್ಕೆ ಬಂದ ಕೂಡಲೆ ದುರ್ಗಾದಾಸರ ಮತ್ತು ಅವರ ಬೆಂಬಲಿಗರ ಕಾರ್ಯಕಲಾಪಗಳನ್ನು ಅವಲೋಕಿಸಲು ವಿಶೇಷ ಗೂಢಚಾರರನ್ನು ನೇಮಿಸಿದರು. ದುರ್ಗಾದಾಸರ ಮಂತ್ರಿಮಂಡಲವು ಅಧಿಕಾರದಲ್ಲಿದ್ದಾಗ ಮಾಡಿದ್ದ ಸರ್ಕಾರಿ ಆಜ್ಞೆಗಳೆಲ್ಲವನ್ನು ಪರಿಶೀಲಿಸಿ, ಕಾನೂನಿಗೆ ವಿರುದ್ಧವಾಗಿ, ಅಥವಾ ತಮ್ಮ ಬಂಧು ಬಾಂಧವರಿಗೆ ಸಹಾಯ ಮಾಡುವ ಉದ್ದೇಶದಿಂದ, ಮಾಡಿದ್ದ ಆಜ್ಞೆಗಳೆಲ್ಲವನ್ನೂ ಸಂಗ್ರಹಿಸಿ ಸರ್ಕಾರಕ್ಕೆ ವರದಿಯನ್ನೊಪ್ಪಿಸಬೇಕೆಂದು ಒಬ್ಬ ವಿಶೇಷ ಅಧಿಕಾರಿಯನ್ನು ನೇಮಕ ಮಾಡಲಾಯಿತು. ದುರ್ಗಾದಾಸರ ಮಂತ್ರಿಮಂಡಲವು ಅಕ್ರಮ ನಡವಳಿಕೆಗಳನ್ನು ನಡೆಯಿಸಿದ್ದರೆ, ಅವುಗಳನ್ನು ಬಹಿರಂಗಪಡಿಸಿ ದುರ್ಗಾದಾಸರ ಕೀರ್ತಿಗೆ ಕಳಂಕ ಬರುವಂತೆ ಮಾಡಬೇಕೆಂಬುದೇ ಆ ವಿಶೇಷ ಅಧಿಕಾರಿಯ ನೇಮಕದ ಉದ್ದೇಶವಾಗಿತ್ತು.

ದುರ್ಗಾದಾಸರು ಲಂಚ ರುಸುವತ್ತುಗಳಿಂದಲೂ, ಅನೀತಿ ಅಕ್ರಮಗಳಿಂದಲೂ, ಚುನಾವಣೆಯಲ್ಲಿ ಗೆದ್ದು ಬಂದಿದ್ದಾರೆಂದು ಆರೋಪಿಸಿ, ಅವರ ಚುನಾವಣೆಯನ್ನು ರದ್ದು ಮಾಡಬೇಕೆಂದು, ಶಂಭುವಿನ ಶಿಷ್ಯನೊಬ್ಬನು ದುರ್ಗಾದಾಸರ ಮತ್ತು ಅವರ ಬೆಂಬಲಿಗರ ಪ್ರಭಾವವನ್ನು ತಗ್ಗಿಸುವ ಸಲುವಾಗಿ, ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕೆಂದು ಶಂಭು ದಾಮೋದರರು ತಮಗಾಪ್ತರಾಗಿದ್ದ ಅಧಿಕಾರಿಗಳಿಗೆ ಆಗಾಗ ಸೂಚನೆ ಕೊಡುತ್ತಿದ್ದರು.

* * * *

ಅಧಿಕಾರದಿಂದ ನಿವೃತ್ತರಾದ ಮೇಲೆ, ದುರ್ಗಾದಾಸರು ಕಾಲೇಜಿನಲ್ಲಿ ಓದುತ್ತಿದ್ದ ತಮ್ಮ ಏಕಮಾತ್ರ ಪುತ್ರ ಜಯಸಿಂಹನನ್ನು ರಾಜಧಾನಿಯ ಒಂದು ವಿಧ್ಯಾರ್ಥಿ ನಿಲಯಕ್ಕೆ ಬಿಟ್ಟು, ತಮ್ಮ ಪತ್ನಿ ನಿರ್ಮಲಾದೇವಿಯವರೊಡನೆ ಮತ್ತು ಪುತ್ರಿ ಚಂಚಲೆಯೊಡನೆ ನಿಂಬೂರಿಗೆ ಹೋಗಿ ನೆಲಸಿದರು. ದುರ್ಗಾದಾಸರಿಗೆ ನಿಂಬೂರಿನಲ್ಲಿದ್ದ ವಾಸದಮನೆ ಮತ್ತು ಜಿತ್ರೇಂದ್ರಪುರದಲ್ಲಿದ್ದ ಏಳೆಂಟು ಎಕರೆ ಭೂಮಿ ವಿನಹ, ಇನ್ನಾವ ಆಸ್ತಿಯ ಇರಲಿಲ್ಲ. ಭೂಮಿಯಿಂದ ಬರುತ್ತಿದ್ದ ವರಮಾನದಿಂದಲೇ ಅವರು ಜೀವನವನ್ನು ಸಾಗಿಸಬೇಕಾಗಿತ್ತು. ನಿಂಬೂರಿನಲ್ಲಿದ್ದ ಮನೆಯನ್ನು ಕೆಲವು ವರ್ಷಗಳ ಹಿಂದೆ ನಿಂಬೂರಿನ ಸಾಹುಕಾರ್ ಮದನಮೋಹನನಿಗೆ ಸಾಲಕ್ಕಾಗಿ ಆಧಾರಮಾಡಿದ್ದರು. ಇಷ್ಟು ತೊಂದರೆಯಲ್ಲಿದ್ದರೂ, ಅವರ ರಾಜಕೀಯ ವೈರಿಗಳು ಮಾತ್ರ, ಅವರು

ಮುಖ್ಯಮಂತ್ರಿಯಾಗಿದ್ದಾಗ ಹೇರಳವಾಗಿ ಅಕ್ರಮ ಸಂಪಾದನೆ ಮಾಡಿದ್ದರೆಂದೂ, ತೋರುಗಾಣಿಕೆಗಾಗಿ ಬಡತನದ ಸೋಗು ಹಾಕಿದ್ದಾರೆಂದೂ ಅಪಪ್ರಚಾರ ಮಾಡುತ್ತಿದ್ದರು.

ದುರ್ಗಾದಾಸರು ಅಧಿಕಾರದಲ್ಲಿಲ್ಲದಿದ್ದರೂ, ಜನಸಾಮಾನ್ಯರು ಅವರನ್ನು ಮಹಾತ್ಮರಂತೆ ಕಾಣುತ್ತಿದ್ದರು. ಅವರು ಹೋದೆಡೆಗಳಲಲ್ಲಾ ಜನರು ತಂಡೋಪತಂಡಗಳಲ್ಲಿ ಬಂದು, ಅವರಿಗೆ ಭಕ್ತಿಪೂರ್ವಕ ಗೌರವಗಳನ್ನು ಸಲ್ಲಿಸುತ್ತಿದ್ದರು. ದಾಸರು ಮನಸ್ಸು ಮಾಡಿದ್ದರೆ, ಅಂದಿದ್ದ ವಾತಾವರಣದಲ್ಲಿ ಹೊಸ ಮಂತ್ರಿಮಂಡಲದ ಮೇಲೆ ಜನರು ದಂಗೆ ಏಳುವಂತೆ ಮಾಡಬಹುದಾಗಿತ್ತು. ರಾಜ್ಯದ ಜನರು ಶಂಭು ದಾಮೋದರರರನ್ನು ತಮ್ಮ ನಾಯಕರೆಂದು ಎಂದೂ ಪರಿಗಣಿಸಿರಲಿಲ್ಲ. ಜನರು ಹಾದಿ ಬೀದಿಗಳಲ್ಲಿ ಬಾಯಿಗೆ ಬಂದಂತೆ ಅವರಿಬ್ಬರನ್ನೂ ಬಯ್ಯುತ್ತಿದ್ದರು.

ಜನಸಾಮಾನ್ಯರ ಮೇಲೆ ದುರ್ಗಾದಾಸರ ಪ್ರಭಾವ ಉಳಿದಿರುವವರೆಗೆ ತಮ್ಮಿಬ್ಬರ ಮುಖಂಡತ್ವವನ್ನು ಜನರು ಒಪ್ಪುವುದಿಲ್ಲವೆಂಬುದನ್ನು ಶಂಭು ದಾಮೋದರರು ಚೆನ್ನಾಗಿ ಅರಿತಿದ್ದರು. ಆದ್ದರಿಂದ ಹೇಗಾದರೂ ಮಾಡಿ ದುರ್ಗಾದಾಸರ ಪ್ರಭಾವವನ್ನು ನಿರ್ಮೂಲ ಮಾಡಬೇಕೆಂದು ಅವರಿಬ್ಬರು ನಿರ್ಧರಿಸಿದರು. ಸಾಧ್ಯವಾದರೆ ದಾಸರು ತಮಗೆ ಶರಣಾಗತರಾಗುವಂತೆ ಮಾಡಬೇಕೆಂದೂ, ಅದು ಸಾಧ್ಯವಾಗದಿದ್ದಲ್ಲಿ ವಿವಿಧ ಕಿರುಕುಳಗಳಿಂದ ಅವರಾಗಿಯೇ ರಾಜಕೀಯವನ್ನು ತ್ಯಜಿಸುವಂತೆ ಮಾಡಬೇಕೆಂದೂ, ಅವರೀರ್ವರೂ ವಿವಿಧ ಹಂಚಿಕೆಗಳಲ್ಲಿ ತೊಡಗಿದರು.

ದಾಸರು ತಮ್ಮ ಮೇಲೆ ಹೂಡಿದ್ದ ಚುನಾವಣೆಯ ಮೊಕದ್ದಮೆಗೆ ಹೆದರಿ ಅಥವಾ ತಮ್ಮ ಜೀವನೋಪಾಯಕ್ಕಾಗಿ, ಶರಣಾಗತರಾಗಿ ತಮ್ಮ ಆಶ್ರಯವನ್ನು ಪಡೆಯಬಹುದೆಂಬ ಆಸೆಯಿಂದ ಶಂಭು ದಾಮೋದರರು ಕಾದಿದ್ದರು. ಅಧಿಕಾರಕ್ಕೆ ಬಂದ ಎರಡು ತಿಂಗಳ ತರುವಾಯ, ದಾಸರ ನಾಡಿ ಹೇಗೆ ಮಿಡಿಯುತ್ತಿದೆ ಎಂಬುದನ್ನು ತಿಳಿದುಕೊಳ್ಳುವ ಸಲುವಾಗಿ, ಅವರು ತಮ್ಮ ಆಪ್ತನೊಬ್ಬನನ್ನು ನಿಂಬೂರಿಗೆ ಕಳುಹಿಸಿಕೊಟ್ಟರು. ಆ ವ್ಯಕ್ತಿಯು ದುರ್ಗಾದಾಸರ ಮನೆಗೆ ಹೋಗಿ, ಅವರ ಹಿತೈಷಿಯಂತೆ ನಟಿಸಿ, ಅವರು ಕಷ್ಟದಿಂದ ಜೀವನ ಸಾಗಿಸುತ್ತಿದ್ದುದನ್ನು ಕಂಡು ಅಪಾರ ಅನುತಾಪಪಟ್ಟಂತೆ ಅಭಿನಯಿಸಿ, ಅವರೊಪ್ಪಿದರೆ ಶಂಭು ದಾಮೋದರರಿಗೆ ಹೇಳಿ ಅವರಿಂದ ಮಾಹೆಯಾನ ಎರಡು ಸಾವಿರ ರೂಪಾಯಿಗಳ ವರಮಾನ ದೊರಕುವಂತಹ ಯಾವುದಾದರೊಂದು ಅಧ್ಯಕ್ಷ ಪದವಿಯನ್ನು ಕೊಡಿಸಿ ಕೊಡಬಹುದೆಂದು ಸೂಕ್ಷ್ಮವಾಗಿ ಪ್ರಸ್ತಾಪಿಸಿದರು. ದುಷ್ಟರ ಭೃತ್ಯನಾಗಿ ಬಾಳುವುದಕ್ಕಿಂತ ಬಡತನದ ಬವಣೆಯಲ್ಲಿ ನರಳುವುದೇ ಲೇಸೆಂದು ದುರ್ಗಾದಾಸರು ಉತ್ತರ ನೀಡಿದರು.

ದಾಸರು ತಮಗೆ ಶರಣಾಗುವುದಿಲ್ಲವೆಂದು ಮನಗಂಡ ಮೇಲೆ, ಅವರನ್ನು ಹೇಗಾದರೂ ಹಣ್ಣು ಮಾಡಿ ಮೂಲೆಗೆ ಸೇರಿಸಬೇಕೆಂದು, ದುಷ್ಟ ಶಿಖಾಮಣಿಗಳು ಸಂಕಲ್ಪಮಾಡಿದರು. ದಾಸರ ಅನುಭವದಿಂದ ಬಾಳು ನರಕಮಯವಾಗುವಂತೆ ಮಾಡಿ, ತಾವಾಗಿಯೇ ರಾಜಕಾರಣದಿಂದ ನಿವೃತ್ತರಾಗುವಂತೆ ಮಾಡಬೇಕೆಂದೇ, ಶಂಭು

ದಾಮೋದರರ ಗುರಿಯಾಗಿತ್ತು. ತಮ್ಮ ಗುರಿಯನ್ನು ಸಾಧಿಸುವುದಕ್ಕಾಗಿ ಆ ನೀಚರು ಶಿರೋಮಣಿ ದುರ್ಗಾದಾಸರ ಮೇಲೆ ವಿವಿಧಾಸ್ತ್ರಗಳನ್ನು ಪ್ರಯೋಗಿಸಲಾರಂಭಿಸಿದರು.

ಹೊಸ ಮಂತ್ರಿಮಂಡಲವು ರಚನೆಯಾಗಿ ಆರು ತಿಂಗಳಾಗಿತ್ತು. ಈ ಆರು ತಿಂಗಳ ಅವಧಿಯಲ್ಲಿ ರಾಜ್ಯದ ರಾಜಕೀಯ ವಾತಾವರಣವು ಬಹಳ ಪರಿವರ್ತನೆಗೊಂಡಿತ್ತು. ದುರ್ಗಾದಾಸರು ಮುಖ್ಯಮಂತ್ರಿಯಾಗಿದ್ದಾಗ ಅವರ ಶಿಷ್ಯರಂತೆ, ಅವರ ಆತ್ಮೀಯರಂತೆ ಅವರು ಅನುವರ್ತಿಗಳಂತೆ ಅಭಿನಯಿಸಿ ಅವರ ಬಳಿ ಸುಳಿದಾಡುತ್ತಿದ್ದ ಜನರಲ್ಲಿ ಅನೇಕರು ತಮ್ಮ ನಿಲುವು ಒಲವುಗಳನ್ನು ಬದಲಾಯಿಸಿ, ಶಂಭು ದಾಮೋದರರ ಅನುವರ್ತಿಗಳಾಗಿದ್ದರು.

ದಾಸರು ಮುಖ್ಯಮಂತ್ರಿಯಾಗಿದ್ದಾಗ, ಯಾವುದೋ ಬಾದರಾಯಣ ಸಂಬಂಧ ವನ್ನು ಕಲ್ಪಿಸಿಕೊಂಡು, ದಾಸರ ಮನೆಯಲ್ಲಿ ಕವಳವನ್ನು ಕತ್ತರಿಸಿ ತಾವು ಮುಖ್ಯಮಂತ್ರಿಗಳ ಬಂಧುಗಳೆಂದು ಸಾರಿಕೊಂಡು ಅಧಿಕಾರಿಗಳನ್ನು ಹೆದರಿಸಿ, ಅವರಿಂದ ಸಹಾಯ ಸವಲತ್ತುಗಳನ್ನು ಪಡೆಯುತ್ತಿದ್ದ ಜನರೂ ಸಹ ದಾಸರಿಂದ ದೂರ ಸರಿದಿದ್ದರು. ಹಿಂದೆ ವಾರಕೊಮ್ಮೆ ಮುಖ್ಯಮಂತ್ರಿಗಳ ಕ್ಷೇಮ ಸಮಾಚಾರ ವಿಚಾರಿಸುವ ನೆಪದಲ್ಲಿ ಬರುತ್ತಿದ್ದ ಖಾಸಗಿ ಜನರೂ ಅಧಿಕಾರಿಗಳೂ ಕಂಡರೂ ಕಾಣದವರಂತೆ, ಓಡಾಡುತ್ತಿದ್ದರು. ಕೆಲವರು ದುರ್ಗಾದಾಸರನ್ನು ನೋಡಬೇಕೆಂಬ ಆಸೆಯುಳ್ಳವರಾಗಿದ್ದರೂ, ಹೊಸ ಸರ್ಕಾರವು ತಮ್ಮ ಮೇಲೆ ಕಣ್ಣಿಡಬಹುದೆಂಬ ಹೆದರಿಕೆಯಿಂದ ದಾಸರ ಮನೆಗೆ ಹೋಗಲು ಹಿಂಜರಿಯುತ್ತಿದ್ದರು.

ದಾಮೋದರ ಅಧಿಕಾರವನ್ನು ಸ್ವೀಕರಿಸಿದ ಮರುದಿನ ಒಂದು ಸ್ವಾರಸ್ಯ ಪ್ರಸಂಗ ಜರುಗಿತ್ತು. ಪಟವಾರನೂ, ಮಹೋದರನೂ ಆ ದಿನ ದುರ್ಗಾದಾಸರ ಮನೆಗೆ ಉದ್ದೇಶ ಪೂರ್ವಕವಾಗಿಯೇ ಹೋಗಿದ್ದರು. ಅವರಿಬ್ಬರೂ ದಾಮೋದರನ ಮನೆಗೆ ಬಲಗೈ ಭಂಡಾರಿ ಗಳೆಂಬುದನ್ನು ದುರ್ಗಾದಾಸರು ಅರಿತಿದ್ದರು. ಅವರು ತಮ್ಮ ಮನೆಗೆ ಬಂದಿರುವುದನ್ನು ಕಂಡು ದಾಸರು ಆಚ್ಚರಿಗೊಂಡರು. ಅವರಿಬ್ಬರನ್ನೂ ವಿನಯದಿಂದ ಬರಮಾಡಿಕೊಂಡು,

"ಏನು ತಾವಿಬ್ಬರೂ ದಯಾಮಾಡಿಸಿದಿರಿ," ಎಂದು ಪ್ರಶ್ನಿಸಿದರು.

"ನಿಮಗೆ ನಮ್ಮ ಅನುತಾಪಗಳನ್ನು ಸೂಚಿಸಲು ಬಂದಿದ್ದೇವೆ. ನೀವು ಈ ದುಸ್ಥಿತಿಗೆ ಬಂದಿದ್ದು ಬಹಳ ವಿಷಾದಕರ. ನೀವು ನಮ್ಮಂತಹವರನ್ನು ಸರಿಯಾಗಿ ನೋಡಿ ನಡೆದುಕೊಂಡಿದ್ದರೆ, ನಿಮಗೆ ಈ ದುಸ್ಥಿತಿ ಬರುತ್ತಿರಲಿಲ್ಲ." ಎಂದು ಮೂದಲಿಸಿ ಮಾತನಾಡಿದನು.

"ನನಗಾವ ದುಸ್ಥಿತಿಯೂ ಬಂದಿಲ್ಲವಲ್ಲಾ ನೀವು ನನಗಾಗಿ ಪರಿತಪಿಸಬೇಕಾಗಿಲ್ಲ," ಎಂದು ದಾಸರು ಗಂಭೀರವಾಗಿ ಉತ್ತರ ಕೊಟ್ಟರು.

ದಾಸರ ಬಂಧುಗಳಲ್ಲಿ ಕೆಲವರಿಗೆ, ತಮ್ಮ ಬೆಂಬಲವಿಲ್ಲದಿದ್ದರೆ ದಾಸರು ಮುಖ್ಯ ಮಂತ್ರಿಗಳಾಗುತ್ತಿರಲಿಲ್ಲವೆಂಬ ಭಾವನೆ ಬೆಳೆದಿತ್ತು. ದಾಸರು ಮುಖ್ಯಮಂತ್ರಿಯಾದೊಡನೆ ಅವರು ತಮ್ಮ ತಾಳಕ್ಕೆ ಸರಿಯಾಗಿ ಕುಣಿಯುತ್ತಾರೆಂಬ ಭ್ರಾಂತಿಯನ್ನು ಆ ಬಂಧುಗಳು

ತಾಳಿದ್ದರು. ಆದರೆ ದಾಸರು ಅವರ ತಾಳಕ್ಕೆ ಸರಿಯಾಗಿ ಕುಣಿದಿರಲಿಲ್ಲ. ಆ ಕಾರಣದಿಂದ ಕುಪಿತರಾಗಿದ್ದ ಆ ಬಂಧುಗಳು, ದಾಸರಿಂದ ತಮಗೆ ಸಿಕ್ಕದಿದ್ದದ್ದು ಶಂಭು ದಾಮೋದರರಿಂದ ಸಿಗಬಹುದೆಂಬ ಆಶೆಯಿಂದ ಅವರಿಬ್ಬರನ್ನೂ ಆಶ್ರಯಿಸಿ, ದಾಸರ ಮೇಲೆ ಪಿತೂರಿಯನ್ನು ನಡೆಯಿಸುತ್ತಿದ್ದರು.

ಅಧಿಕಾರದಲ್ಲಿದ್ದವರನ್ನು ಹೊಗಳಿ, ಅವರೆದುರಿಗೆ ಅವರಿಗಾಗದವರನ್ನು ತೆಗಳಿ, ಆ ಮೂಲಕ ಸ್ವಪ್ರಯೋಜನಗಳನ್ನು ಸಾಧಿಸುವುದು ಕೆಲವರ ಸ್ವಭಾವ. ಅಧಿಕಾರದಲ್ಲಿದ್ದವರ ಎಂಜಲನ್ನು ಸೇವಿಸುವುದೇ ಕೆಲವರಿಗೆ ಹಿತಕರವಾದ ಕಾರ್ಯ. ಶಂಭು ದಾಮೋದರರಿಂದ ಯಾರಿಗಾದರೂ ಏನಾದರೂ ಕೆಲಸವಾಗಬೇಕಾಗಿದ್ದರೆ, ಅವರು ಶಂಭು ದಾಮೋದರರ ಬಳಿಗೆ ಹೋಗಿ, ದುರ್ಗಾದಾಸರನ್ನು ಬೈದು ಅವರ ಬದ್ಧ ವೈರಿಗಳಂತೆ ನಟಿಸಿದರೆ ಸಾಕಾಗಿತ್ತು. ಅವರ ಕೆಲಸ ಕಾರ್ಯಗಳನ್ನು ಸುಲಭವಾಗಿ ಶಂಭು ದಾಮೋದರರು ಈಡೇರಿಸಿ ಕೊಡುತ್ತಿದ್ದರು.

ಬಡತನದ ಬೇಗೆಯಿಂದಲೂ, ಶತ್ರುಗಳ ಪಿತೂರಿಯಿಂದಲೂ ದುರ್ಗಾದಾಸರು ಬೇಸತ್ತು ಹೋಗಿದ್ದರು. ಕಷ್ಟವನ್ನೇ ಕಾಣದ ಅವರ ಪತ್ನಿ ಕುಗ್ಗಿ ಹೋಗಿದ್ದರು. ಒಂದು ದಿನ ಶಂಭು ದಾಮೋದರರ ಮಡದಿಯರಿಬ್ಬರೂ, ನಿಂಬೂರಿಗೆ ಬಂದಿದ್ದರು, ಮಹಾರಾಣಿಯರಂತೆ ಮಿರಿಮಿರಿ ಮಿಂಚುವ ವಸ್ತ್ರಾಭರಣಗಳನ್ನೂ ಧರಿಸಿ, ದೊಡ್ಡ ಎರಡು ಸರ್ಕಾರಿ ಕಾರುಗಳಲ್ಲಿ ಠೀವಿಯಿಂದ ದುರ್ಗಾದಾಸರ ಮನೆಯ ಮುಂದೆ ಬಂದಿಳಿದರು. ಅವರಿಬ್ಬರೂ ಆಗ ತಾನೇ ಫ್ಯಾಷನ್ ಪೆರೇಡಿನಿಂದ ಬಂದವರಂತೆ ಕಾಣುತ್ತಿದ್ದರು. ಅವರು ತಮ್ಮ ಬೆಡಗು ಬಿನ್ನಾಣಗಳಿಂದ ನಿರ್ಮಲಾದೇವಿಯವರ ಕಣ್ಣು ಕುಕ್ಕುವಂತೆ ಮಾಡುವುದಕ್ಕಾಗಿ ಅಲ್ಲಿಗೆ ಬಂದಿದ್ದರು. ಅವರಿಬ್ಬರೂ ಮೊಸಳೆ ಕಣ್ಣೀರಿಡುವಂತೆ "ಅಯ್ಯೋ, ಈ ಕಷ್ಟ ನಿಮಗೆ ಬರಬಾರದಾಗಿತ್ತು. ನಮ್ಮಿಂದ ಏನಾದರೂ ಸಹಾಯ ಬೇಕಿದ್ದರೆ ದಯವಿಟ್ಟು ತಿಳಿಸಿ," ಎಂದು ನುಡಿದರು. "ನಿಮ್ಮ ಸಹಾಯವೇನೂ ಅಗತ್ಯವಿಲ್ಲ." ಎಂದು ನಿರ್ಮಲಾದೇವಿಯವರು ದರ್ಪದ ಉತ್ತರ ನೀಡಿದರು. ಆ ಹೆಂಗಸರು ನಿರ್ಮಲಾದೇವಿಯವರ ಯೋಗಕ್ಷೇಮವನ್ನು ವಿಚಾರಿಸುವ ನೆಪದಲ್ಲಿ ತಮ್ಮ ಆಡಂಬರವನ್ನು ಪ್ರದರ್ಶಿಸಿ ಹೊರಟುಹೋದರು.

* * * *

ಅಂದು ನಿಂಬೂರಿನಲ್ಲಿ ಸಂಭ್ರಮದ ವಾತಾವರಣ, ನಿಂಬೂರು ಪಟ್ಟಣವು ವಿಜೃಂಭಣೆಯಿಂದ ಸಿಂಗರಿಸಲ್ಪಟ್ಟಿತ್ತು. ಪುರ ಬೀದಿಗಳು ತಳಿರುತೋರಣಗಳಿಂದ ಅಲಂಕೃತವಾಗಿದ್ದವು. ಸುಣ್ಣ ಬಣ್ಣಗಳಿಂದ ಥಳಥಳಿಸುತ್ತಿತ್ತು. ಆ ದಿನ ಸಂಜೆ ಮುಖ್ಯಮಂತ್ರಿ ದಾಮೋದರನನ್ನೂ, ಮಂತ್ರಿ ಶಂಭುವನ್ನು ಸನ್ಮಾನಿಸಲು ಸಮಾರಂಭವೊಂದು ಏರ್ಪಟ್ಟಿತ್ತು. ಅವರಿಬ್ಬರನ್ನೂ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿಸಿ, ಅನಂತರ ಅವರಿಗೆ ಪುರಭವನದಲ್ಲಿ ಮಾನಪತ್ರಗಳನ್ನು ಅರ್ಪಿಸಬೇಕೆಂದು ಗೊತ್ತಾಗಿದ್ದಿತು. ದುರ್ಗಾದಾಸರ ಕಣ್ಣು ಮುಂದೆಯೇ ಅವರಿಬ್ಬರನ್ನೂ ಮೆರೆಯಿಸಬೇಕೆಂಬ

ಉದ್ದೇಶದಿಂದ ಶಂಭುವಿನ ಭಕ್ತರೂ, ನಿಂಬೂರಿನ ಕಾಳಸಂತೆಯ ವಣಿಕರೂ ಸೇರಿ ಈ ಸಮಾರಂಭವನ್ನು ಏರ್ಪಡಿಸಿದ್ದರು.

ಮಧ್ಯಾಹ್ನ ಮೂರು ಗಂಟೆಗೆ ಸರಿಯಾಗಿ ದಾಮೋದರರನು ಶಂಭುವಿನೊಡ ಗೂಡಿ ನಿಂಬೂರಿನ ಪ್ರವಾಸಿ ಮಂದಿರದ ಮುಂದೆ ಕಾರಿನಲ್ಲಿ ಬಂದಿಳಿದನು. ಸನ್ಮಾನ ಸಮಿತಿಯ ಅಧ್ಯಕ್ಷರೂ, ಪುರಸಭೆಯ ಅಧ್ಯಕ್ಷರೂ, ಇತರ ಪ್ರಮುಖರೂ, ಅವರಿಬ್ಬರಿಗೂ ಹಾರ ತುರಾಯಿಗಳನ್ನು ಅರ್ಪಿಸಿ ಸ್ವಾಗತಿಸಿದರು. ಉಪಹಾರವಾದ ನಂತರ ತೆರೆದ ಕಾರಿನಲ್ಲಿ ಪ್ರವಾಸಿ ಮಂದಿರದಿಂದ ಅವರೀರ್ವರನ್ನೂ ಮೆರವಣಿಗೆಯಲ್ಲಿ ಕೊಂಡೊಯ್ದರು. ಮೆರವಣಿಗೆಯ ಹಿಂದೆ ಮತ್ತು ಮುಂದೆ ಶಸ್ತ್ರಸಜ್ಜಿತ ಪೋಲಿಸರ ಉಸ್ತುವಾರಿ ಅಭೇದ್ಯವಾಗಿತ್ತು. ಮೆರವಣಿಗೆಯ ಹಿಂದುಗಡೆ ಸ್ವಾಗತ ಸಮಿತಿಯವರೂ, ಕೆಲಸವಿಲ್ಲದ ಕಾಕಪೋಕರೂ ಸಾಲುಸಾಲಾಗಿ ಹೋಗುತ್ತಿದ್ದರು. ದಾರಿಯುದ್ದಕ್ಕೂ "ದಾಮೋದರರಿಗೆ ಜಯವಾಗಲಿ ; ಶಂಭುನಾಥರಿಗೆ ಜಯವಾಗಲಿ," ಎಂಬ ಜಯಕಾರವೂ ಆಕಾಶವನ್ನು ಭೇದಿಸುವಂತೆ ಮೊಳಗುತ್ತಿತ್ತು. ಶಂಭುವಿನ ಭಕ್ತರು ಉದ್ದೇಶಪೂರ್ವಕವಾಗಿಯೇ ಮೆರವಣಿಗೆ ದುರ್ಗಾದಾಸರ ಮನೆಯ ಮುಂದೆ ಸಾಗುವಂತೆ ಮಾಡಿದ್ದರು. ಮೆರವಣಿಗೆ ದಾಸರ ಮನೆಯ ಮುಂದೆ ಬಂದೊಡನೆ ದಾಮೋದರನಿಗೂ, ಶಂಭುವಿಗೂ ಜಯಕಾರದ ಮಳೆಯೇ ಸುರಿಯಿತು. ಅದೇ ಸಮಯದಲ್ಲಿ ಶಂಭುವಿನ ಭಕ್ತರು ಕೆಲವರು, "ದಾಮೋದರರಿಗೆ ಜಯವಾಗಲಿ; ದುರ್ಗಾದಾಸನಿಗೆ ಧಿಕ್ಕಾರ" ಎಂದು ಕೂಗಿದರು, ಆ ಧಿಕ್ಕಾರ ಶಬ್ದವನ್ನು ಕೇಳಿದೊಡನೆ ನಿರ್ಮಲಾದೇವಿಯವರು ಸಂಕಟದಿಂದ ನಿಟ್ಟುಸಿರು ಬಿಟ್ಟರು.

ದುರ್ಗಾದಾಸರಿಗೆ ಶಂಭುವಿನ ಕಡೆಯವರು ಅವಹೇಳನ ಮಾಡಿದರೆಂಬ ವಾರ್ತೆ ಅರ್ಧಗಂಟೆಯೊಳಗಾಗಿ ನಿಂಬೂರಿನ ಪಟ್ಟಣದಲ್ಲಿ ಎಲ್ಲೆಲ್ಲೂ ಹಬ್ಬಿತ್ತು. ಆ ಸುದ್ದಿಯನ್ನು ಕೇಳಿದ ಜನರು ಕಿಡಿಕಿಡಿಯಾಗಿದ್ದರು. ಅವರಿಗೆ ದುರ್ಗಾದಾಸರ ಇತಿಹಾಸವೂ ಗೊತ್ತಿತ್ತು; ಶಂಭು ದಾಮೋದರರ ಇತಿಹಾಸವೂ ಗೊತ್ತಿತ್ತು. ಪೋಲಿಸ್ ಉಸ್ತುವಾರಿ ಇಲ್ಲದಿದ್ದರೆ ಮೆರವಣಿಗೆ ಮಾಡಿಸಿಕೊಳ್ಳುತಿದ್ದವರ ಮೇಲೆ ಕಲ್ಲು ಚಪ್ಪಲಿಗಳ ವೃಷ್ಟಿಯಾಗುತ್ತಿತ್ತು. ಮೆರವಣಿಗೆಯನ್ನು ನೋಡುತ್ತಿದ್ದ ಜನರು ತಮತಮಗೆ ತಿಳಿದಂತೆ ಮಾತನಾಡುತ್ತಿದ್ದರು. ಕೆಲವರು " ಈ ಕಳ್ಳ ಶಂಭೂನೂ ಮಂತ್ರಿಯಾದನಲ್ಲಪ್ಪಾ," ಎನ್ನುತ್ತಿದ್ದರು. ಕೆಲವರು, "ಇವರ ಮೆರವಣಿಗೇನೂ ನೋಡೊ ಕಾಲ ಬಂತಲ್ಲಪ್ಪಾ," ಎನ್ನುತ್ತಿದ್ದರು.

ಬೀದಿಯೊಂದರಲ್ಲಿ ಮೆರವಣಿಗೆಯನ್ನು ನೋಡುತ್ತಿದ್ದ ಯುವಕರಿಬ್ಬರ ಸಂಭಾಷಣೆ ಸ್ವಾರಸ್ಯಕರವಾಗಿತ್ತು. ಒಬ್ಬನು ಪ್ರಕಾಶ್ ; ಇನ್ನೊಬ್ಬ ಅವನ ಸ್ನೇಹಿತ ಚಂದು

"ಏನ್ ದುರ್ದೆಶೆ ಬಂತೋ, ನಮ್ಮ ದೇಶಕ್ಕೆ?" ಎಂದನು ಪ್ರಕಾಶ್.

"ಏನಪ್ಪಾ ಹೊಸದಾಗಿ ಬಂದ ದುರ್ದೆಶೆ?"

"ನಿನ್ನ ಕಣ್ಣೀಗೆ ಕಾಣ್ಲೇ ಇಲ್ಲವೇನೋ- ಆ ಭೂತಾಕಾರದ ವ್ಯಕ್ತಿಗಳು?"

"ಅದರಲ್ಲೇನಯ್ಯಾ ಮಹಾ ವಿಶೇಷ? ಎಲ್ಲಾ ಪುಢಾರಿಗಳ ಹಾಗೇ ಇವರೂ ಇಬ್ಬರು ಪುಢಾರಿಗಳು."

"ಅಲ್ಲಕಣೋ ಬೆಪ್ಪ, ಅವರು ಬರೀ ಪುಢಾರಿಗಳಲ್ಲ; ಪುಢಾರಿಗಳ ಪುಢಾರಿಗಳು."

"ಹಾಗಂದರೇನಯ್ಯಾ?"

"ನೋಡು, ಕಾರಾಗೆ ಬಲಬದಿ ಕೂತಾನಲ್ಲ– ಕರೀಬಂಡೆ ಹಾಗೆ ಅವ ಮುಖ್ಯಮಂತ್ರಿ ದಾಮೋದರ; ಎಡಗಡೆ ಕುಳಿತ ಟೊಣಪ ಮಂತ್ರಿ ಶಂಭು."

"ಓಹೋ ಇವರೇ ಏನಯ್ಯಾ, ದಾಮೋದರ ಶಂಭು? ಇವರಿಬ್ಬರ ಕಥೆ ಬಹಳಾ ಬಹಳಾ ಹೇಳ್ತಾರಲ್ಲಯ್ಯಾ?"

"ಅದಕ್ಕೇ ನಾ ಹೇಳಿದ್ದು, ದೇಶಕ್ಕೆ ದುರ್ದೆಶೆ ಬಂತು ಅಂತ"

"ದೇಶಕ್ಕೆ ದುರ್ದೆಶೆ ಬಂದ್ರೆ ಏನಂತೆ; ಇವರ ದೆಸೆ ಖುಲಾಯಿಸಿದೆಯೋ ಇಲ್ಲವೊ ನೋಡು. ಇಬ್ರೂ ಹ್ಯಾಂಗೆ ಗುಂಡು ಗುಂಡಾಗಿ, ತುಂಬಿಕೊಂಡು ಇದ್ದಾರೆ. ಇವರಿಗೆ ಬಡಬಗ್ಗರ ಗೋಳಿನ ಚಿಂತೇನೂ ಇಲ್ಲ; ಶತ್ರು ರಾಷ್ಟ್ರದ ಧಾಳೀ ಚಿಂತೆನೂ ಇಲ್ಲ."

"ಅವರಿಗೇನಯ್ಯಾ ಚಿಂತೆ? ಜೇಬಾಗೆ ಕಂಟ್ರಾಕ್ಟರ್‌ಗಳ ದುಡ್ಡು; ಕೈಯ್ಯಾಗೆ ಅಧಿಕಾರ. ಇನ್ನೇನು ಬೇಕು ಹೇಳು?"

"ಅಲ್ಲಯ್ಯ, ಈ ನೀಚರನ್ನು ನಮ್ಮೂರಿನ ನೀಚರು ಯಾಕೆ ಮೆರವಣಿಗೆ ಮಾಡಸ್ತಾರೆ?"

"ನಾಳೆ ಅವರಿಂದ ಏನಾದ್ರು ಗಿಟ್ಸೋಣ ಅಂತ."

"ಏನಯ್ಯಾ. ದುರ್ಗಾದಾಸರು ದೇವರಂಥ ಮನುಷ್ಯ. ಅವರನ್ನ ಮೂಲೆಗೆ ಕೂರಿಸಿ, ಇವರನ್ನು ಮೇಲಕ್ಕೇರಿಸದ್ರಲ್ಲಯ್ಯಾ? ಈ ಕಾಂಗ್ರೆಸ್ಸಿನವರಿಗೆ ಏನ್ ಹೇಳಬೇಕು!"

"ಈಗಿನ ಪುಢಾರಿಗಳಿಗೆ ದೇವರಂಥಹ ದುರ್ಗಾದಾಸರು ಯಾಕಯ್ಯಾಬೇಕು? ಅವರಿಗೆ ದೈತ್ಯ ಶಿಖಾಮಣಿಗಳೇ ಬೇಕು. ಬಾ ಹೋಗೋಣ ಟೌನ್ ಹಾಲಿನಾಗೆ ಏನ್ ತಮಾಷೆ ನಡೀತದೆ ನೋಡ್ಜೋಣ"

ಮೆರವಣಿಗೆ ಪುರಭವನದ ಸಮೀಪ ಮುಕ್ತಾಯಗೊಂಡಿತ್ತು. ಪುರಸಭೆಯ ಅಧ್ಯಕ್ಷರು ಅತಿಥಿಗಳಿಬ್ಬರನ್ನೂ ಸ್ವಾಗತಿಸಿ, ಸಭಾಂಗಣಕ್ಕೆ ಕರೆದೊಯ್ದರು. ಪುರಭವನದ ಸಭಾಂಗಣವು ಜನಸಮೂಹದಿಂದ ಕಿಕ್ಕಿರಿದು ತುಂಬಿತ್ತು. ಕೆಲವರು ಆಹ್ವಾನಿತರಾಗಿ ಬಂದಿದ್ದರೆ, ಹಲವರು ಬೇರೆ ಬೇರೆ ಕಾರಣಗಳಿಂದ ಬಂದಿದ್ದರು. ಕೆಲವರು ಅಲ್ಲೇನು ನಡೆಯುತ್ತದೆ ಎಂಬುದನ್ನು ನೋಡುವ ಕುತೂಹಲದಿಂದ ಬಂದಿದ್ದರು. ಸಂಗೀತವನ್ನು ಕೇಳಲು ಬಂದಿದ್ದರು. ಕೆಲವರು ಶಂಭು ದಾಮೋದರನ್ನು ನೋಡಲು ಬಂದಿದ್ದರು. ಹುಡುಗರು ತಮಾಷೆಗಾಗಿ ಸುಮ್ಮನೆ ಬಂದಿದ್ದರು. ಶಂಭು ದಾಮೋದರರು ಅಲ್ಲಿ ಸೇರಿದ್ದ ಜನರೆಲ್ಲರೂ ತಮ್ಮನ್ನು ಮೆಚ್ಚಿದವರೆಂದು ಹೆಮ್ಮೆಪಟ್ಟರು.

ಪ್ರಾರ್ಥನೆ ಮತ್ತು ಸಂಗೀತಗಳಾನಂತರ, ಕೆಮ್ಮೊರನು ಸ್ವಾಗತ ಸಮಿತಿ ಪರವಾಗಿ ಅತಿಥಿಗಳಿಬ್ಬರಿಗೂ ಮಾನಪತ್ರಗಳನ್ನು ಸಮರ್ಪಿಸಿದರು. ಆ ಮಾನಪತ್ರಗಳಲ್ಲಿ ಶಂಭು ದಾಮೋದರರಲ್ಲಿ ಎಂದೂ ಕಾಣದಿದ್ದ ಸದ್ಗುಣಗಳನ್ನು ಬಣ್ಣಿಸಲಾಗಿತ್ತು. ಆ ನಂತರ

ಹೊಗಳುಭಟ್ಟರನೇಕರು ಅತಿಥಿಗಳ ಗುಣಗಾನ ಮಾಡಿದರು. ಅತಿಥಿಗಳ ಭಾಷಣಗಳಾದ ನಂತರ ಶಂಭು, ದಾಮೋದರರ ಭಾಷಣಗಳಾದವು. ದಾಮೋದರನು ತನ್ನ ಭಾಷಣದಲ್ಲಿ; ಜನತೆಯ ಸೇವೆಯೇ ತನ್ನ ಗುರಿಯೆಂದೂ, ತನ್ನ ಅಧಿಕಾರದ ಅವಧಿಯಲ್ಲಿ ಪಕ್ಷಪಾತರಹಿತವಾದ ಸ್ವಚ್ಛ ಆಡಳಿತವನ್ನು ರಾಜ್ಯಕ್ಕೆ ಒದಗಿಸುತ್ತೇನೆಂದೂ, ಸಾರ್ವಜನಿಕರೂ ಸರ್ಕಾರಿ ಅಧಿಕಾರಿಗಳೂ ಕಷ್ಟಪಟ್ಟು ದುಡಿಯಬೇಕೆಂದೂ ಹೇಳಿದನು. ಶಂಭೂವು ಸಹ ಅದೇ ಧಾಟಿಯಲ್ಲಿ ಮಾತನಾಡಿದನು.

ಇವರಿಬ್ಬರ ಭಾಷಣಗಳನ್ನು ಕೇಳುತ್ತಾ ಸಭಾಂಗಣದ ಒಂದು ಮೂಲೆಯಲ್ಲಿ ಕುಳಿತಿದ್ದ ಚಂದು, ಪಕ್ಕದಲ್ಲಿ ಕುಳಿತಿದ್ದ ಪ್ರಕಾಶನನ್ನು ತಿವಿದು,

"ಕೇಳ್ದೇನೋ, ಮುಖ್ಯಮಂತ್ರಿ ಭಾಷಣಾನಾ? ಇವನೂ ಇವನ ಕಡೆ ಪುಢಾರಿಗಳೂ ಲಂಚ ಹೊಡ್ದು, ಬೊಜ್ಜು ಬೆಳೆಸಿ ಸುಖವಾಗಿರಬೇಕಂತೆ! ಜನ ಕಷ್ಟ ಪಟ್ಟು ದುಡೀಬೇಕಂತೆ! ಇವನು, ರಾಜ್ಯಕ್ಕೆ ನಿಷ್ಪಕ್ಷಪಾತವಾದ ನಿರ್ಮಲ ಆಡಳಿತ ಕೊಡ್ತಾನಂತೆ! ತಾನೂ ತಿಂದು, ತನ್ನವರಿಗೂ ತಿನಿಸಿ, ಮೆರೀತಾ ಇದ್ದಾನೆ. ಈ ರಾಜ್ಯದಾಗಿದ್ದ ಕಂಟ್ರಾಕ್ಟು, ಪರ್ಮಿಟ್ಟು, ಲೈಸೆನ್ಸು, ಸರ್ಕಾರಿ ನೌಕರಿ–ಎಲ್ಲಾನು ತನ್ನವರೀಗೇ ಕೊಟ್ಟು ಮುಗಿಸಿ ಬಿಟ್ಟಾನೆ ಭೂಪ. ಚಂದ್ರಲೋಕದಲ್ಲೇನಾದ್ರೂ ಇವನ ಪಾರಪತ್ಯ ನಡೆಯೂ ಹಾಗಿದ್ರೆ ಅಲ್ಲೂ ತನ್ನವರನ್ನೇ ತುಂಬಿಸ್ತಿದ್ದ. ನಮಗೆ ಉಪದೇಶ ಮಾಡ್ತಾನೆ....ಕಳ್ಳ," ಎಂದನು

* * * *

ರಾತ್ರಿ ಹತ್ತು ಗಂಟೆಯ ಸಮಯ. ಶಂಭು, ರಾಜಧಾನಿಯಲ್ಲಿದ್ದ ತನ್ನ ಮನೆಯ ಶಯನ ಕೋಣೆಯಲ್ಲಿ, ಸುರಾದೇವಿಯ ಆಲಿಂಗನದಲ್ಲಿ ಸುಖಾಸನದಲ್ಲಿ ಒರಗಿದ್ದನು. ತೊದಲು ನುಡಿಗಳಲ್ಲಿ "ಭ್ರಮರಾ....ಭ್ರಮರಾ...., ಏ ಭ್ರಮರಾ.... ಇಲ್ಲಿ ಬಾರೆ.... ಬೇಗ ಬಾರೆ," ಎಂದು ತನ್ನ ಶೀಘ್ರಲಿಪಿಕಾರಳನ್ನು ಕರೆದನು.

"ಏನ್ರೀ. ಯಾಕ್ರೀ, ಯಾಕೊದ್ರತೀರಿ? ನಾಕು ತಾಸು ರಾತ್ರೆ ಆತು ನಾ ಮನೀಗೆ ಹೋಗೂದು ಬ್ಯಾಡೇನು?" ಎಂದು ಹೇಳುತ್ತಾ ಭ್ರಮರಾ ಶಂಭುವಿನ ಕೊಠಡಿಗೆ ಕಾಲಿಟ್ಟಳು.

"ಹತ್ತು ಹೊಡದ್ರ ಏನಾತಿ ಬಿಡು. ನಾನೇ ಕಾರಾಗೆ ನಿನ್ಮನೀಗೆ ಬಿಡ್ತೀನಿ."

"ಯಾಕ್ರೀ, ನನ್ಕರದ್ದು"

"ಬಾ....ನನ್ನ..... ಚಿನ್ನಾ......ಹತ್ರ ಬಾ. ಭ್ರಮರಾ, ನಿನ್ನ ನಾ ಭ್ರಮಿಸಿ.... ಕೆಟ್ಟೆ.....ಬಾ"

"ನೀವು ಕೆಟ್ಟಿಲ್ಲ; ನಾಕೆಟ್ಟೀನಿ ನಿಮ್ಮತ್ರ ನೌಕ್ರೀಗೆ ಸೇರ್ಕೊಂಡದ್ಕೆ ನನ್ನ ಕೆಡಿಸಿದ್ರಿ ನಿಮ್ಮಧಿಕಾರ ಎಷ್ಟ್ ಕಾಲ ಶಾಶ್ವತ? ಆ ಮ್ಯಾಲೆ ನನ್ಗತಿ ಏನ್ರೀ?"

"ನಿನಗೆ..... ನಾನೇ ಗತಿ....ನನಗೆ..... ನೀನೆ ಗತಿ. ನನ್ನ ಅಧಿಕಾರ ಎಲ್ಲಿ...... ಹೋಗ್ತದೆಯೇ. ನೋಡ್ತಾ ಇರು. ನ...ನಾ ಮುಖ್ಯಮಂತ್ರಿ ಆಗ್ತೀನಿ. ಆಗ....ನೀ... ನನ್ನ ಪ್ರೈವೇಟ್....ಸೆಕ್ರೆಟರಿ. ಬಾ ನನ್ನ ಮುದ್ದು ಗಿಣಿಯೇ, ಮೋಹದ ಗಿಣಿಯೇ.. ಎಣ್ಗೆಂಪ, ನುಣ್ಮಯ್ಯ, ಚೆಂದುಟಿಯ ಚೆಲುವೆ."

"ಏನ್ರೀ, ಹೆಂಡದ ನಿಶೆನೆತ್ತಿಗೇರಿ ಕವಿ ಆಗ್ತಾ ಇದ್ದೀರಿ."

"ನಾ ಯಾರಿಗೆ ಕಡ್ಮಿಯಂತಾ ಮಾಡಿಯೇ? ಇನ್ನೂ ನೋಡ್ತಾ ಇರು ನನ್ನಕವಿತೇನ."

"ಹೌದೌದು, ಭೋಳ್ಯಾ ಜನಾನೂ ಸಹ ಮಂತ್ರಿ ಆದಮ್ಯಾಲೆ ಮೇಧಾವಿ ಗಳಾಗ್ತಾರಂತೆ! ಅಲ್ರೀ, ನನ್ನ-ನಿನ್ನ ಸ್ನೇಹ ಜನ್ರೀಗೆ ಗೊತ್ತಾದ್ರೆ ಗತಿ ಏನ್ರೀ?"

"ಬಿಡೇ, ಜನ್ರೇನು....ಮಹಾ......ಸಂಪನ್ನರು. ನಾನು ಆ ಜನರ ಮುಖಂಡ ಅಲ್ಲೇನೇ? ಅವರ್ಹಾಗೆ ನಾನು. ನನ್ಹಾಗೆ ಅವ್ರು. ಸರಿಯಾದ ಅವಕಾಶ ಸಿಕ್ದೇ ಹೋದಾಗ ಎಲ್ಲಾರೂ ಸಂಪನ್ನರೇ."

"ಗಟ್ಯಾಗಿ ಒದರ್ತೀರಲ್ರೀ? ಯಾರಾದ್ರೂ ವಿಸಿಟರ್ಸ್ ಬಂದ್ರೆ ಏನು ಮಾಡೂದು?"

"ಯಾರನ್ನೂ ಬಿಡಬ್ಯಾಡ ಅಂತ ಬೋಳೀಮಗ ಜವಾನಗೆ ಒಂದು ರೂಪಾಯಿ ಭಕ್ಷೀಸ್ ಕೊಟ್ಟೇನಿ. ಹೆದ್ರಬೇಡ ಬಾ."

ಅವರಿಬ್ಬರ ಸಂಬಾಷಣೆ ಕೊಠಡಿಯಲ್ಲಿ ನಡೆಯುತ್ತಿರುವಲ್ಲಿ, ಜವಾನನು ಹೊರಗಡೆಯಿಂದ ಕೊಠಡಿಯ ಬಾಗಿಲನ್ನು ಒಂದೇ ಸುಮ್ಮನೆ ಬಡಿಯುತ್ತಾ, ಮುಖ್ಯಮಂತ್ರಿ ಬಂದಿದ್ದಾರೆಂದು ಕೂಗಾಡತೊಡಗಿದನು. ಹೆಂಡದ ಅಮಲಿನಲ್ಲಿದ್ದರೂ ಶಂಭುವಿಗೆ ವಿದ್ಯುತ್ ಸ್ಪರ್ಶವಾದಂತಾಯಿತು. ಭ್ರಮರಳಿಗೆ ಬುದ್ಧಿ ಭ್ರಮಣೆಯಾದಂತಾಯಿತು. ಅವಳು ನಿರ್ವಾಹವಿಲ್ಲದೆ ಕೊಠಡಿಯ ಬಾಗಿಲನ್ನು ತೆರೆದಳು. ದಾಮೋದರನು ಕೊಠಡಿಯೊಳಗೆ ಕಾಲಿಟ್ಟೊಡನೆ ಅವಳು ಅಲ್ಲಿಂದ ಮಾಯವಾದಳು.

"ಏನೋ ಶಂಭೂ, ಇಷ್ಟು ರಾತ್ರೆ ಹೊತ್ನಾಗೆ ಈ ಸ್ಟೆನೋ ಜೊತೆ ಏನು ಮಾಡ್ತಾ ಇದ್ದೆಯೋ?" ಎಂದು ದಾಮೋದರ ಕೇಳಿದ.

"ಏನೂ ಇಲ್ಲ ದಾಮೋದರಾ, ಯಾವುದೋ ಒಂದು ಇಂಪಾರ್ಟೆಂಟ್ ಲೆಟರ್ ಡಿಕ್ಟೇಟ್ ಮಾಡ್ತಾ ಇದ್ದೆ." ಎಂದು ಏನೂ ಅರಿಯವದವನಂತೆ ಶಂಭು ನಿಧಾನವಾಗಿ ನುಡಿದನು.

"ಓಹೋ, ಈಚೇಗೆ ಡಿಕ್ಟೇಟ್, ಮಾಡುವುದನ್ನೂ ಕಲ್ತಿದ್ದೀಯಾ ಅನ್ನು! ನಿಮ್ಮನೆಯವರೆಲ್ಲಾ ಎಲ್ಲಿ ಹೋಗಿದ್ದಾರೆ?"

"ನಿನ್ನ ದಯದಿಂದ ಕಲ್ತೀನಪ್ಪಾ; ಮನೆಯವರೆಲ್ಲಾ ಊರೀಗೆ ಹೋಗ್ಯಾರೆ."

"ಗೊತ್ತಾಯಿತು. ಅದಕ್ಕೆ ನೀನು ಡಿಕ್ಟೇಶನ್ ಷುರು ಮಾಡಿದ್ದು".

"ಇಲ್ಲ ದಾಮೋದರಾ, ನೀ ಬ್ಯಾರೇ ಏನೂ ತಿಳಿಬ್ಯಾಡ. ನಿಜವಾಗಿಯೂ ಡಿಕ್ಟೇಟ್ ಮಾಡ್ತಾ ಇದ್ದೆ. ಮಂತ್ರಿಯಾದ ಮೇಲೆ ನಾ ಬ್ಹಾಳಾ ಇಂಪ್ರೂ ಆಗಿದ್ದೀನಪ್ಪ"

"ಹೌದೌದು ಇಂಪ್ರೂ ಆಗೀಯ. ನೀ ಏನ್ ಡಿಕ್ಟೇಟ್ ಮಾಡ್ತಾ ಇದ್ದೆ ಅನ್ನೂದು ನಂಗೆ ಗೊತ್ತು. ಹೋಗ್ಲಿ ಬಿಡು. ಈಚೆಗೆ ನಾನು ನೀನೂ ಸೇರದೆ ಬ್ಹಾಳಾ ದಿನಾ ಆಗಿತ್ತು,. ನಮ್ಮ ಮನೇಲಿ ಹಾಳಾದವರು, ಆ ವಿಸಿಟರ್ಸ್ ಗಲಾಟೆ ಯಾವಾಗಲೂ; ಪ್ರೈವೇಸೀನೆ ಇಲ್ಲ. ಅದಕ್ಕೇ ನಿನ್ನ ಕರ್ರ್ಯೋ ಬದಲು ನಾನೇ ಬಂದೇ. ನಾ ಬಂದಿದ್ರಿಂದ ನಿನ್ನ ಕೆಲ್ಸಕ್ಕೆ ತೊಂದ್ರೆಯಾತು ಅಂತ ಕಾಣ್ತದೆ. ಕ್ಷಮಿಸು.

"ತೊಂದ್ರೆನೂ ಇಲ್ಲ. ಗಿಂದ್ರೇನೂ ಇಲ್ಲ. ಏನು ವಿಷಯ ಹೇಳು."

"ನೀ ಕುಡ್ದೀಯಲ್ಲಾ ಮಾರಾಯ! ಕೇಳುವಷ್ಟು ನಿನ್ತಲೆ ನೆಟ್ಟಗೆ ಇದೆ ತಾನೆ?"

"ನಾ ಕುಡಿದಿರೋದು ನಿಜ; ಆದರೆ ನನ್ನ ತಲೆ ಕುಡಿದಿಲ್ಲ; ಅದು ನೆಟ್ಟಗೆ ಇದೆ."

" ಅಲ್ಲಯ್ಯಾ ಶಂಭು, ನಾನು ನೀನೂ ಸೇರಿ ಈ ರಾಜ್ಯಾನಾ ಇನ್ನೂ ಹತ್ತಿಪ್ಪತ್ತು ಕಾಲ ಆಳಬೇಕು ಅಂತ ನಾ ಮಾಡಿದ್ರೆ, ನೀ ಹೀಗೆ ಕುಡ್ಕೊಂಡು ಕಚಡಾ ಹೆಂಗಸ್ರ ಜೊತೇಲಿ ಬಿದ್ದಿದ್ರೆ ಗತಿ ಏನೋ ಪುಣ್ಯಾತ್ಮಾ? ಜನ ಏನ್ ಹೇಳ್ತಾರೆ?"

"ನಾ ಕುಡಿಯೂದೆಲ್ಲಾ ರಾತ್ರಿನೇ; ಜನಕ್ಕೆ ಹ್ಯಾಗೆ ಗೊತ್ತಾಗ್ತದೆ. ಕುಡಿಯಾಗ ಕುಡೀತೀನಿ; ಕೆಲಸಾ ಮಾಡಾಗ ಮಾಡ್ತೀನಿ."

"ಹೋಗ್ಲಿ ಬಿಡು. ಆ ದಾಸನ ಪಾಲಿಟಿಕ್ಸ್ ಈಗ ಹ್ಯಾಗೆ ನಡ್ದದೆ?"

"ದಾಸನ ಪುಂಗಿ ಬಂದ್ ಮಾಡೀನಿ. ಅವಇನ್ನು ತಲೆ ಎತ್ತೋ ಹಾಗೇ ಇಲ್ಲ"

"ಅದೇನು ಮಾಡೀಯ ದೊರೆ?"

" ಆ ಸಾಹುಕಾರ್ ಮದನಮೋಹನನ ಹಿಡ್ದು ದಾಸನ ಮೇಲೆ ದಾವಾ ಹಾಕ್ಸೀನಿ. ಡಿ. ಸಿ. ಶಾಮಸುಂದರನಿಗೆ ಹೇಳಿ ಅವನ ಮನೆ ಅಕ್ವೈರ್ ಮಾಡ್ಸಬೇಕು ಅಂತ ಆರ್ಡರ್ ಮಾಡ್ಸೀನಿ."

"ಅವನ ಎಲೆಕ್ಷನ್ ಕೇಸು ಏನಾಯ್ತು?"

"ನಡೀತಾ ಇದೆ. ಪ್ರಮೋಷನ್ ಕೊಡಿಸ್ತೀನಿ ಅಂತ ಅವನ ಫ್ರೆಂಡ್ ಕೈಯಾಗೆ ಹೇಳಿ ಕಳ್ಸೀನಿ."

"ನಿಮ್ ಜಿಲ್ಲೆ ಜನರು ಈಗಲೂ ಆ ದಾಸನ ಪೂಜೆ ಮಾಡ್ತಾರೋ?"

"ಪೂಜೆ ಎಲ್ಲಿ ಬಂತಪ್ಪ ಪವರ್ ಇದ್ದ ಕಡೆ ಪೂಜೆ. ಅವನ ಶಿಷ್ಯರು ಬಹಳ ಜನ ನನ್ಕಡೆ ಬಂದಾರೆ. ಕೆಲೋರು ಅಲ್ಲೀ, ಇಲ್ಲೀ ಬಾಲಬಿಚ್ತಾ ಇದ್ರು. ಶಾಮಸುಂದರ ಅವರ ಬಾಲ ಕೊಯ್ದು ಮೂಲಿಗೆ ಕೂರ್ಸ್ಸಾನೆ. ಹಾಗಂತ ಮರ್ತಿದ್ದೆ. ನಿಂಬೂರ್ ಡಿಸ್ಟ್ರಿಕ್ಟ್ ಬ್ಯಾಂಕೀಗೆ ನಾ ಹೇಳಿದವರನ್ನು ನಾಮಿನೇಟ್ ಮಾಡ್ದೇನು?"

"ಮೊನ್ನೆನೇ ಮಾಡ್ಬಿಟ್ಟೆ ಕಣಯ್ಯಾ?"

"ಒಳ್ಳೇದು ಮಾಡ್ದೆ. ಬಹಳಾ ವರ್ಷ, ಆ ಬ್ಯಾಂಕ್ ದಾಸನ ಶಿಷ್ಯರ ಕೈಯ್ಯೊಳಗೇ ಸೇರಿ ಹೋಗಿತ್ತು. ಬ್ಯಾಂಕ್ ತಮ್ಮ ಕೈಯೊಳಗೇ ಇಟ್ಕೊಂಡು ಜನಾನ ತಮ್ಮ ಮುಷ್ಟೀಲಿ ಹಿಡಿದುಕೊಂಡಿದ್ರು . ಇನ್ನು ಮೇಲೆ ಬ್ಯಾಂಕು ನಮ್ಮ ಕೈಗೆ ಬರ್ತದೆ".

* * * *

# ೧೦. ದಾಸರ ಅಂತ್ಯ ದಿನಗಳು

ವೈರಿಗಳ, ಕಿರುಕುಳ, ಸಾಲದ ಹೊರೆ, ಹಣದ ಕೊರತೆ, ಬಂಧು ಬಾಂಧವರ ತಿರಸ್ಕಾರ ಮುಂತಾದವುಗಳಿಂದ ದುರ್ಗಾದಾಸರು ನೊಂದುಹೋಗಿದ್ದರು. ಮಾನವರೆಲ್ಲರೂ ಸ್ವಾರ್ಥಿಗಳೆಂದೂ, ಅಪ್ರಮಾಣಿಕರೆಂದೂ ಅವರಿಗೆ ಒಮ್ಮೊಮ್ಮೆ ಅನ್ನಿಸುತ್ತಿತ್ತು. ನಿಂಬೂರಿನ ಸಾಹುಕಾರ್ ಮದನಮೋಹನನು ಹಿಂದೆ ಅವರ ಪರಮ ಭಕ್ತನಾಗಿದ್ದನು. ದಾಸರು ಮುಖ್ಯಮಂತ್ರಿಯಾಗಿದ್ದಾಗ, ಆಧಾರ ಪತ್ರದ ಸಾಲವನ್ನು ಮಾಹೆಯಾನ ನೂರು ರೂಪಾಯಿಗಳ ಕಂತು ಮೂಲಕ ತೀರಿಸುವುದಾಗಿ, ಅವನಿಗೆ ಹೇಳಿದ್ದರು. ಆಗ ಮದನಮೋಹನನು "ನಿಮ್ಮಿಂದ ನನಗೆ ಎಷ್ಟೋ ಉಪಕಾರ ಆಗಿದೆ. ಸಾಲ ವಾಪಾಸು ಕೊಡಬೇಕು ಅಂತ ನಾನು ಕೇಳಲಿಲ್ಲವಲ್ಲಾ. ನಿಮಗೆ ಅನುಕೂಲವಾದಾಗ ಕೊಡಿ. ಕೊಡದೇ ಇದ್ದರೂ ಚಿಂತೆಯಿಲ್ಲ. ನಿಮ್ಮ ದಯೆಯಿದ್ದರೆ ಸಾಕು" ಎಂದು ಆಗ ಹೇಳಿದ್ದನು.

ದುರ್ಗಾದಾಸರು ಅಧಿಕಾರದಿಂದ ನಿವೃತ್ತರಾದ ಮೇಲೆ, ಶಂಭು ಮದನಮೋಹನನ ಸ್ನೇಹವನ್ನು ಸಂಪಾದಿಸಿದನು. ಗೆದ್ದೆತ್ತಿನ ಬಾಲವನ್ನು ಹಿಡಿಯುವ ಅನೇಕರಂತೆ ಮದನಮೋಹನನೂ ಶಂಭುವಿನ ಬಾಲವನ್ನು ಹಿಡಿದನು. ಅಷ್ಟೆ ಅಲ್ಲ ಶಂಭುವಿನ ಚಿತಾವಣೆಯಿಂದ, ದುರ್ಗಾದಾಸರಿಂದ ತನಗಾಗಿದ್ದ ಎಲ್ಲಾ ಉಪಕಾರಗಳನ್ನೂ ಮರೆತು, ಅವರ ಮೇಲೆ ಆಧಾರ ಪತ್ರದ ಸಾಲಕ್ಕಾಗಿ ದಾವೆಯನ್ನು ದಾಖಲು ಮಾಡಿದನು. ನಿಂಬೂರು ಜಿಲ್ಲಾಧಿಕಾರಿ ಶಾಮಸುಂದರನು, ಶಂಭುವಿನ ಪ್ರೇರಣೆಯ ಮೇರೆಗೆ, ದುರ್ಗಾದಾಸರ ವಾಸದ ಮನೆಯು ಜಿಲ್ಲಾ ಸಹಕಾರ ಸಂಘದ ಉಗ್ರಾಣಕ್ಕೆ ಆವಶ್ಯಕವೆಂಬ ನೆಪದಲ್ಲಿ, ಜಮೀನು ಸಂಗ್ರಹದ ಕಾನೂನಿನ ಜರೂರು ನಿಬಂಧನೆಯ ಪ್ರಕಾರ ಆ ಮನೆಯನ್ನು ಸರ್ಕಾರದ ವಶಪಡಿಸಿಕೊಳ್ಳಲು ಕ್ರಮ ಕೈಗೊಂಡಿದ್ದನು.

ತಮ್ಮ ಮನೆಯನ್ನು ಉಗ್ರಾಣಕ್ಕಾಗಿ ವಶಪಡಿಸಿಕೊಳ್ಳುವ ಪ್ರಯತ್ನವನ್ನು ಕೈ ಬಿಡಬೇಕೆಂದು, ದುರ್ಗಾದಾಸರು ನಿರ್ವಾಹವಿಲ್ಲದೆ ದಾಮೋದರನಿಗೆ ಪತ್ರ ಬರೆದರು. ದಾಮೋದರನು ಆ ಪತ್ರಕ್ಕೆ ಪ್ರತ್ಯುತ್ತರವನ್ನು ಸಹ ಬರೆಯಲಿಲ್ಲ. ಶಾಮಸುಂದರ ನೊಡನೆ ಮಾತನಾಡಬೇಕೆಂದು ಹಲವು ಬಾರಿ ದಾಸರು ಟೆಲಿಫೋನ್ ಮೂಲಕ ಪ್ರಯತ್ನ ಮಾಡಿದರು. ಆದರೆ ಶಾಮಸುಂದರನು ಮಾತಿಗೆ ಸಿಕ್ಕದೆ, ತಪ್ಪಿಸಿಕೊಂಡನು. ಕೆಲವು ದಿನಗಳ ನಂತರ, ಮನೆಯನ್ನು ಒಂದು ತಿಂಗಳೊಳಗಾಗಿ ಸರ್ಕಾರಕ್ಕೆ ಬಿಟ್ಟುಕೊಡ ಬೇಕೆಂದು ಶಾಮಸುಂದರನಿಂದ ದಾಸರಿಗೆ ನೋಟಿಸು ಬಂತು. ಆಗ ನಿರ್ಮಲಾ

ದೇವಿಯವರು ತಾವೇ ಶಾಮಸುಂದರನೊಡನೆ ಮಾತನಾಡಬೇಕೆಂದು ನಿಶ್ಚಯಿಸಿ, ಹಲವು ಸಾರಿ ಟೆಲಿಫೋನ್ ಮಾಡಿದರು. ಶಾಮಸುಂದರನು ಮನೆಯಲ್ಲಿದ್ದರೂ ಕೂಡ ಮನೆಯಲ್ಲಿ ಇಲ್ಲವೆಂದು ಜವಾನನ ಮೂಲಕ ನಿರ್ಮಲಾದೇವಿಯವರಿಗೆ ಜವಾಬು ಹೇಳಿಸಿದನು.

ದುರ್ಗಾದಾಸರು ಮಂತ್ರಿಯಾಗಿದ್ದಾಗ, ಶಾಮಸುಂದರನು ಮೂರು ದಿನಗಳಿಗೊಮ್ಮೆ ದಾಸರ ಮನೆಗೆ ಹೋಗಿ, ಅವರ ಕ್ಷೇಮ ಸಮಾಚಾರವನ್ನು ವಿಚಾರಿಸಿ, ನಿರ್ಮಲಾದೇವಿಯವರ ಆತಿಥ್ಯವನ್ನು ಪಡೆಯುತ್ತಿದ್ದನು. ಅಧಿಕಾರ ತಪ್ಪಿದ ಬಳಿಕ ಅವರೊಡನೆ ಮಾತನಾಡುವಷ್ಟು ಸೌಜನ್ಯವೂ ಅವನಿಗಿರಲಿಲ್ಲ.

ಮನೆಯನ್ನು ಬಿಟ್ಟು ಎಲ್ಲಿಗೆ ಹೋಗಬೇಕೆಂಬುದು ದುರ್ಗಾದಾಸರ ತುರ್ತಿನ ಸಮಸ್ಯೆಯಾಗಿತ್ತು. ಚುನಾವಣಾ ಮೊಕದ್ದಮೆಗಾಗಿ ಹಣವನ್ನು ಖರ್ಚು ಮಾಡಬೇಕಾಗಿತ್ತು. ಮದನಮೋಹನನ ದಾವೆಯ ವಿಚಾರದಲ್ಲಿ ಏನು ಮಾಡಬೇಕೆಂದೂ ಸಹ ಒಂದು ಅವಸರದ ಪ್ರಶ್ನೆಯಾಗಿತ್ತು. ದಾಸರು ಅಧಿಕಾರದಲ್ಲಿದ್ದಾಗ ಅವರಿಂದ ಸಾವಿರಾರು ಜನರು ಸಹಾಯವನ್ನು ಪಡೆದಿದ್ದರು. ಆದರೆ ಅಂದಿನ ಅವರ ಕಷ್ಟ ಪರಿಸ್ಥಿತಿಯಲ್ಲಿ ಅವರಿಗೆ ಯಾರಿಂದಲೂ ಯಾವ ಸಹಾಯವೂ ದೊರಕುವ ಸೂಚನೆ ಕಾಣಲಿಲ್ಲ. ರಾಜ್ಯದ ಗೃಹ ನಿರ್ಮಾಣ ಮಂಡಲಿಯವರು ಬಡವರ ಮತ್ತು ಮಧ್ಯಮ ವರ್ಗದವರ ವಸತಿಗಾಗಿ ನಿಂಬೂರಿನಲ್ಲಿ ಕೆಲವು ಮನೆಗಳನ್ನು ನಿರ್ಮಾಣ ಮಾಡಿದ್ದರು. ಕ್ರಯದ ಮೊಬಲಗನ್ನು ಕಂತುಗಳ ಮೂಲಕ ಪಾವತಿಮಾಡುವ ಷರತ್ತಿನ ಮೇಲೆ ಆ ಮನೆಗಳನ್ನು ಮನೆಯಿಲ್ಲದವರಿಗೆ ಮಾರುತ್ತಿದ್ದರು.

ಗೃಹ ನಿರ್ಮಾಣ ಮಂಡಲಿಯ ಅಧ್ಯಕ್ಷರಾಗಿದ್ದವರನ್ನು ಹಿಂದೆ ದುರ್ಗಾದಾಸರೇ ಆ ಸ್ಥಾನದಲ್ಲಿ ನೇಮಕ ಮಾಡಿದ್ದರು. ತಮ್ಮ ಮನೆಯನ್ನು ಸರ್ಕಾರದವರು ವಶಪಡಿಸಿಕೊಳ್ಳುತ್ತಾರೆಂಬ ಸಂಗತಿ ಖಚಿತವಾದ ಮೇಲೆ, ದಾಸರು ಗೃಹ ನಿರ್ಮಾಣ ಮಂಡಲಿಯ ಅಧ್ಯಕ್ಷರಿಗೆ ಒಂದು ಪತ್ರವನ್ನು ಬರೆದು ಇತರರಿಗೆ ಕೊಡುವಂತೆ ತಮಗೊಂದು ಮನೆಯನ್ನು ಕೊಡಬೇಕೆಂದು ಪ್ರಾರ್ಥಿಸಿದರು. ಅಧ್ಯಕ್ಷ ಪೀಠದ ರುಚಿಯನ್ನು ಕಂಡಿದ್ದ ಆ ವ್ಯಕ್ತಿ ಶಂಭುವಿನ ಸಹಾಯದಿಂದ ತನ್ನ ಅಧಿಕಾರದ ಅವಧಿಯನ್ನು ವಿಸ್ತರಿಸಿಕೊಳ್ಳಬೇಕೆಂಬ ಯೋಚನೆಯಲ್ಲಿದ್ದನು. ತಾನು ದುರ್ಗಾದಾಸರಿಗೆ ಸಹಾಯ ಮಾಡಿದರೆ ತನಗೆ ಶಂಭುವಿನಿಂದ ಆಗಬೇಕಾಗಿದ್ದ ಸಹಾಯ ಎಲ್ಲಿ ತಪ್ಪಿಹೋಗುವುದೋ ಎಂಬ ಭಯದಿಂದ, ಆ ಅಧ್ಯಕ್ಷ ಮಹಾಶಯನು ಸರ್ಕಾರದ ಅನುಮತಿಯಿಲ್ಲದೆ ಮನೆಯನ್ನು ಕೊಡುವುದಿಲ್ಲವೆಂದು ದಾಸರಿಗೆ ಉತ್ತರ ಬರೆದನು. ತಾನೇ ನೇಮಕ ಮಾಡಿದ್ದ ಆ ವ್ಯಕ್ತಿ ಆ ರೀತಿ ವರ್ತಿಸಿದ್ದು ದುರ್ಗಾದಾಸರಿಗೆ ಬಹಳ ವ್ಯಥೆಯನ್ನುಂಟು ಮಾಡಿತ್ತು.

ಈ ಮಧ್ಯೆ ಮದನಮೋಹನನು ಅವರ ಮೇಲೆ ದಾಖಲು ಮಾಡಿದ್ದ ದಾವೆಯಲ್ಲಿ ಡಿಕ್ರಿಯಾಗಿತ್ತು. ಒಂದಾದ ಮೇಲೊಂದು ಕಷ್ಟಗಳು, ಬೆನ್ನುಹತ್ತಿದ ಬೇತಾಳಗಳಂತೆ,

ದಾಸರನ್ನು ಪೀಡಿಸತೊಡಗಿದ್ದವು. ಈಚೆಗೆ ಅವರು ದಿನವೂ ಒಂದೆರಡು ಗಂಟೆಗಳ ಕಾಲವನ್ನು ಧ್ಯಾನದಲ್ಲಿ ಕಳೆಯುತ್ತಿದ್ದರು. ಆದರೆ ದಿನಗಳು ಕಳೆದಂತೆಲ್ಲಾ ಕಷ್ಟಗಳ ಕಾರ್ಮೋಡಗಳು ಅವರ ಸುತ್ತಲೂ ಕವಿಯುತ್ತಿದ್ದವು. ಆದ್ದರಿಂದ ಬರಬರುತ್ತಾ ಅವರಿಗೆ ದೇವರ ಮೇಲಿದ್ದ ನಂಬಿಕೆಯೂ ಸಹ ಕಡಿಮೆಯಾಗುತ್ತಾ ಬಂದಿತ್ತು.

* * * *

ಮನೆಯನ್ನು ಸರ್ಕಾರಕ್ಕೆ ಬಿಟ್ಟು ಕೊಡುವುದು ಅನಿವಾರ್ಯವಾದ್ದರಿಂದ ದುರ್ಗಾದಾಸರು ಚಂಚಲೆಯನ್ನು ನಿಂಬೂರು ಕಾನ್ವೆಂಟಿನಲ್ಲಿ ಬಿಟ್ಟು, ಹೆಂಡತಿಯೊಡನೆ ಜಿತೇಂದ್ರಪುರಕ್ಕೆ ಹೋಗಿ ನೆಲಸಿದರು. ಜಿತೇಂದ್ರಪುರದಲ್ಲಿ ಅವರ ಪೂರ್ವಿಕರು ಕಟ್ಟಿದ್ದ ಒಂದು ಶಿಥಿಲವಾದ ಸಣ್ಣ ಮನೆಯಲ್ಲಿ ವಾಸಿಸುತ್ತಿದ್ದರು. ಬಹಳ ಸುಖದಲ್ಲಿ ಹುಟ್ಟಿ ಬೆಳೆದ ನಿರ್ಮಲಾದೇವಿಯವರಿಗೆ ಗಂಡನ ಆದರ್ಶ ಜೀವನದಿಂದ ಪ್ರಾಪ್ತವಾದ ಕಷ್ಟ ಪರಂಪರೆಗಳನ್ನು ಸಹಿಸುವುದು ಕಷ್ಟವಾಗಿತ್ತು. ಇತ್ತೀಚಿನ ಕಷ್ಟ ಜೀವನದಿಂದ ಅವರ ಮನಸ್ಸಿನ ಮೇಲೆ ಒಂದು ವಿಧವಾದ, ಕೆಟ್ಟ ಪರಿಣಾಮವಾಗಿತ್ತು. ಒಮ್ಮೊಮ್ಮೆ ನಿಷ್ಕಾರಣವಾಗಿ ಗಂಡನ ಮೇಲೆ ಸಿಡಿಮಿಡಿಗೊಂಡು ರೇಗುತ್ತಿದ್ದರು. ಹೊರಗಡೆ ವೈರಿಗಳ ಕಿರುಕುಳ; ಒಳಗಡೆ ಹೆಂಡತಿಯ ಆರ್ಭಟ; ಇವುಗಳಿಂದ ದಾಸರು ತತ್ತರಿಸಿ ಹೋಗಿದ್ದರು.

ಜಿತೇಂದ್ರಪುರಕ್ಕೆ ಹೋಗಿ ಮೂರು ತಿಂಗಳಾಗುವುದರೊಳಗಾಗಿ ಕಷ್ಟದ ಕಾರ್ಮೋಡಗಳು ಭಗವಂತನ ಅನುಗ್ರಹದ ಹೊಂಬೆಳಕಿನಿಂದ ಒಂದೊಂದಾಗಿ ಚದುರತೊಡಗಿದವು. ಕಾಲೇಜಿನಲ್ಲಿ ಓದುತ್ತಿದ್ದ ಜಯಸಿಂಹನು ಶ್ರೇಷ್ಠ ದರ್ಜೆಯಲ್ಲಿ ಉತ್ತೀರ್ಣನಾಗಿ ಪದವೀಧರನಾಗಿದ್ದನು. ಬೇಸಿಗೆಯ ರಜೆಯ ಪ್ರಯುಕ್ತ ಜಯಸಿಂಹನೂ, ಚಂಚಲೆಯೂ ಜಿತೇಂದ್ರಪುರಕ್ಕೆ ಬಂದಿದ್ದರು. ಮಕ್ಕಳಿಬ್ಬರ ಆಗಮನದಿಂದ ದುರ್ಗಾದಾಸರ ಮನಸ್ಸು ಪ್ರಸನ್ನವಾಗಿತ್ತು. ಅಲ್ಲದೆ ಕೆಲವು ಆಶ್ಚರ್ಯಕರವಾದ ಘಟನೆಗಳಿಂದ ದಾಸರ ಮನಸ್ಸಿನಲ್ಲಿ ಶಾಂತಿ ನೆಲೆಗೊಂಡಿತ್ತು.

ಅವರು ಹಿತೈಷಿಯೊಬ್ಬರು ಅವರಿಗೆ ಗೊತ್ತಾಗದ ರೀತಿಯಲ್ಲಿ ಮದನಮೋಹನನಿಗೆ ಸಲ್ಲಬೇಕಾಗಿದ್ದ ಡಿಕ್ರಿ ಹಣವನ್ನು ಕೋರ್ಟಿಗೆ ಕಟ್ಟಿ ಡಿಕ್ರಿಯನ್ನು ವಜಾ ಮಾಡಿಸಿದ್ದರು. ಆ ತರುವಾಯ ಒಂದು ದಿನ, ಅಪರಿಚಿತ ವ್ಯಕ್ತಿಯೊಬ್ಬನು ದುರ್ಗಾದಾಸರ ಮನೆಗೆ ಬಂದು, ಒಂದು ಲಕೋಟೆಯನ್ನು ಅವರ ಕೈಯಲ್ಲಿಟ್ಟು ಸದ್ದಿಲ್ಲದೆ ಹೊರಟು ಹೋದನು. ದಾಸರು ಆ ಲಕೋಟೆಯನ್ನು ಒಡೆದು ನೋಡಿದಾಗ, ಅದರಲ್ಲಿ ಐದು ಸಾವಿರ ರೂಪಾಯಿಗಳ ಕರೆನ್ಸಿ ನೋಟುಗಳೂ ಒಂದು ಕಾಗದವೂ ಇದ್ದುವು. ಆ ಕಾಗದ ಈ ರೀತಿಯಿತ್ತು.

"ಪೂಜ್ಯ ದುರ್ಗಾದಾಸರಿಗೆ, ತಾವು ಈ ರಾಜ್ಯಕ್ಕೆ ಅಪಾರವಾದ ಸೇವೆ ಸಲ್ಲಿಸಿದ್ದೀರಿ. ತಮ್ಮಿಂದಾಗಿರುವ ಉಪಕಾರವನ್ನೂ, ತಮ್ಮ ಸತ್ಯಸಂಧತೆಯನ್ನೂ ಈ ರಾಜ್ಯದ ಜನರು ಎಂದೂ ಮರೆಯುವಂತಿಲ್ಲ. ಸತ್ಯಸಂಧರಾದ ತಾವು ಇಂದು ದುಷ್ಟರಾದ ಶಂಭು ದಾಮೋದರರ ಕಿರುಕುಳಕ್ಕೆ ಸಿಕ್ಕಿ ತೊಳಲುತಿದ್ದೀರಿ. ಕಷ್ಟಕಾಲದಲ್ಲಿ ತಮಗೆ

ನೆರವಾಗಬೇಕೆಂಬ ಉದ್ದೇಶದಿಂದ, ತಮ್ಮನ್ನು ಮೆಚ್ಚಿರುವ ನಾವುಗಳು ಐದು ಸಾವಿರ ರೂಪಾಯಿಗಳನ್ನು ಕಳಿಸಿದ್ದೇವೆ. ಈ ಹಣವನ್ನು ಸ್ವೀಕರಿಸಿ, ನಮ್ಮನ್ನು ಕೃತಾರ್ಥರನ್ನಾಗಿ ಮಾಡಬೇಕೆಂದು ಪಾರ್ಥಿಸುತ್ತೇವೆ. ಉದ್ದೇಶ ಪೂರ್ವಕವಾಗಿಯೇ ತಮ್ಮ ಹೆಸರುಗಳನ್ನು ಈ ಕಾಗದದಲ್ಲಿ ಬರೆದಿಲ್ಲ. ಭಗವಂತನು ತಮಗೆ ಸಕಲ ಸನ್ಮಂಗಳವನ್ನೂ ನೀಡಲಿ.

ಇಂತಿ. ತಮ್ಮ ಹಿತೈಷಿಗಳು"

ಮೇಲ್ಕಂಡ ಎರಡು ಅನಿರೀಕ್ಷಿತ ಘಟನೆಗಳು ದುರ್ಗಾದಾಸರನ್ನು ವಿಸ್ಮಯಗೊಳಿಸಿದ್ದುವು. ಅವರ ಜೀವನದಲ್ಲಿ ನಿರಾಶೆಯ ಕಾರ್ಮೋಡಗಳ ಮಧ್ಯೆ ಆಶೆಯ ಕಿರಣ ಹೊಳೆಯತೊಡಗಿತು. ಭಗವಂತನು ತಮಗೆ ಗೊತ್ತಾಗದ ರೀತಿಯಲ್ಲಿ, ಗೊತ್ತಿಲ್ಲದ ವ್ಯಕ್ತಿಗಳ ಮುಖಾಂತರ ಸಹಾಯವನ್ನು ಒದಗಿಸುತ್ತಾನೆಂಬ ಭಾವನೆ ಅವರಲ್ಲಿ ಮೂಡಿಬಂದಿತ್ತು. ಬರಬರುತ್ತಾ ಅವರಿಗೆ ಸುಖ ಶಾಂತಿಗಳು ಹೆಚ್ಚಾಗಿ ಲಭಿಸತೊಡಗಿದವು. ಅಕ್ಕಪಕ್ಕದ ಹಳ್ಳಿಯ ರೈತರು ಆಗಾಗ ದವಸ ಧಾನ್ಯಗಳ ಮತ್ತು ಹಣ್ಣು ಹಂಪಲುಗಳ ಕಾಣಿಕೆಯನ್ನರ್ಪಿಸುತ್ತಿದ್ದರು.

ಹಳ್ಳಿಯ ಹೆಂಗೆಳೆಯರು ನಿರ್ಮಲಾದೇವಿಯವರಿಗೆ ಅವರ ಕೆಲಸ ಕಾರ್ಯದಲ್ಲಿ ಅನುವಾಗುತ್ತಿದ್ದರು. ಪ್ರತಿ ದಿನವೂ ಹತ್ತಿರದ ಮತ್ತು ದೂರ ಪ್ರದೇಶಗಳಿಂದ ನೂರಾರು ಜನರು ದಾಸರ ಕುಟೀರಕ್ಕೆ ಬಂದು ಗೌರವವನ್ನು ಸಲ್ಲಿಸುತ್ತಿದ್ದರು. ಪಟ್ಟಣದ ನೂತನ ಸೌಕರ್ಯಗಳಿಲ್ಲದಿದ್ದರೂ ಹಳ್ಳಿಯ ವಾತಾವರಣವು ದಂಪತಿಗಳಿಗೆ ಅತ್ಯಂತ ಹಿತಕರವಾಗಿತ್ತು. ಮುಗ್ಧ ಹಳ್ಳಿಗರ ಸಂಪರ್ಕದಿಂದ ಬಡ ಕುಟೀರವು ಸ್ವರ್ಗಮಯವಾಗಿತ್ತು. ಕಾಲಕ್ರಮೇಣ ದುರ್ಗಾದಾಸರ ಭೇಟಿಗಾಗಿ ಬರುವವರ ಸಂಖ್ಯೆ ಹೆಚ್ಚಾಗಿ ಬೆಳೆದು, ಜಿತೇಂದ್ರಪುರವು ಒಂದು ಯಾತ್ರಾಸ್ಥಳದಂತೆ ಆಯಿತು.

ಶಂಭುವಿಗೂ, ದಾಮೋದರನಿಗೂ ಈ ವಿಚಾರ ಗೊತ್ತಾಗದೆ ಇರಲಿಲ್ಲ. ಅವರ ಗೂಢಚಾರರು ದುರ್ಗಾದಾಸರ ಮನೆಗೆ ಹೋಗಿ, ಅವರ ಯೋಗಕ್ಷೇಮವನ್ನು ವಿಚಾರಿಸುವ ಹಿತೈಷಿಗಳೆಂದು ನಟಿಸಿ, ಆಗಾಗ ಶಂಭು ದಾಮೋದರರಿಗೆ ವರದಿಯನ್ನೊಪ್ಪಿಸುತ್ತಿದ್ದರು. ದುರ್ಗಾದಾಸರನ್ನು ಅಧೋಗತಿಗೆ ತಳ್ಳಬೇಕೆಂದಿದ್ದ ಶಂಭು ದಾಮೋದರರು ಆ ವರದಿಗಳನ್ನು ಕೇಳಿ ಹೊಟ್ಟೆ ಕಿಚ್ಚಿನಿಂದ ಕರುಬುತ್ತಿದ್ದರು. ದಾಸರು ಅಧೋಗತಿಗೆ ಹೋಗುವ ಬದಲು ಹೆಚ್ಚಾಗಿ ಜನಾನುರಾಗಿಯಾಗುತ್ತಿದ್ದರು. ಮದನಮೋಹನನ ಡಿಕ್ರಿ ಹಣವನ್ನು ಯಾರೋ ಕೋರ್ಟಿಗೆ ಕಟ್ಟಿದರೆಂಬ ವಾರ್ತೆ ಕೇಳಿದ ಮೇಲೆ, ಶಂಭು ಅಸೂಯೆಯನ್ನು ತಡೆಯಲಾರದೆ, "ಹಿಂದೆ ಕೂಡಿಟ್ಟಿದ್ದ ಹಣ ಈಗ ಬಯಲಿಗೆ ಬರ್ತಾ ಇದೆ," ಎಂಬುದಾಗಿ, ದುರ್ಗಾದಾಸರೇ ಹಣವನ್ನು ಬೇರೊಬ್ಬರ ಕೈಯಿಂದ ಕೋರ್ಟಿಗೆ ಕಟ್ಟಿದ್ದಾರೆಂಬ ಅರ್ಥ ಬರುವಂತೆ, ವ್ಯಂಗ್ಯವಾಗಿ ನುಡಿಯುತ್ತಿದ್ದನು.

* * * *

ದುರ್ಗಾದಾಸರಿಗೆ ಮಾನಸಿಕವಾಗಿ ಮತ್ತು ವ್ಯವಹಾರಿಕವಾಗಿ ಇತ್ತೀಚೆಗೆ ನೆಮ್ಮದಿ ಉಂಟಾಗಿದ್ದರೂ, ಅವರ ಆರೋಗ್ಯ ದಿನೇ ದಿನೇ ಕೆಡುತ್ತಿತ್ತು. ಅವರು ಚಿಕ್ಕಂದಿನಲ್ಲಿಯೇ

ಸ್ವಾತಂತ್ರ್ಯ ಸಂಗ್ರಾಮದಲ್ಲಿ ದುಮುಕಿ, ಸೆರೆಮನೆಯ ವಾಸವನ್ನು ಅನುಭವಿಸಿದ್ದರು. ಸ್ವಾತಂತ್ರ್ಯ ಲಭಿಸಿದ ನಂತರ ಬಿಡುವಿಲ್ಲದ ಕೆಲಸ ಕಾರ್ಯಗಳ ಸೆಳವಿನಲ್ಲಿ ಸಿಕ್ಕಿ ಕಷ್ಟ ಪಟ್ಟಿದ್ದರು. ಮುಖ್ಯಮಂತ್ರಿಯಾಗಿದ್ದಾಗ ಹಗಲಿರುಳೂ ಶ್ರಮಿಸಿದ್ದರು. ಆ ನಂತರ ದುಷ್ಟ ರಾಜಕಾರಣಿಗಳ ಕಿರುಕುಳಗಳಿಗೊಳಗಾಗಿ ಒಂದರ ಮೇಲೊಂದು ಕಷ್ಟವನ್ನನುಭವಿಸಿದ್ದರು. ಇತ್ತೀಚೆಗೆ ಒದಗಿದ್ದ ಕಷ್ಟಗಳಿಂದ ಅವರ ಮನಸ್ಸು ಕ್ಲೇಶಗೊಂಡು ದೇಹಕೃಶವಾಗಿ ಹೋಗಿತ್ತು.

ಈ ಎಲ್ಲಾ ಕಾರಣಗಳಿಂದ ಅವರಿಗರಿವಾಗದಂತೆ ಅವರ ಆರೋಗ್ಯ ದಿನ ದಿನಕ್ಕೂ ಕೆಡುತ್ತಾ ಬಂದಿತ್ತು. ರೋಗವು ನರನಾಡಿಗಳೆಲ್ಲವನ್ನೂ ಸಂಪೂರ್ಣವಾಗಿ ಆಕ್ರಮಿಸಿಕೊಂಡಿತ್ತು. ಕೆಲವು ತಿಂಗಳುಗಳಿಂದ ಅವರು ದೇಹ ಬಲಕ್ಕಿಂತಲೂ ಆತ್ಮ ಬಲದಿಂದಲೇ ಕೆಲಸ ಕಾರ್ಯಗಳನ್ನು ನೆರವೇರಿಸುತ್ತಿದ್ದರು. ಆದರೆ ಮುಂದೆ ಅದೇ ರೀತಿ ಕೆಲಸ ಕಾರ್ಯಗಳ ನಿರ್ವಹಣೆ ಆಗುವಂತಿರಲಿಲ್ಲ. ಕ್ರಮೇಣ ರೋಗ ಪ್ರಬಲವಾಗಿ ಅವರು ಹಾಸಿಗೆ ಹಿಡಿದು ಮಲಗಿಬಿಟ್ಟರು.

ನಿಂಬೂರಿನ ಸುಪ್ರಸಿದ್ಧ ವೈದ್ಯರೊಬ್ಬರು ಆಗಾಗ ಜಿತೇಂದ್ರಪುರಕ್ಕೆ ಬಂದು ದುರ್ಗಾದಾಸರಿಗೆ ಚಿಕಿತ್ಸೆ ನೀಡುತ್ತಿದ್ದರು. ತಮ್ಮ ಚಿಕಿತ್ಸೆಯಿಂದ ಪ್ರಯೋಜನ ವಾಗುವುದಿಲ್ಲವೆಂದು ಮನಗಂಡ ಆ ವೈದ್ಯರು ಮುಂದಿನ ಚಿಕಿತ್ಸೆಗಾಗಿ ದಾಸರನ್ನು ರಾಜಧಾನಿಯ ದೊಡ್ಡ ಆಸ್ಪತ್ರೆಗೆ ಕರೆದುಕೊಂಡು ಹೋಗಬೇಕೆಂದು ಸಲಹೆ ಮಾಡಿದರು. ವೈದ್ಯರ ಪ್ರಕಾರ ನಿರ್ಮಲಾದೇವಿಯವರು ಗಂಡನನ್ನು ರಾಜಧಾನಿಗೆ ಕೊಂಡೊಯ್ಯಲು ತವಕ ಪಟ್ಟರು. ಆದರೆ ದಾಸರು ರಾಜಧಾನಿಗೆ ಹೋಗಲು ಸಮ್ಮತಿಸಲಿಲ್ಲ. ತಮ್ಮ ಅಂತ್ಯಕಾಲ ಸಮೀಪಿಸುತ್ತಾ ಇದೆಯೆಂದು ಅವರ ಅಂತರಾತ್ಮ ಹೇಳುತ್ತಿತ್ತು. ನಿರ್ಮಲಾದೇವಿಯವರು ಎಷ್ಟು ಹಠ ಮಾಡಿದರೂ ದಾಸರು ಜಿತೇಂದ್ರಪುರವನ್ನು ಬಿಡುವುದಿಲ್ಲವೆಂದು ಹಠ ಹಿಡಿದರು.

ಶಂಭು ದಾಮೋದರರ ದುರಾಡಳಿತದಿಂದ ಕಂಗೆಟ್ಟು ಹೋಗಿದ್ದ ರಾಜ್ಯದ ಜನರಿಗೆ ದುರ್ಗಾದಾಸರು ಆಸೆಯ ಕಿರಣದಂತಿದ್ದರು. ಅವರೊಬ್ಬರೇ ರಾಜ್ಯದ ಜನತೆಗೆ ಸರಿಯಾದ ಮಾರ್ಗದರ್ಶನ ನೀಡತಕ್ಕ ವ್ಯಕ್ತಿಯಾಗಿದ್ದರು. ಅವರು ಹಾಸಿಗೆಯನ್ನು ಹಿಡಿದಿದ್ದು ಜನತೆಯನ್ನು ಚಿಂತೆಗೀಡು ಮಾಡಿತು. ಶಂಭು ದಾಮೋದರರ ಲಂಗು, ಲಗಾಮಿಲ್ಲದ ಭ್ರಷ್ಟ ಆಡಳಿತದಿಂದ ದುರ್ಗಾದಾಸರು ಮೊದಲಿಗಿಂತಲೂ ನೂರ್ಮಡಿ ಜನಪ್ರಿಯರಾಗಿದ್ದರು. ಅವರು ಜಾಗ್ರತೆ ಗುಣ ಹೊಂದಲೆಂದು ರಾಜ್ಯದ ಲಕ್ಷಾಂತರ ಜನರು ದಿನವೂ ಭಗವಂತನಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಿದ್ದರು. ಅವರ ಅಸ್ವಸ್ಥತೆಯಿಂದ ರಾಜ್ಯದ ಜನರು ಚಿಂತೆಗೀಡಾಗಿದ್ದರೂ, ರಾಜ್ಯವನ್ನಾಳುತ್ತಿದ್ದ ಶಂಭು, ದಾಮೋದರು ಸಂತಸಗೊಂಡಿದ್ದರು.

ದುರ್ಗಾದಾಸರನ್ನು ನೋಡಲು, ಪ್ರತಿದಿನವೂ ಅವರ ಸ್ನೇಹಿತರೂ, ಹಿತೈಷಿಗಳೂ ತಂಡೋಪತಂಡವಾಗಿ ಜಿತೇಂದ್ರಪುರಕ್ಕೆ ಬರುತ್ತಿದ್ದರು. ಯಾರ ಬಳಿಯೂ ಮಾತನಾಡಬಾರದೆಂದು ವೈದ್ಯರು ಸಲಹೆ ಮಾಡಿದ್ದರೂ ಸಹ ದಾಸರು ತಮ್ಮನ್ನು

ನೋಡಬಂದವರೊಡನೆ ಅಷ್ಟಿಷ್ಟು ಮಾತನಾಡುತ್ತಲೇ ಇದ್ದರು. ದಾಸರು ಹಾಸಿಗೆ ಹಿಡಿದು ಮಲಗಿರುವರೆಂದೂ, ಚಿಕಿತ್ಸೆಗಾಗಿ ರಾಜಧಾನಿಗೆ ಹೋಗಬೇಕೆಂಬ ವೈದ್ಯರ ಸಲಹೆಯನ್ನು ನಿರಾಕರಿಸಿದ್ದಾರೆಂದೂ, ಕೇಳಿದ ಪ್ರತಾಪರಾಜನು ಅವರನ್ನು ನೋಡುವ ಸಲುವಾಗಿ, ಒಂದು ದಿನ ಬೆಳಿಗ್ಗೆ ಸುಮಾರು ಹತ್ತು ಗಂಟೆಯ ಸಮಯದಲ್ಲಿ ಜಿತೇಂದ್ರಪುರಕ್ಕೆ ಬಂದನು. ದಾಸರನ್ನು ಕಂಡ ಪ್ರತಾಪನಿಗೆ ಬಹಳ ಸಂಕಟವಾಯಿತು. ಸರಿಯಾದ ಚಿಕಿತ್ಸೆ ಇಲ್ಲದಿದ್ದರೆ ಅವರು ಬದುಕುವುದು ಸಾಧ್ಯವಿಲ್ಲವೆಂಬ ಭಾವನೆ ಅವನ ಮನಸ್ಸಿಗೆ ಬಂತು.

ಪ್ರತಾಪರಾಜನು ದಾಸರಿಗೆ ಗೌರವವನ್ನು ಸಲ್ಲಿಸಿ, ಅವರ ಆರೋಗ್ಯ ಸ್ಥಿತಿಯನ್ನು ವಿಚಾರಿಸಿದ ನಂತರ, ತಾನು ಅವರನ್ನು ರಾಜಧಾನಿಗೆ ಕರೆದುಕೊಂಡು ಹೋಗುವ ಉದ್ದೇಶದಿಂದ ಬಂದಿರುವುದಾಗಿಯೂ, ತನ್ನೊಡನೆ ರಾಜಧಾನಿಗೆ ಹೊರಡಲು ಮನಸ್ಸು ಮಾಡಬೇಕಾಗಿಯೂ, ಅವರನ್ನು ಪ್ರಾರ್ಥಿಸಿದನು. ದಾಸರು ಜಿತೇಂದ್ರಪುರವನ್ನು ಬಿಡಲು ಒಪ್ಪಲಿಲ್ಲ. ಪ್ರತಾಪರಾಜನು ವಿನಯ ಪೂರ್ವಕವಾಗಿ ಒತ್ತಾಯ ಮಾಡತೊಡಗಿದನು.

ಆಗ ದಾಸರು "ಪ್ರತಾಪ್, ನನ್ನ ಮೇಲೆ ನೀನಿಟ್ಟಿರುವ ಅಭಿಮಾನಕ್ಕಾಗಿ ಬಹಳ ವಂದನೆಗಳು. ಆದರೆ ನಾನಿರುವ ಈಗಿನ ಸ್ಥಿತಿಯಲ್ಲಿ ರಾಜಧಾನಿಯ ಆಸ್ಪತ್ರೆಗೆ ಹೋದರೂ ಯಾವ ಪ್ರಯೋಜನವೂ ಆಗುವುದಿಲ್ಲ. ನಾನು ಬಹಳ ಕಾಲ ಬದುಕಲಾರೆನೆಂದು ನನ್ನ ಮನಸ್ಸು ಹೇಳುತ್ತಿದೆ." ಎಂದು ನುಡಿದನು.

"ತಾವು ಈ ರೀತಿಯ ನಿರಾಶೆಯ ಮನೋಭಾವನೆಯನ್ನು ತಾಳಬಾರದು. ಆತ್ಮ ಚಿತ್ತಗಳ ಭರವಸೆಯೇ ಆರೋಗ್ಯದ ಮೂಲ. ಆತ್ಮವಿಶ್ವಾಸವನ್ನು ಕಳೆದುಕೊಳ್ಳುವುದು ಆರೋಗ್ಯಕ್ಕೆ ಹಾನಿ."

"ಆರೋಗ್ಯದ ಹಾನಿ ವೃದ್ಧಿಗಳಿಗೆ ಆತ್ಮ ಚಿತ್ತಗಳು ಎಷ್ಟರಮಟ್ಟಿಗೆ ಕಾರಣವೆಂದು ಹೇಳುವುದು ಸುಲಭವಲ್ಲ. ದೇಹ ಸಂಪೂರ್ಣ ದುರ್ಬಲವಾದಾಗ ಆತ್ಮ ಚಿತ್ತಗಳು ಏನು ಮಾಡಬಲ್ಲವು?"

"ತಾವು ನಿರಾಶರಾಗಬಾರದು. ತಮ್ಮಿಂದ ಇನ್ನೂ ಮಹತ್ಕಾರ್ಯಗಳು ನಡೆಯಬೇಕಾಗಿವೆ. ದುಷ್ಟರ ದುರಾಡಳಿತದಿಂದ ಜನರು ಬೇಸತ್ತು ಹೋಗಿದ್ದಾರೆ. ರಾಜ್ಯದ ಭಂಡಾರವು ಬರಿದಾಗುತ್ತಾ ಇದೆ. ಬಡ ಬಗ್ಗರನ್ನು ಕೇಳುವವರೇ ಇಲ್ಲ. ಜನರಿಗೆ ಕಾನೂನಿನ ರಕ್ಷಣೆಯೇ ದೊರಕದಂತಾಗಿದೆ. ಶಂಭು ದಾಮೋದರರ ಅನುವರ್ತಿಗಳು ಅಲ್ಲಲ್ಲಿ ಸರ್ವಾಧಿಕಾರಿಗಳಾಗಿದ್ದಾರೆ. ಜಾತ್ಯತೀತದ ಹೆಸರಿನಲ್ಲಿ ಜಾತೀಯತೆ ನಡೆಯುತ್ತಾ ಇದೆ. ಇದನ್ನೆಲ್ಲಾ ಸರಿಪಡಿಸಲು ತಮಗಲ್ಲದೆ ಇನ್ಯಾರಿಗೆ ಸಾಧ್ಯವಿದೆ? ತಾವು ತಮಗಾಗಿ ಬದುಕದಿದ್ದರೂ ಜನತೆಗಾಗಿ ಬದುಕಬೇಕು."

"ನಾನೇನು ಮಹಾತ್ಮನೇನಯ್ಯಾ? ಒಬ್ಬಿಬ್ಬರು ಎಷ್ಟೇ ಪ್ರಭಾವಶಾಲಿಗಳಾಗಿದ್ದರೂ ದೇಶದ ಆಗು ಹೋಗುಗಳನ್ನು ಸಂಪೂರ್ಣವಾಗಿ ಸರಿಪಡಿಸಲಾರರು. ನೀನು ಕಾಂಗ್ರೆಸ್ಸನ್ನು

ಬಿಡಬಾರದಾಗಿತ್ತೆಂದು ನನಗೆ ತೋರುತ್ತದೆ. ನೀನು ಕಾಂಗ್ರೆಸ್ಸಿನಲ್ಲೇ ಇದ್ದಿದ್ದರೆ ಸ್ವಲ್ಪ ಮಟ್ಟಿಗಾದರೂ ಈ ಅನಾಹುತಗಳನ್ನು ತಡೆಗಟ್ಟಬಹುದಾಗಿತ್ತು."

"ಅನಾಹುತಗಳನ್ನು ತಡೆಗಟ್ಟಲು ಪ್ರಯತ್ನಿಸಿದ ತಮಗೇನಾಗಿದೆ ಇಂದು? ತಮ್ಮಂತವಹವರಿಗೆ ಸಾಧ್ಯವಾಗದ ಕೆಲಸ ನನ್ನಂತಹವರಿಗೆ ಸಾಧ್ಯವೆ?"

"ನೀನು ಕಾಂಗ್ರೆಸ್ ಬಿಟ್ಟಿದ್ದರಿಂದ ಬಂದ ಲಾಭವೇನು?"

"ಇನ್ನಾವ ಲಾಭವಿಲ್ಲದಿದ್ದರೂ ಆ ದುಷ್ಟ ಶಂಭುವನ್ನು ಸೋಲಿಸಿದ ತೃಪ್ತಿ ನನಗಿದೆ. ನಾನು ಕಾಂಗ್ರೆಸ್ಸಿನಲ್ಲೇ ಇದ್ದಿದ್ದರೆ ದುಷ್ಟರು ಕಾಂಗ್ರೆಸ್ಸಿನ ಹೆಸರಿನಲ್ಲಿ ನಡೆಸುತ್ತಿರುವ ಅಕ್ರಮ ಅನ್ಯಾಯಗಳಿಗೆ ಅಪ್ರತ್ಯಕ್ಷನಾಗಿ ಹೊಣೆಯಾಗುತ್ತಿದ್ದೆ. ಕಾಂಗ್ರೆಸ್ ಬಿಟ್ಟಿರುವುದರಿಂದ ನನಗೆ ತಿಳಿದುದನ್ನು ನಿರ್ಭಯವಾಗಿ ಬಿಚ್ಚುಮನಸ್ಸಿನಿಂದ ಜನತೆಗೆ ತಿಳಿಸುವ ಸ್ವಾತಂತ್ರ್ಯ ಬಂದಿದೆ."

" ಪ್ರತಾಪ್ ಸ್ವಲ್ಪ ಕಾಲ ತಾಳ್ಮೆಯಿಂದಿರಬೇಕು. ಕಾಲಕ್ರಮೇಣ ಜನಜಾಗ್ರತಿ ಉಂಟಾದ ಹಾಗೆಲ್ಲಾ ರಾಜಕಾರಣ ಹಸನಾಗುತ್ತದೆ."

"ನನಗೆ ಹಾಗೆ ಅನ್ನಿಸುವುದಿಲ್ಲ. ಈ ಪ್ರದೇಶದಲ್ಲಿ ಜನರು ಜಾಗೃತರಾಗುವುದು ಬಹಳ ಕಷ್ಟ. ಕ್ರಾಂತಿಯಾದರೆ ಮಾತ್ರ ಜನಸಾಮಾನ್ಯರಿಗೆ ಪರಿಹಾರ ದೊರಕುತ್ತದೆ. ಇಲ್ಲವಾದರೆ ಇದೇ ನರಕ ಯಾತನೆ."

"ಅದು ನಿನ್ನ ಭ್ರಾಂತಿ. ಅಕ್ಕಿ ತಿನ್ನುವವನು ಹೋದರೆ ಬತ್ತ ತಿನ್ನುವವನು ಬರುತ್ತಾನೆ; ಹಪ್ಪಳ ತಿನ್ನುವವನು ಹೋದರೆ ಕದ ತಿನ್ನುವವನು ಬರುತ್ತಾನೆ. ಕ್ರಾಂತಿಯಾದೊಡನೆ ಜನಸಾಮಾನ್ಯರಿಗೆ ಸುಖ ಸಂಪತ್ತು ಲಭಿಸುತ್ತದೆ ಎಂಬ ಭರವಸೆಯೆಲ್ಲಿದೆ? ಇದುವರೆಗೆ ಕ್ರಾಂತಿಯಾಗಿರುವ ಎಲ್ಲಾ ದೇಶಗಳಲ್ಲೂ ಜನಸಾಮಾನ್ಯರಿಗೆ ಸುಖ ಶಾಂತಿಗಳು ದೊರಕಿವೆಯೇನು? ಕ್ರಾಂತಿಯಾಗಿರುವ ಕೆಲವು ದೇಶಗಳಲ್ಲಿ ಬಡಬಗ್ಗರು ಆಳರಸರ ಗುಲಾಮರಾಗಿದ್ದಾರೆ. ಅವರು ಕೂರೆಂದರೆ ಕೂರಬೇಕು; ಏಳೆಂದರೆ ಏಳಬೇಕು. ಕೆಲವು ದೇಶಗಳಲ್ಲಿ ಕ್ರಾಂತಿಯಾದ ನಂತರ ಪರಿಸ್ಥಿತಿ ಮತ್ತಷ್ಟು ಹದಗೆಟ್ಟ ನಿದರ್ಶನಗಳೂ ಇವೆ. ಕ್ರಾಂತಿಯಾದೊಡನೆ ಈ ದೇಶದಲ್ಲಿ ರಾಮರಾಜ್ಯದ ಉದಯವಾಗುತ್ತದೆಂದು ನಿನಗಾರು ಹೇಳಿದರು.? ಇಂದು ಈ ದೇಶಕ್ಕೆ ಬೇಕಾಗಿರುವುದು. ಸಿದ್ಧಾಂತಗಳ ಘರ್ಷಣೆಗಳಲ್ಲ; ಶುದ್ಧವಾದ ಸಮರ್ಥ ಆಡಳಿತ ಮತ್ತು ಬಡಬಗ್ಗರ ಉದ್ಧಾರ. ಇಂದು ಈ ದೇಶದಲ್ಲಿ ರಾಜಕೀಯ ಕ್ರಾಂತಿಗಿಂತ ನೈತಿಕ ಕ್ರಾಂತಿ ಅವಶ್ಯಕ. ನಮ್ಮ ಜನರು ಅಪ್ರಮಾಣಿಕತೆಯನ್ನೂ, ಸೋಮಾರಿತನವನ್ನೂ, ಜಾತೀಯತೆಯನ್ನೂ ಗೆದ್ದರೆ ನಮ್ಮನ್ನು ಜಗತ್ತಿನಲ್ಲಿ ಯಾರೂ ಗೆಲ್ಲಲಾರರು............"

ಅಷ್ಟು ಹೊತ್ತಿಗೆ ನಿರ್ಮಲಾದೇವಿಯವರು ಕೊಠಡಿಯೊಳಗೆ ಪ್ರವೇಶಿಸಿ, "ಡಾಕ್ಟರು ಮಾತನಾಡುವುದು ಬೇಡವೆಂದು ಎಷ್ಟು ಹೇಳಿದರೂ ನೀವು ಬಂದವರ ಹತ್ತಿರವೆಲ್ಲಾ ಉಪನ್ಯಾಸ ಮಾಡುತ್ತೀರಲ್ಲ ! ನಿಮಗೇನು ಹೇಳಬೇಕು! ಪ್ರತಾಪ್‌ರಾಜ್, ನೀವು ಸ್ನೇಹಿತರು. ಅವರು ಬಳಲಿರುವುದು ನಿಮ್ಮ ಕಣ್ಣಿಗೆ ಕಾಣುವುದಿಲ್ಲವೇ? ನೀವು ಅವರೊಡನೆ

ಮಾತನಾಡುವುದು ಶುದ್ಧ ತಪ್ಪು. ದಿನವೂ ನೂರಾರು ಜನ ಇಲ್ಲಿಗೆ ಬರುತ್ತಾರೆ. ಬಂದವರೆಲ್ಲಾ ಈ ರೀತಿ ಮಾತನಾಡಿದರೆ ಅವರ ಗತಿಯೇನು.?"

"ತಾಯಿ, ದಯವಿಟ್ಟು ಕ್ಷಮಿಸಿ. ನನಗೆ ಗೊತ್ತಾಗಲಿಲ್ಲ"

"ಪ್ರತಾಪ್‌ರಾಜ್, ನನ್ನ ಮಾತಿನಿಂದ ತಮಗೆ ನೋವಾಯಿತೋ ಏನೋ. ಈಚೆಗೆ ನನ್ನ ಮನಸ್ಸೇ ಸ್ಥಿಮಿತವಾಗಿಲ್ಲ. ಜೀವನವೇ ಬೇಡವಾಗಿದೆ. ಸತ್ಯ, ಸತ್ಯ ಅಂತ ಹೇಳಿ ನಮಗೆ ಈ ದುರ್ಗತಿ ಬಂದಿದೆ. ಮಾಡಬಾರದ ಕೆಲಸ ಮಾಡಿ ಲಂಚ ಹೊಡೆದವರು ಸುಖವಾಗಿ ಮೆರೆಯುತ್ತಿದ್ದಾರೆ. ಅವರಿಗೆ ಯಾವ ಸಂಕಟವೂ ಇಲ್ಲ; ಯಾವ ಕಷ್ಟವೂ ಇಲ್ಲ. ನಮ್ಮ ಪಾಲಿಗೆ ಎಲ್ಲಾ ಸಂಕಟ; ಎಲ್ಲ ಕಷ್ಟ. ಒಂದೊಂದು ಸಾರಿ ಆಲೋಚಿಸಿದರೆ ದೇವರೇ ಇಲ್ಲವೆಂದು ತೋರುತ್ತದೆ."

"ದೇವರಿಲ್ಲದೆ ಎಲ್ಲಿ ಹೋಗಿದ್ದಾನೆ ತಾಯಿ? ಸತ್ಯಕ್ಕೆ ಒಂದಲ್ಲ ಒಂದು ದಿನ, ಒಂದಲ್ಲ ಒಂದು ರೀತಿಯಲ್ಲಿ ಜಯ ಲಭಿಸಿಯೇ ಲಭಿಸುತ್ತದೆ. ಈ ರಾಜ್ಯದ ಲಂಚಕೋರರನ್ನೂ ಲಾಭಕೋರರನ್ನೂ ಜನರು ಹಾದಿ ಬೀದಿಗಳಲ್ಲಿ ಬೇಟೆಯಾಡುವ ಕಾಲ ಬರುತ್ತದೆ. ಆ ಕಾಲ ಬಹಳ ದೂರವಿಲ್ಲ ತಾಯಿ."

"ಏನೋ ಅಪ್ಪ, ಯಾವಾಗ ದೇವರು ಕಣ್ಬಿಡುತ್ತಾನೋ?"

ಪ್ರತಾಪರಾಜನೂ, ನಿರ್ಮಲಾದೇವಿಯವರೂ ಈ ರೀತಿಯಲ್ಲಿ ಮಾತನಾಡು ತ್ತಿರುವಾಗ, ದುರ್ಗಾದಾಸರಿಗೆ ಇದ್ದಕ್ಕಿದ್ದಂತೆ ಮೂರ್ಛೆ ಕವಿಯಿತು. ಅವರ ದೇಹ ನಿಶ್ಚಲವಾಯಿತು. ಎಲ್ಲರೂ ಗಾಬರಿಗೊಂಡು ಅಂತ್ಯಕಾಲ ಸಮೀಪಿಸಿತೆಂದು ಚಿಂತಿಸುತ್ತಿದ್ದರು. ಸ್ವಲ್ಪ ಹೊತ್ತಿನ ತರುವಾಯ ದಾಸರು ಕಣ್ಣು ಬಿಟ್ಟರು. ಆ ದಿನ ಸಾಯಂಕಾಲ ಅಮರ್‌ಚಂದರೂ, ಭಾರ್ಗವದಾಸರೂ ಜಿತೇಂದ್ರಪುರಕ್ಕೆ ಬಂದರು. ಅವರ ನಿರ್ಮಲಾದೇವಿಯವರೊಡನೆಯೂ, ಪ್ರತಾಪರಾಜನೊಡನೆಯೂ ಕಲೆತು ಮಾತನಾಡಿ ಹೇಗಾದರೂ ಮಾಡಿ ದಾಸರನ್ನು ರಾಜಧಾನಿಯ ದೊಡ್ಡ ಆಸ್ಪತ್ರೆಗೆ ಕರೆದೊಯ್ಯಬೇಕೆಂದು ತೀರ್ಮಾನಿಸಿದರು. ಆದರೆ ಅಂಗಲಾಚಿ ಬೇಡಿಕೊಂಡರೂ ಸಹ ದಾಸರು ಒಪ್ಪಲಿಲ್ಲ. ಅವರ ದೇಹ ಸ್ಥಿತಿ ಇನ್ನೂ ವಿಷಮಿಸುವ ಸೂಚನೆ ಕಂಡು ಬರುತ್ತಿದ್ದುದರಿಂದ ಭಾರ್ಗವದಾಸರೂ, ಅಮರಚಂದ್ರರೂ, ಪ್ರತಾಪರಾಜನೂ ಆ ದಿನ ಜಿತೇಂದ್ರಪುರದಲ್ಲಿಯೇ ಉಳಿದುಕೊಂಡರು.

ಮರುದಿನ ಪ್ರಾತಃಕಾಲ ದುರ್ಗಾದಾಸರ ಸ್ಥಿತಿ ಇನ್ನೂ ಹೆಚ್ಚು ವಿಷಮಿಸಿತು. ತಾನು ಇನ್ನು ಕೆಲವು ಗಂಟೆಗಳೊಳಗಾಗಿ ಇಹಲೋಕವನ್ನು ತ್ಯಜಿಸುತ್ತೇನೆಂಬ ಮುನ್ಸೂಚನೆ ಅವರಿಗೆ ಹೊಳೆಯಿತು. ಮಗ ಜಯಸಿಂಹನನ್ನು ತಮ್ಮ ಬಳಿಗೆ ಕರೆಯಿಸಿಕೊಂಡು, "ವತ್ಸಾ ಜಯಸಿಂಹ, ನಿಮ್ಮೆಲ್ಲರನ್ನೂ ಬಿಟ್ಟು ಹೋಗುವ ಕಾಲ ದೂರವಿಲ್ಲ. ನಿನಗೆ ನಾನು ಆಸ್ತಿಯನ್ನೇನೂ ಬಿಟ್ಟಿರುವುದಿಲ್ಲ. ಭಗವಂತನ ಅನುಗ್ರಹ ಮತ್ತು ನನ್ನ ಆಶೀರ್ವಾದ ಇವೇ ಆಸ್ತಿ. ನಿನ್ನ ತಾಯಿಯನ್ನೂ ತಂಗಿಯನ್ನೂ ಕಾಪಾಡುವ ಹೊಣೆ ನಿನ್ನದಾಗಿದೆ. ಗುಣವನ್ನು ಪರೀಕ್ಷಿಸುವ ಮುನ್ನ ಯಾರನ್ನೂ ನಂಬಬೇಡ. ಮಾನವರನ್ನು ನಂಬುವುದಕ್ಕಿಂತ

ದೇವರನ್ನು ನಂಬುವುದೇ ಮೇಲು," ಎಂದು ನುಡಿಯುತ್ತಿರುವಲ್ಲಿ ಅವರ ನಾಲಗೆ ಬಿದ್ದು ಹೋಯಿತು; ಮಾತು ನಿಂತು ಹೋಯಿತು. ಪಕ್ಕದಲ್ಲೇ ನಿಂತಿದ್ದ ಚಂಚಲೆಯ ಮೈಯನ್ನು ನೇವರಿಸಿ ಅವಳ ತಲೆಯ ಮೇಲೆ ಕೈಯಿಟ್ಟು ಪ್ರಜ್ಞಾ ಶೂನ್ಯರಾದರು.

ಆ ಬಳಿಕ ಅವರಿಗೆ ಪ್ರಜ್ಞೆಯೇ ಇರಲಿಲ್ಲ. ಆದಿನ ಸಾಯಂಕಾಲ ಅವರು ಇಹಲೋಕವನ್ನು ಬಿಟ್ಟು ಸ್ವರ್ಗಸ್ಥರಾದರು. ನಿರ್ಮಲಾದೇವಿಯವರೂ, ಭಾರ್ಗವದಾಸರೂ, ಅಮರ ಚಂದ್ರರೂ, ಮತ್ತು ಪ್ರತಾಪರಾಜನೂ ಮನೆಯಲ್ಲೇ ಇದ್ದರೂ ಕೊನೆಯ ಗಳಿಗೆಯಲ್ಲಿ ದಾಸರೊಡನೆ ಮಾತನಾಡುವ ಪುಣ್ಯ ಅವರಿಗೆ ಲಭಿಸಲಿಲ್ಲ. ದುರ್ಗಾದಾಸರ ಅಂತ್ಯ ದರ್ಶನಕ್ಕಾಗಿ ಜಿಲ್ಲೆಯ ಮತ್ತು ರಾಜ್ಯದ ಹಲವು ಕಡೆಗಳಿಂದ ಜನರು ತಂಡೋಪತಂಡವಾಗಿ ಬರತೊಡಗಿದರು. ಮರುದಿನ ಅವರ ಸ್ಮಶಾನ ಯಾತ್ರೆ ನಡೆಯತಕ್ಕದೆಂದು ಗೊತ್ತಾಗಿತ್ತು. ಮಧ್ಯ ರಾತ್ರಿಯವರೆಗೂ ಸಾವಿರಾರು ಜನರು ಜಿತೇಂದ್ರಪುರಕ್ಕೆ ಬಂದು ತಮ್ಮ ಆದರ್ಶ ನಾಯಕನ ಅಂತ್ಯ ದರ್ಶನವನ್ನು ಪಡೆದರು.

ಬಂಧು ಬಾಂಧವರೂ, ಸ್ನೇಹಿತರೂ, ಹಿತೈಷಿಗಳೂ, ಅನಾಥರಂತೆ ಅಳುತ್ತಿದ್ದರು. ಜಯಸಿಂಹನೂ, ಚಂಚಲೆಯೂ, ಅತ್ತೂ ಅತ್ತೂ ಸಾಕಾಗಿ, ತಂದೆಯ ಶವದ ಸಮೀಪ ದಲ್ಲಿಯೇ ನೆಲದ ಮೇಲೆ ಮಲಗಿ ನಿದ್ದೆ ಹೋದರು. ನಡುರಾತ್ರಿ ಗಾಢನಿದ್ರೆಯಲ್ಲಿ ಮಲಗಿದ್ದ ಜಯಸಿಂಹನು ಎದೆಯನ್ನು ತಟ್ಟಿ, "ಅಪ್ಪಾ ನಿನ್ನ ರಕ್ತ ಧಮನಿಗಳಲ್ಲಿ ಎಲ್ಲಿಯವರೆಗೆ ಹರಿಯುತ್ತಿರುವುದೋ ಅಲ್ಲಿಯವರೆಗೆ ನಿನ್ನ ವೈರಿಗಳನ್ನು ಸದೆಬಡಿಯದೆ ಬಿಡಲಾರೆನು," ಎಂದು ಆರ್ಭಟಿಸಿದನು. ಜಯಸಿಂಹನು ಕನಸಿನಲ್ಲಿ ಆಡಿದ ಮಾತುಗಳು ಅಲ್ಲಿದ್ದವರ ಎದೆಯನ್ನು ನಡುಗಿಸುವಂತಿದ್ದುವು.

ಬೆಳಗಾಯಿತು. ಬೆಳಗಾದ ಮೇಲೂ ದಿವಂಗತರ ಅಂತ್ಯದರ್ಶನಕ್ಕಾಗಿ ಜನ ಸಮೂಹ ಸಾಲು ಸಾಲಾಗಿ ಬರುತ್ತಲೇ ಇದ್ದಿತು. ಸುಮಾರು ಒಂಬತ್ತು ಗಂಟೆಯ ಸಮಯದಲ್ಲಿ ಮುಖ್ಯಮಂತ್ರಿ ದಾಮೋದರನೂ, ಮಂತ್ರಿ ಶಂಭುವೂ ದುರ್ಗಾದಾಸರ ಮನೆಗೆ ಬಂದು, ಅತ್ಯಂತ ದುಃಖಕ್ಕೊಳಗಾದವರಂತೆ ನಟಿಸಿ, ಸಂತಾಪವನ್ನು ಸೂಚಿಸಿದರು. ರಾತ್ರಿ ಕನಸಿನಲ್ಲಿ ಜಯಸಿಂಹನು ಆಡುತ್ತಿದ್ದ ಮಾತುಗಳನ್ನು ಕೇಳಿದ್ದವರು ಅವನು ಶಂಭು ದಾಮೋದರರಿಗೆ ಏನಾದರೂ ಅಪಾಯವನ್ನೆಸಗಬಹುದೆಂದು ಶಂಕಿಸುತ್ತಿದ್ದರು. ಆದರೆ ಸುಸಂಸ್ಕೃತನಾದ ಜಯಸಿಂಹನು ಮನೆಗೆ ಬಂದಿದ್ದ ವೈರಿಗಳನ್ನು ವಿನಯ ಗೌರವಗಳಿಂದ ಕಂಡನು.

ದಾಮೋದರನು ಹಿಂತಿರುಗಿ ಹೋಗುವ ಮುನ್ನ, ಜಯಸಿಂಹನನ್ನು ಒಂದು ಪಕ್ಕಕ್ಕೆ ಕರೆದುಕೊಂಡು ಹೋಗಿ, ತನ್ನಿಂದ ಏನಾದರೂ ಸಹಾಯ ಬೇಕಾಗಿದ್ದಲ್ಲಿ ಸಹಾಯವನ್ನು ಮಾಡಲು ಸದಾ ಸಿದ್ಧನೆಂದು ಹೇಳಿದನು. ಆಗ ಜಯಸಿಂಹನು, "ತಾನು ತಮಗೆ ತುಂಬಾ ಆಭಾರಿಯಾಗಿದ್ದೇನೆ. ತಮ್ಮಿಂದ ನನಗೆ ಯಾವ ಸಹಾಯವೂ ಬೇಕಾಗಿಲ್ಲ," ಎಂಬುದಾಗಿ ಉತ್ತರ ಕೊಟ್ಟನು.

ಹೇಮಾವತಿ ರಾಜ್ಯದ ಲಕ್ಷಾಂತರ ಮನೆಗಳಲ್ಲಿ ಮನೆ ಮಾತಾಗಿದ್ದ, ಬಡ ಬಗ್ಗರೆಲ್ಲರ ಮನೆ ದೇವರಾಗಿದ್ದ, ದುರ್ಗಾದಾಸರ ಸ್ಮಶಾನ ಯಾತ್ರೆ ಅತ್ಯಂತ ವೈಭವದಿಂದ ನಡೆಯಿತು. ಸಾವಿರಾರು ಜನರು ತಮ್ಮ ನಾಯಕನಿಗೆ ಶ್ರದ್ಧೆ ಭಕ್ತಿಗಳಿಂದ ಕೂಡಿದ ಗೌರವ ಸಲ್ಲಿಸಿದರು. ಅವರ ನಿಧನದಿಂದ ರಾಜ್ಯದಲ್ಲಿ ಏನೋ ಒಂದು ವಿಧವಾದ ಶೂನ್ಯ ಆವರಿಸಿತ್ತು. ಲಕ್ಷಾಂತರ ಜನರು ತಬ್ಬಲಿಗಳಂತೆ ಕಂಬನಿಗರೆದರು.

* * * *

## ೧೧. ಸತೀಶ

ದಾಮೋದರನ ದುರಾಡಳಿತ ಪ್ರಾರಂಭವಾಗಿ ಎರಡೂವರೆ ವರ್ಷಗಳಾಗಿದ್ದುವು. ದುರ್ಗಾದಾಸರು ದಿವಂಗತರಾಗಿ ಆರು ತಿಂಗಳಾಗಿದ್ದವು. ಶಂಭು ದಾಮೋದರರ ನಿರಂಕುಶ ಪ್ರಭುತ್ವದಿಂದ ಜನರು ಬೇಸತ್ತು ಹೋಗಿದ್ದರು. ಲಂಚದ ಪ್ರವಾಹ ಎಲ್ಲೆ ಮೀರಿ ಹರಿಯುತ್ತಿತ್ತು. ಲಂಚದ ಕೀಲೆಣ್ಣೆಯಿಲ್ಲದೆ, ಪ್ರಭಾವದ ಚೈತನ್ಯವಿಲ್ಲದೆ, ಆಡಳಿತ ಯಂತ್ರದ ಚಕ್ರಗಳು ತಿರುಗುತ್ತಲೇ ಇರಲಿಲ್ಲ. ಮಂತ್ರಿಗಳು ಕೆಲವರು ಲಂಚಕೋರರಾಗಿದ್ದುದರಿಂದ ಅಧಿಕಾರಿಗಳು ನಿರ್ಭಯದಿಂದ ಲಂಚದ ವ್ಯವಹಾರವನ್ನು ಸಾಗಿಸುತ್ತಿದ್ದರು. ದುಷ್ಟರಿಗೆ ಹೆದರಿ ಶಿಷ್ಟರು ಮೂಲೆಯನ್ನು ಹಿಡಿದಿದ್ದರು; ಅಪ್ರಮಾಣಿಕರ ಅಟ್ಟಹಾಸಕ್ಕೆ ಹೆದರಿ, ಪ್ರಮಾಣಿಕರು ತೆಪ್ಪಗಾಗಿದ್ದರು.

ಶಂಭು ದಾಮೋದರರು ತಮ್ಮ ರಾಜಕಾರಣಕ್ಕಾಗಿ ಹದಿನೈದು ವರ್ಷಗಳ ಯೋಜನೆಯೊಂದನ್ನು ಸಿದ್ಧಗೊಳಿಸಿ, ಆ ಯೋಜನೆಗನುಗುಣವಾಗಿ ಕಾರುಬಾರುಗಳನ್ನು ಮಾಡುತ್ತಿದ್ದರು. ವಿರೋಧ ಪಕ್ಷಗಳ ಕೆಲವು ಧುರೀಣರನ್ನು ನಾನಾ ಆಶೋತ್ತರಗಳಿಂದ ತಮ್ಮ ಪಕ್ಷಕ್ಕೆ ಸೇರಿಸಿಕೊಂಡಿದ್ದರು. ಚುನಾವಣೆಗೆ ಇನ್ನೂ ಎರಡೂವರೆ ವರ್ಷಗಳಿರುವಾಗಲೇ ಮುಂಬರಲಿದ್ದ ಓಟಿನ ಬೇಟೆಗಾಗಿ ಸಕಲ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು. ಸರ್ಕಾರದ ಸಹಾಯವನ್ನು ಕೋರಿ ತಮ್ಮ ಬಳಿಗೆ ಬರುತ್ತಿದ್ದ ಕಂಟ್ರಾಕ್ಟ್, ಪರ್ಮಿಟ್, ಲೈಸನ್ಸ್ ಮುಂತಾದ ಅನುಗ್ರಹಗಳ ಹಿಡುವಳಿದಾರರಿಂದಲೂ ಮತ್ತು ಇತರರಿಂದಲೂ,. ರಾಜಕಾರಣದ ಹೆಸರಿನಲ್ಲಿ ತಮ್ಮ ಗುಂಪಿನ ಗುಪ್ತ ನಿಧಿಗೆ ಯಥೇಚ್ಛವಾಗಿ ಹಣ ಸಂಗ್ರಹಿಸುತ್ತಿದ್ದರು. ಚುನಾವಣೆ ಬರುವುದರೊಳಗಾಗಿ ಒಂದೂವರೆ ಕೋಟಿ ರೂಪಾಯಿಗಳ ಗುಪ್ತ ನಿಧಿಯನ್ನು ಶೇಖರಿಸಿ, ಆ ನಿಧಿಯಿಂದ ಮತದಾರರನ್ನೂ, ಶಾಸಕರನ್ನೂ ಕೊಂಡುಕೊಳ್ಳಬೇಕೆಂದು ಅವರು ಯೋಚಿಸಿದ್ದರು. ಗುಂಪು ನಿಧಿಗೆಂದು ಅವರು ಸಂಗ್ರಹಿಸುತ್ತಿದ್ದ ಹಣಕ್ಕೆ ದಾಖಲೆ ದೂಕಲೆಗಳೂ ಇರಲಿಲ್ಲ; ಲೆಕ್ಕ ಪತ್ರಗಳೂ ಇರಲಿಲ್ಲ. ವಸೂಲಾದ ಹಣದಲ್ಲಿ ಅರೆವಾಸಿಯನ್ನು ಶಂಭು ದಾಮೋದರರು ತಮ್ಮ ಸ್ವಂತ ಬೊಕ್ಕಸಕ್ಕೆ ಸೇರಿಸುತ್ತಿದ್ದರು.

ಸತ್ಯವಂತ ಸರ್ಕಾರಿ ನೌಕರರ ಗೋಳಂತೂ ಹೇಳತೀರದು. ಅವರು ಕಾರ್ಯ ನಿರ್ವಹಿಸುವುದೇ ಕಷ್ಟಕರವಾಗಿತ್ತು. ಸರ್ಕಾರಿ ಅಧಿಕಾರಿಗಳ ದಕ್ಷತೆ ಮತ್ತು ಪ್ರಾಮಾಣಿಕತೆಯನ್ನಳೆಯಲು ಶಂಭು ದಾಮೋದರರು ಎರಡು ವಿಧವಾದ ಅಳತೆಗೋಲುಗಳನ್ನು ಇಟ್ಟಿದ್ದರು. ತಮಗೆ ಬೇಕಾದವರು ಉದ್ದೇಶ ಪೂರ್ವಕವಾಗಿ ಆನೆಯನ್ನು ನುಂಗಿದರೂ, ಅದು ಅಪರಾಧವೆನಿಸುತ್ತಿರಲಿಲ್ಲ. ತಮಗೆ ಬೇಡವಾದವರು ಆಕಸ್ಮಿಕವಾಗಿ ನೊಣವನ್ನು

ನುಂಗಿದರೂ ಸಹ ಅಂದೊಂದು ದೊಡ್ಡ ಅಪರಾಧವಾಗುತ್ತಿತ್ತು. ಹೊಸದಾಗಿ ಸರ್ಕಾರಿ ನೌಕರರನ್ನು ನೇಮಕ ಮಾಡಿಕೊಳ್ಳುವ ಅಧಿಕಾರವೆಲ್ಲವನ್ನು ಶಂಭು ತನ್ನವರಿಗೇ ಕೊಟ್ಟಿದ್ದನು. ಎಲ್ಲಾ ಇಲಾಖೆಗಳಲ್ಲೂ ಶಂಭುವಿನ ಕೈವಾಡ ಇರುತ್ತಿತ್ತು. ಈ ಕೈವಾಡಗಳಿಗೆ ದಾಮೋದರನ ಅಪ್ರತ್ಯಕ್ಷ ಬೆಂಬಲವಿರುತ್ತಿತ್ತು.

ಶಂಭು ದಾಮೋದರರ ಆಗ್ರಹಕ್ಕೆ ತುತ್ತಾದ ಅಧಿಕಾರಿಗಳ ಪೈಕಿ, ನಿಂಬೂರಿನ ಅಸಿಸ್ಟೆಂಟ್ ಕಮಿಷನರ್ ಸತೀಶ ಒಬ್ಬನಾಗಿದ್ದ. ಸತೀಶನು ಒಬ್ಬ ಪ್ರತಿಭಾವಂತ ಜೂನಿಯರ್ ಐ.ಎ.ಎಸ್. ಅಧಿಕಾರಿ. ದುರ್ಗಾದಾಸರು ಮುಖ್ಯಮಂತ್ರಿಯಾಗಿದ್ದಾಗ, ಅವನನ್ನು ನಿಂಬೂರಿನ ಅಸಿಸ್ಟೆಂಟ್ ಕಮಿಷನರ್ ಆಗಿ ನೇಮಕ ಮಾಡಿದ್ದರು. ಅಸಿಸ್ಟೆಂಟ್ ಕಮಿಷನರ ಹುದ್ದೆ ಅಷ್ಟೊಂದು ಪ್ರಮುಖವಾದ ಹುದ್ದೆಯಾಗಿರಲಿಲ್ಲವಾದ್ದರಿಂದಲೂ, ಮೇಲ್ಪಟ್ಟ ಅಧಿಕಾರಿ ತಮ್ಮವನೇ ಆಗಿದ್ದ ಶಾಮಸುಂದರನಾಗಿದ್ದರಿಂದಲೂ, ಶಂಭು ದಾಮೋದರರು ಸತೀಶನನ್ನು ವರ್ಗಮಾಡಿರಲಿಲ್ಲ.

ಶಾಮಸುಂದರನು ಜಿಲ್ಲಾಧಿಕಾರಿಯಾಗಿ ನಿಂಬೂರಿಗೆ ಬಂದ ಮೇಲೆ, ಕೆಲವು ಕಾರಣಗಳ ದೆಸೆಯಿಂದ ಅವನಿಗೂ, ಸತೀಶನಿಗೂ ಬಿನ್ನಾಭಿಪ್ರಾಯ ಉಂಟಾಗಿತ್ತು. ಶಂಭುವಿನ ಭಕ್ತರಿಗೆ ಅಕ್ರಮವಾಗಿ ಸಹಾಯ ಮಾಡಬೇಕೆಂದು, ಶಾಮಸುಂದರನು ಆಗಾಗ ಸತೀಶನಿಗೆ ಬಾಯಾಜ್ಞೆ ಮಾಡುತ್ತಿದ್ದನು. ಆ ಆಜ್ಞೆಗಳು ಕಾನೂನಿಗೆ ವಿರುದ್ಧವಾಗಿರುತ್ತಿದ್ದರಿಂದ ಸತೀಶನು ಅವುಗಳನ್ನು ಪರಿಪಾಲಿಸುತ್ತಿರಲಿಲ್ಲ. ಒಂದೆರಡು ಸಾರಿ ಶಾಮಸುಂದರನು ತನ್ನ ಆಜ್ಞೆಯಂತೆ ನಡೆಯಬೇಕೆಂದು ಸತೀಶನಿಗೆ ಕಟುವಾಗಿ ಹೇಳಿದಾಗ, ಲಿಖಿತ ಮೂಲಕ ಆಜ್ಞೆಮಾಡಿದರೆ ಆ ಆಜ್ಞೆಗಳನ್ನು ಕಾರ್ಯಗತ ಮಾಡುವುದಾಗಿ ಸತೀಶನು ಸ್ಪಷ್ಟವಾಗಿ ದಿಟ್ಟತನದ ಉತ್ತರವನ್ನು ನೀಡಿದನು. ಈ ಕಾರಣದಿಂದ ಶಾಮಸುಂದರನಿಗೆ ಸತೀಶನ ಮೇಲೆ ವೈರ ಭಾವನೆ ಬೆಳೆಯತೊಡಗಿತು. ತನ್ನ ಕೈಕೆಳಗಿನ ಅಧಿಕಾರಿ ತನ್ನ ಮಾತನ್ನು ಕೇಳದಿರುವುದು ಅಕ್ಷಮ್ಯ ಅಪರಾಧವೆಂದು ಶಾಮಸುಂದರನು ಭಾವಿಸಿದನು.

ಶಾಮಸುಂದರನು ಲಂಚಕೋರ, ಕುಡುಕ ಮತ್ತು ಸ್ತ್ರೀಲೋಲ. ನಿಂಬೂರಿನ ಪೊಲೀಸ್ ಸೂಪರಿಂಟೆಂಡೆಂಟ್ ಉಮಾನಾಥನೂ ಸಹ ಅದೇ ರೀತಿಯ ದುರ್ನಡತೆಯವನು. ಅವರಿಬ್ಬರೂ ಶಂಭುವಿನ ಭಕ್ತರು. ಇಬ್ಬರೂ ಸೇರಿ ನಾನಾ ನೆಪದಲ್ಲಿ, ನಾನಾ ರೀತಿಯಲ್ಲಿ ನಿಂಬೂರು ಜಿಲ್ಲೆಯಲ್ಲಿ ಕೊಳ್ಳೆಹೊಡೆಯುತ್ತಿದ್ದರು. ದೊಡ್ಡ ದೊಡ್ಡ ಕೊಳ್ಳೆಗಳಲ್ಲಿ ಶಂಭುವಿಗೂ ಪಾಲು ಸಿಕ್ಕುತ್ತಿತ್ತು. ಆದ್ದರಿಂದ ಅವರಿಬ್ಬರಿಗೂ ಶಂಭುವಿನ ರಕ್ಷಣೆಯಿತ್ತು. ಇನ್‌ಸ್ಪೆಕ್ಟರುಗಳೂ ಉಮಾನಾಥನಿಗೆ ಕಪ್ಪವನ್ನು ಕೊಡಬೇಕಾಗಿತ್ತು. ತಹಸೀಲ್ದಾರರೂ, ಅಸಿಸ್ಟೆಂಟ್ ಕಮಿಷನರುಗಳೂ ಶ್ಯಾಮಸುಂದರನಿಗೆ ಕಪ್ಪವನ್ನು ಕೊಡಬೇಕಾಗಿತ್ತು. ಕಪ್ಪವನ್ನು ಕೊಟ್ಟವರು ದಕ್ಷರೆನಿಸಿಕೊಳ್ಳುತ್ತಿದ್ದರು; ಕೊಡದಿದ್ದವರು ಅಪ್ರಯೋಜಕರೆನಿಸಿಕೊಳ್ಳುತ್ತಿದ್ದರು.

ಜಿಲ್ಲೆಯ ಪ್ರಮುಖ ಉನ್ನತ ಅಧಿಕಾರಿಗಳೀರ್ವರು ಲಂಚಕೋರರಾಗಿದ್ದುದರಿಂದ ಉಳಿದ ಅಧಿಕಾರಿಗಳು ಅವರ ಮೇಲ್ಪಂಕ್ತಿಯನ್ನನುಸರಿಸಿದ್ದರು. ಲಂಚವಿಲ್ಲದೆ ಕಾಗದ

ಪತ್ರಗಳು ಚಲಿಸುತ್ತಲೇ ಇರಲಿಲ್ಲ. ಒಂದೇ ಮಾತಿನಲ್ಲಿ ಹೇಳುವುದಾದರೆ ಅಧಿಕಾರಿಗಳು ಆಡಳಿತದ ಹೆಸರಿನಲ್ಲಿ ಜನರನ್ನು ಸುಲಿಗೆ ಮಾಡುತ್ತಿದ್ದರು. ಆಹಾರ ದವಸಗಳ ಸಂಗ್ರಹಣೆಯ ನೆಪದಲ್ಲಿ ಲಂಚ; ಅಕ್ರಮ ದಾಸ್ತಾನು ತಡೆಗಟ್ಟುವ ನೆಪದಲ್ಲಿ ಲಂಚ; ಜಮೀನು ಹಂಚುವ ನೆಪದಲ್ಲಿ ಲಂಚ; ವಿಲ್ಲುಗಳ ತನಿಖೆಯ ನೆಪದಲ್ಲಿ ಲಂಚ; ಕಳ್ಳ ಸಾಗಾಣಿಕೆಯನ್ನು ನಿಲ್ಲಿಸುವ ನೆಪದಲ್ಲಿ ಲಂಚ; ಆಗಬೇಕಾದ್ದನ್ನು ಆಗದಂತೆ ಮಾಡುವುದಕ್ಕಾಗಿ ಲಂಚ; ಆಗಬಾರದ್ದನ್ನು ಆಗು ಮಾಡುವುದಕ್ಕಾಗಿ ಲಂಚ; ಹೀಗೆ ನಾನಾ ಮುಖವಾಗಿ ಲಂಚದ ಸಾಮ್ರಾಜ್ಯ ವಿಸ್ತರಿಸಿತ್ತು. ಕಳ್ಳ ಸಾರಾಯಿ ಮಾಡುವವರಿಗೂ, ಮಾರುವವರಿಗೂ ಲಂಚಕೋರ ಅಧಿಕಾರಿಗಳ ರಕ್ಷಣೆಯಿತ್ತು. ಕಳ್ಳ ವ್ಯವಹಾರಗಳೆಲ್ಲವೂ ಅಧಿಕಾರಿಗಳ ಬೆಂಬಲದಿಂದಲೇ ನಡೆಯುತ್ತಿದ್ದುವು.

ಸತೀಶನು ದಕ್ಷ ಮತ್ತು ಸತ್ಯವಂತ. ಕಾನೂನಿಗೂ, ದೇವರಿಗೂ, ಜನಾಭಿಪ್ರಾಯಕ್ಕೂ ಅಂಜಿ ನಡೆಯುತ್ತಿದ್ದವನು. ಅಕ್ರಮ ಅನೀತಿಗಳನ್ನು ಕಂಡರೆ ಅವನು ಸಹಿಸುತ್ತಿರಲಿಲ್ಲ. ಶಂಭುವೂ, ಶಾಮಸುಂದರನೂ ನಿಂಬೂರು ಜಿಲ್ಲೆಯಲ್ಲಿ ಆಡಳಿತದ ಹೆಸರಿನಲ್ಲಿ ನಡೆಯಿಸುತ್ತಿದ್ದ ಅನ್ಯಾಯ ಅಕ್ರಮಗಳನ್ನು ಕಂಡು ಅವನು ಕೋಪೋದ್ರಿಕ್ತನಾಗಿದ್ದನು. ಅವನಿಗೆ ಅವರ ವಿಚಾರದಲ್ಲಿ ಎಳ್ಳಷ್ಟೂ ಗೌರವವಿರಲಿಲ್ಲ.

ದಿನೇ ದಿನೇ, ಶಾಮಸುಂದರನಿಗೂ, ಸತೀಶನಿಗೂ ತಿಕ್ಕಾಟ ಹೆಚ್ಚಾಯಿತು; ವೈರ ಇಮ್ಮಡಿಯಾಗಿ ಬೆಳೆಯ ತೊಡಗಿತು. ಸತೀಶನನ್ನು ಹೇಗಾದರೂ ಮಾಡಿ ಅಧೋಗತಿಗೆ ತಳ್ಳಬೇಕೆಂದು ಶಾಮಸುಂದರನು ನಿರ್ಧರಿಸಿದನು. ಶಂಭುವಿನ ಹಿಂಬಾಲಕರನ್ನು ಪುಸಲಾಯಿಸಿ, ಅವರಿಂದ ಸತೀಶನ ಮೇಲೆ ಸುಳ್ಳು ಆರೋಪಗಳನ್ನು ಹೊರಿಸಿ, ಶಂಭುವಿಗೂ, ಮುಖ್ಯಮಂತ್ರಿ ದಾಮೋದರನಿಗೂ ಅರ್ಜಿಗಳನ್ನು ಬರೆಯಿಸತೊಡಗಿದನು. ಸತೀಶನು ಲಂಚಕೋರನೆಂದೂ, ಪ್ರತಾಪರಾಜನೊಡನೆ ಶರೀಕಾಗಿದ್ದಾನೆಂದೂ, ಆ ಅರ್ಜಿಗಳಲ್ಲಿ ಆಪಾದಿಸಲಾಗಿತ್ತು. ಕೆಲವು ಕಾಲದ ನಂತರ, ಶಾಮಸುಂದರನು ಸ್ವತಃ ಸತೀಶನ ಮೇಲೆ ಹಲವು ಸುಳ್ಳು ಆಪಾದನೆಗಳನ್ನು ಹೊರಿಸಿ, ಸರ್ಕಾರಕ್ಕೆ ಒಂದು ಸುಳ್ಳು ವರದಿಯನ್ನು ಕಳಿಸಿಕೊಟ್ಟನು.

ಸತೀಶನು ಜಿಲ್ಲಾಧಿಕಾರಿಯಾಗಿ ಬಡ್ತಿಯನ್ನು ಪಡೆಯಬೇಕಾಗಿದ್ದ ಹೊತ್ತಿಗೆ ಸರಿಯಾಗಿ, ಶಾಮಸುಂದರನ ಸುಳ್ಳು ವರದಿ ಮುಖ್ಯಮಂತ್ರಿಯ ಕೈಸೇರಿತು. ಅಷ್ಟು ಹೊತ್ತಿಗಾಗಲೇ ಶಂಭು ಸತೀಶನ ಮೇಲೆ ದಾಮೋದರನಿಗೆ ಚಾಡಿಯನ್ನು ಚುಚ್ಚಿದ್ದನು. ಈ ಕಾರಣಗಳಿಂದ, ಸತೀಶನ ಮೇಲೆ ಆಪಾದನೆಗಳ ವಿಚಾರದಲ್ಲಿ ತನಿಖೆಯಾಗುವವರೆಗೆ, ಅವನಿಗೆ ಬಡ್ತಿಯನ್ನು ನೀಡಬಾರದೆಂದು ದಾಮೋದರನು ಆಜ್ಞೆ ಮಾಡಿದನು. ಇಷ್ಟಕ್ಕೆ ತೃಪ್ತನಾಗದೆ ಸತೀಶನನ್ನು ನಿಂಬೂರಿನಿಂದ ಬೇರೊಂದು ಜಿಲ್ಲೆಗೆ ವರ್ಗಮಾಡಿ, ಅಪ್ರಯೋಜಕ ಹುದ್ದೆಯೊಂದಕ್ಕೆ ನೇಮಕ ಮಾಡಿದನು.

ಸತೀಶನ ಮೇಲೆ ಬಂದಿದ್ದ ಆರೋಪಗಳ ಸಂಬಂಧ ತನಿಖೆಯಾಗಬೇಕೆಂದು ಮುಖ್ಯಮಂತ್ರಿಯ ಆಜ್ಞೆಯಾಗಿ ಒಂದು ವರ್ಷವಾಗಿದ್ದರೂ, ಉದ್ದೇಶಪೂರ್ವಕವಾಗಿ

ತನಿಖೆಯನ್ನು ಪ್ರಾರಂಭಿಸಿರಲಿಲ್ಲ; ಬಡ್ತಿಯನ್ನೂ ನೀಡಿರಲಿಲ್ಲ. ಶಾಮಸುಂದರನ ಮತ್ತು ಶಂಭುವಿನ ಚಿತಾವಣೆಯಿಂದ ಹೀಗಾಗಿದೆಯೆಂಬುದನ್ನು ಸತೀಶನು ಅರಿತಿದ್ದನು. ತಾನು ನಿಸ್ಪೃಹತೆಯಿಂದ ಕೆಲಸ ನಿರ್ವಹಿಸಿದ್ದಕ್ಕಾಗಿ ಮೆಚ್ಚುಗೆಯನ್ನು ವ್ಯಕ್ತಪಡಿಸುವ ಬದಲು, ಸರ್ಕಾರದವರು ತನ್ನ ಬಡ್ತಿಗೆ ಅಡ್ಡಿ ಆತಂಕಗಳನ್ನು ತಂದೊಡ್ಡಿದ್ದು ಸತೀಶನಿಗೆ ಆಶ್ಚರ್ಯವನ್ನುಂಟುಮಾಡಿತ್ತು. ತನಿಖೆಯಾದರೆ ಸತೀಶನು ನಿರ್ದೋಷಿಯೆಂದು ನಿರ್ಣಯವಾಗುವುದು ಖಂಡಿತವೆಂದು ಶಂಭು ದಾಮೋದರರಿಗೆ ಗೊತ್ತಿತ್ತು. ಆ ಕಾರಣದಿಂದಲೇ ತನಿಖೆ ನಡೆಯದಂತೆ ತಡೆಹಿಡಿದಿದ್ದರು.

ಸತೀಶನ ತಾಳ್ಮೆಗೂ ಒಂದು ಮಿತಿಯಿತ್ತು. ಅನಾವಶ್ಯಕವಾಗಿ ತನ್ನ ಮೇಲೆ ಹೊರಿಸಿದ್ದ ಸುಳ್ಳು ಆರೋಪಗಳಿಂದ ಕೊರಗಿ, ಪರಿತಪಿಸಿ, ಅವನು ತನ್ನ ತಾಳ್ಮೆಯನ್ನು ಕಳೆದುಕೊಂಡಿದ್ದನು. ಮುಖ್ಯಮಂತ್ರಿಯನ್ನು ಸ್ವಯಃ ನೋಡಿ, ತನ್ನ ಕಷ್ಟವನ್ನು ಅರಿಕೆ ಮಾಡಿಕೊಳ್ಳಬೇಕೆಂದು ಸತೀಶನು ನಿರ್ಧರಿಸಿದನು. ಮುಖ್ಯಮಂತ್ರಿಯ ದರ್ಶನಕ್ಕೆ ಅವಕಾಶ ಕಲ್ಪಿಸಿಕೊಡಬೇಕೆಂದು ಸರ್ಕಾರದ ಶ್ರೇಷ್ಠ ಕಾರ್ಯದರ್ಶಿಯವರಿಗೆ ಮನವಿಯನ್ನು ಬರೆದು, ಶಾಮಸುಂದರನ ಮುಖಾಂತರ ಕಳುಹಿಸಿದನು. ಆದರೆ ಶಾಮಸುಂದರನು ಆ ಮನವಿಯನ್ನು ಸರ್ಕಾರಕ್ಕೆ ಕಳುಹಿಸುವ ಬದಲು ಕಸದ ಬುಟ್ಟಿಗೆ ಎಸೆದನು. ಆದ್ದರಿಂದ ಸತೀಶನ ಮನವಿ ಸರ್ಕಾರವನ್ನು ಮುಟ್ಟಲೇಯಿಲ್ಲ. ಕೆಲವು ತಿಂಗಳುಗಳು ಗತಿಸಿದ್ದರೂ ತನ್ನ ಮನವಿಗೆ ಸರ್ಕಾರದಿಂದ ಉತ್ತರ ಬರದಿದ್ದುದರಿಂದ ಸತೀಶನು ಹತಾಶನಾದನು. ಅವನ ಕೋಪ ಇಮ್ಮಡಿಯಾಯಿತು.

ಪೂರ್ವಭಾವಿ ಅನುಮತಿಯಿಲ್ಲದೆ ಸರ್ಕಾರಿ ಅಧಿಕಾರಿಗಳು ಮಂತ್ರಿಗಳನ್ನೂ, ಮುಖ್ಯಮಂತ್ರಿಗಳನ್ನೂ ನೋಡಬಾರದೆಂದು ಸರ್ಕಾರದ ನಿಯಮವಿತ್ತು. ಆದರೆ ಮಂತ್ರಿಗಳಿಗೂ ಆಪ್ತರಾಗಿದ್ದ ಅಧಿಕಾರಿಗಳಿಗೆ ಆ ನಿಯಮ ಅನ್ವಯಿಸುತ್ತಿರಲಿಲ್ಲ. ಅಂತಹ ಅಧಿಕಾರಿಗಳು ಯಾವಾಗ ಬೇಕಾದರೂ ಮಂತ್ರಿಗಳನ್ನೂ, ಮುಖ್ಯಮಂತ್ರಿಗಳನ್ನೂ ನೋಡಬಹುದಾಗಿತ್ತು. ತಾನೂ ಕೂಡ ಆ ನಿಯಮವನ್ನು ಉಲ್ಲಂಘಿಸಿ, ಮುಖ್ಯಮಂತ್ರಿಯನ್ನು ನೋಡಬೇಕೆಂದು, ಸತೀಶನು ನಿರ್ಧರಿಸಿದನು. ಮುಖ್ಯಮಂತ್ರಿಯನ್ನು ನೋಡುವ ಉದ್ದೇಶದಿಂದ ರಜೆಗೆ ಅರ್ಜಿಯನ್ನು ಹಾಕಿ ರಾಜಧಾನಿಗೆ ಪ್ರಯಾಣ ಬೆಳೆಸಿದನು.

ಮುಖ್ಯಮಂತ್ರಿಯ ಭೇಟಿಗಾಗಿ ಅವನ ಆಫೀಸ್ ಮುಂದೆ ಸತೀಶನು ಮೂರು ದಿನಗಳು ಕಾದಿದ್ದರೂ, ಮುಖ್ಯಮಂತ್ರಿಯ ದರ್ಶನವಾಗಲಿಲ್ಲ. ಮುಖ್ಯಮಂತ್ರಿಯು ಊರಲ್ಲೇ ಇದ್ದರೂ ಸಮಾರಂಭ, ಸನ್ಮಾನಗಳಿಗಾಗಿ ಅಲ್ಲಿ ಇಲ್ಲಿ ತಿರುಗಾಡುತ್ತಿದ್ದುದರಿಂದ ಆಫೀಸಿಗೆ ಬಂದಿರಲಿಲ್ಲ. ನಾಲ್ಕನೇ ದಿನ ಮುಖ್ಯಮಂತ್ರಿಯ ಸವಾರಿ ಆಫೀಸಿಗೆ ಚಿತ್ತೈಸಿತ್ತು. ಸತೀಶನು ಅವನ ಆಫೀಸಿನ ಬಳಿ ಕಾದು ನಿಂತನು. ನೂರಾರು ಜನರು ಮುಖ್ಯಮಂತ್ರಿಯ ಕೊಠಡಿಯ  ಒಳಗೆ ಹೋಗಿ, ಮಾತು ಕತೆ ನಡೆಯಿಸಿ ಬರುತ್ತಿದ್ದರು. ಆದರೆ ಸತೀಶನು

ಭೇಟಿಯನ್ನು ಕಳುಹಿಸಿದ್ದರೂ ಸಹ ಅವನಿಗೆ ಭೇಟಿ ದೊರೆಯಲಿಲ್ಲ. ತಾಳ್ಮೆಗೆಟ್ಟ ಸತೀಶನು ಹೇಳದೆ ಕೇಳದೆ ಮುಖ್ಯಮಂತ್ರಿ ಕೊಠಡಿಯೊಳಗೆ ನುಗ್ಗಿದನು. ಅವನನ್ನು ನೋಡಿದೊಡನೆ, ದಾಮೋದರನು ಮುಖವನ್ನು ಗಂಟು ಹಾಕಿಕೊಂಡು, "ಅನುಮತಿಯಿಲ್ಲದೆ ನೀನೇಕೆ ಇಲ್ಲಿಗೆ ಬಂದೆ? ಅಧಿಕಾರಿಗಳು ಅನುಮತಿಯಿಲ್ಲದೆ ನನ್ನನ್ನು ನೋಡುವುದು ಅಪರಾಧವೆಂದು ನಿನಗೆ ಗೊತ್ತಿಲ್ಲವೇ? ಎಂದು ಆರ್ಭಟಿಸಿದನು.

"ಕಾನೂನಿನ ಪ್ರಕಾರ ಅಪರಾಧವೆಂದು ನನಗೂ ಗೊತ್ತಿದೆ. ಅನುಮತಿ ಕೊಡಬೇಕೆಂದು ಸರ್ಕಾರಕ್ಕೆ ನಾಲ್ಕು ತಿಂಗಳ ಹಿಂದೆ ಅರ್ಜಿ ಬರೆದಿದ್ದೆನು. ಆ ಅರ್ಜಿಗೆ ಯಾವ ಜವಾಬೂ ಬರಲಿಲ್ಲ. ಕೆಲವರು ಅಧಿಕಾರಿಗಳು ಅನುಮತಿಯಿಲ್ಲದೆ ತಮ್ಮನ್ನು ಎಲ್ಲಿ ಬೇಕಾದರೂ, ಯಾವಾಗ ಬೇಕಾದರೂ ನೋಡುತ್ತಾರೆ. ಅವರಂತೆಯೇ ನಾನು ಸಹ ತಮ್ಮನ್ನು ಕಾಣಲು ಬಂದಿದ್ದೇನೆ."

"ನಿನ್ನ ಅಧಿಕ ಪ್ರಸಂಗತನ ಹೆಚ್ಚಾಯಿತು. ನೀನು ಯಾರ ಹತ್ತಿರ ಮಾತನಾಡುತ್ತಿದ್ದೀಯ ಗೊತ್ತೊ?"

"ಗೊತ್ತಿದೆ. ರಾಜ್ಯದ ಮುಖ್ಯಮಂತ್ರಿಗಳೊಡನೆ ಮಾತನಾಡುತ್ತಿದ್ದೇನೆ. ಮುಖ್ಯಮಂತ್ರಿಗಳಾದವರು ನ್ಯಾಯಾನ್ಯಾಯಗಳ ವಿಮರ್ಶೆ ಮಾಡುವ ಉದಾರ ಗುಣವನ್ನು ಹೊಂದಿರುತ್ತಾರೆಂಬ ಭಾವನೆಯಿಂದ ಇಲ್ಲಿಗೆ ಬಂದಿದ್ದೇನೆ."

"ನಿನ್ನ ಅರಿಕೆಯೇನು ? ಸಂಕ್ಷಿಪ್ತವಾಗಿ ಹೇಳು"

"ಸ್ವಾಮಿ, ಒಂದುವರೆ ವರ್ಷದ ಹಿಂದೆ ನನಗೆ ಸೀನಿಯರ್ ಸ್ಕೇಲ್‌ಗೆ ಪ್ರಮೋಷನ್ ದೊರಕಬೇಕಾಗಿತ್ತು. ಯಾರೋ ಕೆಲವರು ನನಗಾಗದವರು ನನ್ನ ಮೇಲೆ ಸುಳ್ಳು ಆರೋಪಗಳನ್ನು ಹೊರಿಸಿ, ತಮಗೆ ಅರ್ಜಿಗಳನ್ನು ಬರೆದಿದ್ದರಿಂದ, ಆ ಆರೋಪಗಳ ವಿಚಾರದಲ್ಲಿ ತನಿಖೆಯಾಗುವವರೆಗೆ ನನಗೆ ಪ್ರಮೋಷನ್ ಕೊಡಬಾರದೆಂದು ತಮ್ಮ ಆಜ್ಞೆಯಾಗಿದೆ. ತಮ್ಮ ಆಜ್ಞೆಯಾಗಿ ಒಂದು ವರ್ಷದ ಮೇಲಾದರೂ ಇನ್ನೂ ತನಿಖೆಯೂ ಪ್ರಾರಂಭವಾಗಿಲ್ಲ; ನನಗೆ ಪ್ರಮೋಷನ್ನೂ ಸಿಕ್ಕಿಲ್ಲ. ನಿಂಬೂರು ಜಿಲ್ಲಾಧಿಕಾರಿ ಶಾಮಸುಂದರ ಮತ್ತು ಮಂತ್ರಿ ಶಂಭೂನಾಥರ ಕೈವಾಡದಿಂದ ಹೀಗಾಗಿದೆಯೆಂದು ನನ್ನ ಭಾವನೆ."

"ನಾಲಿಗೆ ಹಿಡಿದು ಮಾತನಾಡು. ಸಚಿವರೊಬ್ಬರ ಮೇಲೆ ಬಾಯಿಗೆ ಬಂದಂತೆ ಮಾತನಾಡಲು ನಿನಗೆಷ್ಟು ಧೈರ್ಯ? ಶಾಮಸುಂದರ ಒಬ್ಬ ದಕ್ಷ ಮತ್ತು ಪ್ರಮಾಣಿಕ ಅಧಿಕಾರಿ."

"ಶಾಮಸುಂದರನ ವಿಚಾರ ತಮಗೆ ಗೊತ್ತಿಲ್ಲವೆಂದು ತೋರುತ್ತದೆ. ಆತನ ಲಂಚಕ್ಕೆ ಆದಿ ಅಂತ್ಯವೇಯಿಲ್ಲ. ಇನ್ನೊಂದು ವಿಚಾರ ಹೇಳಿದರೆ ತಾವು ಕೋಪಿಸಬಾರದು. ಶಾಮಸುಂದರನ ಲಂಚದ ವ್ಯವಹಾರಗಳಿಗೆ ಶಂಭುನಾಥರ ರಕ್ಷಣೆಯಿದೆ."

"ನಿನಗೆ ತಲೆ ಕೆಟ್ಟಂತೆ ತೋರುತ್ತದೆ. ನೀನು ಎಲ್ಲಿದ್ದೀಯೆಂಬುದನ್ನು ಮರೆತಂತೆ ಕಾಣುತ್ತದೆ. ನನ್ನ ಮಂತ್ರಿ ಶಂಭುನಾಥರ ಮೇಲೆ ಆರೋಪ ಮಾಡಲು ನೀನೆಷ್ಟರವನು?

ನನಗಿರತಕ್ಕ ಅಧಿಕಾರ ವ್ಯಾಪ್ತಿಯ ಅರಿವು ನಿನಗಿಲ್ಲವೆಂದು ತೋರುತ್ತದೆ. ನಾನು ಮನಸ್ಸು ಮಾಡಿದರೆ ನಿನ್ನನ್ನು ಅಧಃ ಪಾತಾಳಕ್ಕೆ ತಳ್ಳ ಬಲ್ಲೆ. ನೀನು ಲಂಚಕೋರನೆಂದು ನನಗೆ ದೂರು ಬಂದಿದೆ. ನಿನಗೆ ಬಡ್ತಿಯನ್ನು ಕೊಡಬೇಕೆ ಬೇಡವೇ ಎಂಬುದನ್ನು ವಿಚಾರಣೆ ಮುಗಿದ ಮೇಲೆ ನಿರ್ಧರಿಸಲಾಗುತ್ತದೆ. ಈಗ ತೆಪ್ಪಗೆ ಹೋಗು"

"ವಿಚಾರಣೆಯನ್ನು ಎದುರಿಸಲು ಸದಾ ಸಿದ್ಧನಿದ್ದೇನೆ. ನಾನು ತಪ್ಪಿತಸ್ಥನಾಗಿದ್ದರೆ ನನ್ನನ್ನು ಗಲ್ಲಿಗೆ ಹಾಕಿ. ಆದರೆ ಶಂಭುನಾಥರ ಹೇಳಿಕೆಯ ಮೇರೆಗೆ ನನ್ನನ್ನು ನಿಷ್ಕಾರಣವಾಗಿ ಹಿಂಸೆಗೆ ಗುರಿಮಾಡಬೇಡಿ."

"ವಿಚಾರಣೆ ನಡೆಯುವಾಗ ನಡೆಯುತ್ತದೆ. ವಿಚಾರಣೆ ಯಾವಾಗ ನಡೆಯಬೇಕೆಂಬುದನ್ನು ಸಂಬಂಧಪಟ್ಟ ಅಧಿಕಾರಿಗಳು ನಿರ್ಧರಿಸುತ್ತಾರೆ; ನೀನು ನಿರ್ಧರಿಸತಕ್ಕವನಲ್ಲ. ನಿನ್ನ ಹೇಳಿಕೆಯಂತೆ ಸರ್ಕಾರ ನಡೆಯುವುದಿಲ್ಲ. ನೀನು ಅನುಮತಿಯಿಲ್ಲದೆ ನನ್ನನ್ನು ನೋಡಿದ್ದೇ ತಪ್ಪು. ನನ್ನ ಮುಂದೆ ಬಾಯಿಗೆ ಬಂದಂತೆ ಮಾತನಾಡಿದ್ದು ಶುದ್ಧ ತಪ್ಪು. ನಿನ್ನ ಅವಿಧೇಯ ವರ್ತನೆಗಾಗಿ ಮತ್ತು ಅವಾಚ್ಯ ನುಡಿಗಳಿಗಾಗಿ ನಿನಗೆ ಶಿಕ್ಷೆಯಾಗಬೇಕಾಗಿದೆ. ಶಿಕ್ಷೆಗೆ ಪೂರ್ವ ನಿನ್ನನ್ನು ಒಂದು ತಿಂಗಳ ಕಾಲ ಸಸ್ಪೆಂಡ್ ಮಾಡಿದ್ದೇನೆ. ಹೊರಟುಹೋಗು."

"ಮಿಸ್ಟರ್ ದಾಮೋದರಾ, ನಿಮ್ಮ ಸರ್ಕಾರದಲ್ಲಿ ನ್ಯಾಯವೇಯಿಲ್ಲವೆಂದಾಯಿತು. ಲಂಚಕೋರರಾದ ಶಂಭು ಶಾಮಸುಂದರರಿಗೆ ಶಹಭಾಸ್ ಗಿರಿ! ಪ್ರಮಾಣಿಕನಾದ ನನಗೆ ಸಸ್ಪೆನ್‌ಷನ್! ಎಷ್ಟು ಕಾಲ ಈ ರೀತಿ ರಾಜ್ಯವನ್ನು ಆಳಬಲ್ಲಿರಿ! ನಿಮಗಾಪ್ತರಾದ ನಿಮ್ಮ ಜಾತಿಯ ಅಧಿಕಾರಿಗಳು ಲಂಚದ ಅಧಿದೇವತೆಗಳಂತಿದ್ದರೂ, ಅವರ ಮೇಲೆ ಆಪಾದನೆಯೂ ಇಲ್ಲ; ವಿಚಾರಣೆಯೂ ಇಲ್ಲ. ನನ್ನಂತಹ ಪ್ರಮಾಣಿಕನ ಮೇಲೆ ಆಪಾದನೆ! ವಿಚಾರಣೆ! ನಿಮಗೆ ಬೇಕಾದವರನ್ನು ನಾನಾ ಉಪಾಯಗಳಿಂದ, ನೀತಿ ನಿಯಮಗಳನ್ನು ಉಲ್ಲಂಘಿಸಿ, ಮೇಲಕ್ಕೆತ್ತುತ್ತೀರಿ. ಬೇಡವಾದವರ ಮೇಲೆ ಏನಾದರೂ ಗೂಬೆ ಕೂರಿಸಿ ತಲೆಯೆತ್ತದಂತೆ ಮಾಡುತ್ತೀರಿ. ನಿಮ್ಮ ಮಂತ್ರಿಯೊಬ್ಬರು ತನ್ನ ಬಂಧು ಒಬ್ಬನನ್ನು ಇಲಾಖೆಯ ಮುಖ್ಯಾಧಿಕಾರಿಯನ್ನಾಗಿ ಮಾಡುವುದಕ್ಕಾಗಿ, ಅವನ ಮೇಲಿದ್ದ ಹನ್ನೆರಡು ಜನ ಅಧಿಕಾರಿಗಳನ್ನು, ನಾನಾ ನೆಪದಲ್ಲಿ ನಿಷ್ಪ್ರಯೋಜಕರೆಂದು ದೋಷಾರೋಪಣೆ ಮಾಡಿ, ಕೆಳಗೆ ತಳ್ಳಿದರು. ನಿಮ್ಮ ಇನ್ನೊಬ್ಬ ಮಂತ್ರಿ ಅವರಿಗೆ ಬೇಕಾದ ಅಧಿಕಾರಿಯೊಬ್ಬನಿಗೆ ಪ್ರಮೋಷನ್ ಕೊಡುವ ಭರದಲ್ಲಿ ಆ ಅಧಿಕಾರಿಯ ಮೇಲಿದ್ದ ನಾಲ್ವರು ಅಧಿಕಾರಿಗಳ ಮೇಲೆ ಸುಳ್ಳು ಗುಪ್ತ ವರದಿಯನ್ನು ಸೃಷ್ಟಿಸಿದರು. ಆಯ ಕಟ್ಟಿನ ಸ್ಥಳದಲ್ಲೆಲ್ಲಾ ನಿಮ್ಮವರನ್ನೇ ತುಂಬಿಸಿದ್ದೀರಿ"

"ನನ್ನ ತಾಳ್ಮೆ ಮೀರುವಂತೆ ಹರಟುತ್ತಿದ್ದೀಯ. ನಿನಗೆ ನೌಕರಿಯ ಮೇಲೆ ಆಸೆಯಿದ್ದರೆ ಇಲ್ಲಿಂದ ತೊಲಗು. ಇಲ್ಲವಾದರೆ ನಿನ್ನ ಕತ್ತು ಹಿಡಿದು ತಳ್ಳಿಸಿ ಆ ಮೇಲೆ ನಿನ್ನನ್ನು ಡಿಸ್ ಮಿಸ್ ಮಾಡುತ್ತೇನೆ."

"ಮಿಸ್ಟರ್ ದಾಮೋದರಾ, ನಾನು ಎಲ್ಲಕ್ಕೂ ಸಿದ್ಧನಾಗಿ ಬಂದಿದ್ದೇನೆ. ನಿಮ್ಮಂತಹ ಲಂಚಕೋರರ ಕೈಕೆಳಗೆ ಸೇವೆ ಮಾಡುವುದಕ್ಕಿಂತ ಕಸ ಗುಡಿಸುವ ಕೆಲಸ ಮೇಲು. ಇಕೋ ತೆಗೆದುಕೊಳ್ಳಿ, ನನ್ನ ರಾಜೀನಾಮೆಯನ್ನು. ಇನ್ನೇನು ಮಾಡುತ್ತೀರಿ? ಇಂದಿನಿಂದ ನಿಮ್ಮ ರಾಜ್ಯಭಾರವನ್ನು ಕೊನೆಗಾಣಿಸುವುದಕ್ಕಾಗಿ ಶ್ರಮಿಸುತ್ತೇನೆ," ಎಂದು ಹೇಳಿ ಸತೀಶನು ಮುಂಚೆಯೇ ಬರೆದು ತಂದಿದ್ದ ರಾಜೀನಾಮೆಯನ್ನು ದಾಮೋದರನಿಗೆ ಒಪ್ಪಿಸಿ, ಅಲ್ಲಿಂದ ಹೊರಟು ಹೋದನು.

* * * *

# ೧೨. ಯೋಗಾಸಕ್ತ ಜಯಸಿಂಹ

ಉತ್ಸಾಹದ ಚಿಲುಮೆಯಂತಿದ್ದ ಯುವಕ ಜಯಸಿಂಹನು ತಂದೆಯ ನಿಧನದಿಂದ ಶೋಕಪೀಡಿತನಾಗಿ ಚಿಂತಾಕ್ರಾಂತನಾಗಿದ್ದನು. ಅವನ ಮನಸ್ಸು ವಿರಕ್ತಿ ಆಸಕ್ತಿಗಳ ಮಧ್ಯೆ ಹೊಯ್ದಾಡುತಿತ್ತು. ಅವನಿಗೆ ಆತ್ಮ ಜ್ಞಾನದ ಆಸಕ್ತಿ ತಂದೆಯಿಂದ ರಕ್ತಗತವಾಗಿ ಬಂದಿತ್ತು. ಚಿಕ್ಕವಯಸ್ಸಿನವನಾದರೂ ಆಗಲೇ ಮಹಾಪುರುಷರ ಮತ್ತು ಮಹಾಯೋಗಿಗಳ ಜೀವನ ಚರಿತ್ರೆಯನ್ನು ಅಧ್ಯಯನ ಮಾಡಿದ್ದನು ವೇದ ಉಪನಿಷತ್ತುಗಳ ಪರಿಚಯ ಮಾಡಿಕೊಂಡಿದ್ದನು. ಅವನ ಮನಸ್ಸು ಒಮ್ಮೊಮ್ಮೆ ವೈರಾಗ್ಯದ ಗಗನದಲ್ಲಿ ಹಾರಾಡುತ್ತಿದ್ದರೆ. ಒಮ್ಮೊಮ್ಮೆ ಆಸೆ ಆಕಾಂಕ್ಷೆಗಳ ಭೂಮಿಯಲ್ಲಿ ಚಲಿಸುತ್ತಿತ್ತು.

ಒಮ್ಮೊಮ್ಮೆ ವಿವೇಕಾನಂದರಂತೆ ಅಥವಾ ಅರವಿಂದರಂತೆ ಯೋಗಿಯಾಗಬೇಕೆಂದು ಹಂಬಲಿಸುತ್ತಿದ್ದನು. ಮತ್ತೊಮ್ಮೆ ಕ್ರಾಂತಿಪುರುಷನಂತೆ ರಾಜಕಾರಣದಲ್ಲಿ ಧುಮುಕಿ, ದುಷ್ಟ ಮೃಗಗಳಂತಿದ್ದ, ಶಂಭು ದಾಮೋದರರನ್ನು ಧ್ವಂಸ ಮಾಡಬೇಕೆಂದು ಅವುಡು ಕಚ್ಚುತ್ತಿದ್ದನು. ತಂದೆಯ ಮರಣಕ್ಕೆ ಮುನ್ನ ಯಾವಾಗಲೂ ನಗುಮೊಗದಿಂದ ತಾಯಿ ಯೊಡನೆಯೂ, ತಂಗಿಯೊಡನೆಯೂ ವಿನೋದವಾಗಿ ಮಾತುಕತೆಯಾಡುತ್ತಿದ್ದವನು. ಇದಕ್ಕಿದ್ದಂತೆ ಮೌನವನ್ನು ಧರಿಸಿದ್ದನು. ಮಾತಿನಲ್ಲಿ ಹಿಂದಿನ ಅಣುಗತನ ಹೋಗಿ ಪ್ರೌಢತನ ಬಂದಿತ್ತು.

ತಂದೆಯ ಅಂತ್ಯಕ್ರಿಯೆಗಳನ್ನು ಮುಗಿಸಿದ ನಂತರ ತಂಗಿ ಚಂಚಲೆಯನ್ನು ವ್ಯಾಸಂಗಕ್ಕಾಗಿ ರಾಜಧಾನಿಯಲ್ಲಿದ್ದ ಅಮರಚಂದರ ಮನೆಯಲ್ಲಿ ಬಿಟ್ಟನು. ಕೆಲವು ದಿನಗಳ ತರುವಾಯ ರಾಜಧಾನಿಗೆ ಹೋಗಿ, ಯಾವುದಾದರೊಂದು ನೌಕರಿಯನ್ನು ಸಂಪಾದಿಸಿಕೊಂಡು ಬರುವುದಾಗಿ, ತಾಯಿಯ ಅಪ್ಪಣೆಯನ್ನು ಪಡೆದು ಜಿತೇಂದ್ರ ಪುರವನ್ನು ಬಿಟ್ಟು ಹೋದವನು, ಹದಿನೈದು ದಿನಗಳಾದರೂ ಹಿಂದಿರುಗಿ ಬರಲಿಲ್ಲ. ಮಗನಿಂದ ಕಾಗದವೂ ಸಹ ಬಾರದಿದ್ದುದರಿಂದ ನಿರ್ಮಲಾದೇವಿಯವರು ಚಿಂತೆ ಗೀಡಾಗಿದ್ದರು. ಅವನನ್ನು ರಾಜಕೀಯ ವೈರಿಗಳು ಕೊಲ್ಲಿಸಿದ್ದರೂ ಕೊಲ್ಲಿಸಿರಬಹು ದೆಂಬ ಭಯ; ರಾಜಧಾನಿಯಲ್ಲಿ ಕೆಲಸಕ್ಕಾಗಿ ಅಲೆಯುತ್ತಿರುವಾಗ ಮೋಟಾರು ವಾಹನಕ್ಕೆ ಸಿಕ್ಕಿ ಮರಣಕ್ಕೀಡಾಗಿರಬಹುದೆಂಬ ಕಳವಳ; ಜೀವನದಲ್ಲಿ ಜಿಗುಪ್ಸೆಗೊಂಡು ಆತ್ಮಹತ್ಯೆ ಮಾಡಿಕೊಂಡಿದ್ದರೂ ಮಾಡಿಕೊಂಡಿರಬಹುದೆಂಬ ಸಂಶಯ; ಇವೇ ಮುಂತಾದ ಯೋಚನೆಗಳಿಂದ ನಿರ್ಮಲಾದೇವಿಯವರು ಶೋಕ ಪೀಡಿತರಾಗಿದ್ದರು.

ಮಗನನ್ನು ಪತ್ತೆ ಹಚ್ಚಬೇಕೆಂದು ಅಮರಚಂದರಿಗೂ, ಬಂಧು ಬಾಂಧವರಿಗೂ, ಸ್ನೇಹಿತರಿಗೂ ಕಾಗದಗಳನ್ನು ಬರೆದನು. ಜಯಸಿಂಹನ ವಿಚಾರ ತಮಗೆ ಗೊತ್ತಿಲ್ಲವೆಂದು

ಅಮರಚಂದರೂ ಇತರರೂ ಉತ್ತರ ಬರೆದರು. ಅಷ್ಟು ಹೊತ್ತಿಗಾಗಲೇ ಜಯಸಿಂಹನು ಮನೆಯನ್ನು ಬಿಟ್ಟು ಒಂದು ತಿಂಗಳಾಗಿತ್ತು. ನಿರ್ಮಲಾದೇವಿಯವರಿಗೆ ಸಿಡಿಲುಬಡಿದಂತಾಗಿ ಬದುಕು ಬೇಡವಾಗಿತ್ತು. ಅವರು ಅನ್ನ ಆಹಾರಗಳಿಲ್ಲದೆ ಕಣ್ಣೀರು ಸುರಿಸುತ್ತಿದ್ದರು.

ಒಂದು ತಿಂಗಳ ನಂತರ, ಜಯಸಿಂಹನು ಬರೆದಿದ್ದ ಪತ್ರವು ನಿರ್ಮಲಾದೇವಿಯವರಿಗೆ ತಲುಪಿತು. ಉತ್ತರ ಭಾರತದ ಯಾವುದೋ ಒಂದು ಊರಿನಿಂದ ಅವನು ಆ ಪತ್ರವನ್ನು ಬರೆದಿದ್ದನು. ಕೆಲವು ಕಾರಣಗಳ ದೆಸೆಯಿಂದ, ಕೆಲಕಾಲ ತಾನು ಅಜ್ಞಾತವಾಸದಲ್ಲಿರಬೇಕಾದ ಪ್ರಮೇಯ ಒದಗಿದೆಯೆಂದೂ, ತನಗಾಗಿ ಎಲ್ಲಿಯೂ ಹುಡುಕಾಡಬಾರದೆಂದೂ, ಚಿಂತೆ ಪಡಬಾರದೆಂದೂ, ಆ ಕಾಗದದಲ್ಲಿ ಅವನು ಬರೆದಿದ್ದನು. ಅದೇ ಒಕ್ಕಣೆಯ ಕಾಗದವನ್ನು ಭಾರ್ಗವದಾಸರಿಗೂ, ಅಮರಚಂದರಿಗೂ, ಪ್ರತಾಪರಾಜನಿಗೂ, ತಂಗಿ ಚಂಚಲೆಗೂ ಬರೆದಿದ್ದನು.

ಜಯಸಿಂಹನು ಕೆಲಸವನ್ನು ಹುಡುಕುವ ನೆಪದಲ್ಲಿ ಮನೆಯಿಂದ ಹೊರಟವನು, ಸನ್ಯಾಸಿಯಂತೆ ಕಾವಿಯನ್ನು ತೊಟ್ಟು ದೇಶ ಪರ್ಯಟನೆಗೆ ಹೊರಟನು. ತಂದೆಯ ಮರಣದ ನಂತರ ಅವನಿಗೆ ಮಾನಸಿಕ ಶಾಂತಿಯೇ ದೊರಕಿರಲಿಲ್ಲ. ಶಂಭುವೂ, ದಾಮೋದರನೂ ಸೇರಿ ನಡೆಯಿಸಿದ್ದ ಪಿತೂರಿಗಳಿಂದಲೂ, ಅವರುಗಳು ಕೊಟ್ಟ ಕಿರುಕುಳಗಳಿಂದಲೂ, ತನ್ನ ತಂದೆ ರೋಗಗ್ರಸ್ತರಾಗಿ ಅಕಾಲ ಮರಣವನ್ನಪ್ಪಿದರೆಂಬ ವಿಚಾರ ಅವನ ಮನಸ್ಸಿಗೆ ಬಂದಾಗ, ಅವನು ಕ್ರೋಧಪರವಶನಾಗುತ್ತಿದ್ದನು. ಶಂಭು ದಾಮೋದರರ ಹಿಡಿತಕ್ಕೆ ಸಿಕ್ಕಿ ನರಳುತ್ತಿದ್ದ ರಾಜ್ಯದ ಜನರ ಪರಿಸ್ಥಿತಿಯನ್ನು ಸ್ಮರಿಸಿಕೊಂಡಾಗ, ಅವನಿಗೆ ಪರಿತಾಪವಾಗುತ್ತಿತ್ತು. ತಂದೆಯ ಅನಿರೀಕ್ಷಿತ ಮರಣ, ತಾಯಿಯ ವೈಧವ್ಯ, ಬಡತನ, ತನ್ನ ಜೀವನದ ಮುಂದಿನ ಪ್ರಶ್ನೆ ಮುಂತಾದ ಹಲವು ವಿಷಯಗಳು ಅವನ ಶಾಂತಿಯನ್ನು ಆಗಾಗ ಕದಡುತ್ತಿದ್ದುವು. ಸ್ವಾರ್ಥಿಗಳ ಸಮೂಹದಲ್ಲಿ ಬಾಳುವುದಕ್ಕಿಂತ ರಾಜ್ಯವನ್ನು ಬಿಟ್ಟು, ಬೇರೆಲ್ಲಿಗಾದರೂ ಹೋಗಿ, ತನ್ನ ಭವಿಷ್ಯವನ್ನು ರೂಪಿಸಬೇಕೆಂದು ನಿರ್ಧರಿಸಿ ದೇಶ ಪರ್ಯಟನೆಗೆ ಹೊರಟಿದ್ದನು.

ಆರು ತಿಂಗಳ ಕಾಲ ದೇಶದಾದ್ಯಂತ ಪ್ರವಾಸ ಮಾಡಿ, ಹಲವು ಪುಣ್ಯ ಕ್ಷೇತ್ರಗಳನ್ನೂ, ಹಲವು ಮಹಾನಗರಗಳನ್ನೂ ಸಂದರ್ಶಿಸಿದನು. ಈ ಪ್ರವಾಸ ಕಾಲದಲ್ಲಿ ಜಯಸಿಂಹನು ಹಲವು ಅನುಭವಗಳನ್ನು ಪಡೆದಿದ್ದನು. ವಿವಿಧ ರಾಜ್ಯಗಳ ಮತ್ತು ವಿವಿಧ ಭಾಷೆಗಳ ಜನರನ್ನು ಪರಿಚಯ ಮಾಡಿಕೊಳ್ಳುವ ಸುಯೋಗ ಅವನಿಗೆ ಲಭಿಸಿತ್ತು. ವಿವಿಧ ರಾಜ್ಯಗಳಲ್ಲಿ ರಾಜಕೀಯದ ಗಾಳಿ ಹೇಗೆ ಬೀಸುತ್ತದೆ ಎಂಬುದನ್ನು ಅರಿತುಕೊಳ್ಳುವ ಅವಕಾಶ ಅವನಿಗೆ ದೊರಕಿತ್ತು. ವಿವಿಧ ಕಡೆಗಳಲ್ಲಿ ವಿವಿಧ ವರ್ಗಗಳ ಜನ ಜೀವನ ಹೇಗೆ ಸಾಗುತ್ತೆಂಬುದನ್ನೂ ಅವನು ನೋಡಿದ್ದನು. ಕೆಲವು ಕಡೆಗಳಲ್ಲಿ ನಿರ್ಭಾಗ್ಯ ದೀನದಲಿತರ ದಾರುಣ ಪರಿಸ್ಥಿತಿಯನ್ನು ಕಂಡು ಅವನ ಮನಸ್ಸು ದುಮ್ಮಾನಗೊಂಡಿತ್ತು.

ದೇಶ ಪರ್ಯಟನೆಯಿಂದ ತನ್ನ ಕಷ್ಟ ಕಾರ್ಪಣ್ಯಗಳನ್ನು ಮರೆಯಬೇಕೆಂದಿದ್ದ ಜಯಸಿಂಹನ ಮನಸ್ಸಿಗೆ ತೀರ್ಥಯಾತ್ರೆಗಳ ಸಂದರ್ಶನದಿಂದಾಗಲೀ, ಸುಂದರ ಪಟ್ಟಣದಿಂದಾಗಲೀ ನೆಮ್ಮದಿ ದೊರೆಯಲಿಲ್ಲ. ನಾನಾ ಕಾರಣಗಳ ದೆಸೆಯಿಂದ ಅವನಿಗೆ ಜೀವನದಲ್ಲಿ ಜಿಗುಪ್ಸೆಯುಂಟಾಗಿತ್ತು. ಜೀವನ ನಶ್ವರವೆಂಬ ಭಾವನೆ ಬಂದಿತ್ತು. ಸಮರ್ಥರಾದ ಒಬ್ಬ ಗುರುವನ್ನು ಆಶ್ರಯಿಸಿ ಅವರಿಂದ ಧೀಕ್ಷೆಯನ್ನು ಪಡೆದು, ಯೋಗಿಯಾಗಿ ಆತ್ಮಜ್ಞಾನವನ್ನು ಪಡೆಯಬೇಕೆಂದು ನಿರ್ಧರಿಸಿದನು. ತಾನು ಹೋದೆಡೆಗಳಲ್ಲೆಲ್ಲಾ ಯೋಗ್ಯ ಗುರುವಿಗಾಗಿ ಅನ್ವೇಷಣೆ ನಡೆಸಿದ್ದನು. ಎಲ್ಲಿಯೂ ಅಂತಹ ಗುರುವಿನ ದರ್ಶನ ಅವನಿಗೆ ಲಭಿಸಿರಲಿಲ್ಲ.

ತಾನು ತಂಗಿದ್ದ ತೀರ್ಥಕ್ಷೇತ್ರಗಳಲ್ಲಿ ಸಾಧು ಬೈರಾಗಿಗಳೊಡನೆ ಕಲೆತು ವಿಚಾರ ವಿನಿಮಯ ಮಾಡುತ್ತಿದ್ದನು. ಅವರಲ್ಲಿ ಬಹುಮಂದಿ ಉದರ ವೈರಾಗ್ಯದ ನಿಮಿತ್ತ ಸನ್ಯಾಸಿ ವೇಷಧಾರಿಗಳಾಗಿದ್ದರು. ಕೆಲವರು ಆತ್ಮಜ್ಞಾನದಲ್ಲಿ ಆಸಕ್ತಿಯುಳ್ಳವರಾಗಿದ್ದರೂ, ಆತ್ಮಜ್ಞಾನದ ಬೆಳಕನ್ನು ಕಂಡವರಾಗಿರಲಿಲ್ಲ. ಹಿಂದೂಸ್ಥಾನದಲ್ಲಿ ಸಿದ್ಧಿಯನ್ನು ಪಡೆದ ಯೋಗಿಗಳು ಸಿಕ್ಕಲಾರರೆಂದು ಜಯಸಿಂಹನು ನಿರಾಶನಾಗಿದ್ದನು. ಮುಂದೇನು ಮಾಡಬೇಕೆಂಬುದನ್ನು ಚಿಂತಿಸುತ್ತಾ ಒಂದು ಪುಣ್ಯಕ್ಷೇತ್ರದ ಪಕ್ಕದಲ್ಲಿದ್ದ ನದಿಯ ದಡದಲ್ಲಿ ಕುಳಿತಿದ್ದಾಗ, ಅಕಸ್ಮಾತ್ತಾಗಿ ಅವನಿಗೆ ಅವನಂತೆಯೇ ಯುವಕನಾಗಿದ್ದ ಒಬ್ಬ ತರುಣ ಸನ್ಯಾಸಿಯ ಪರಿಚಯವಾಯಿತು, ಆ ತರುಣ ಸನ್ಯಾಸಿಯೊಡನೆ ಮಾತನಾಡುತ್ತಿದ್ದಾಗ, ತಾನು ಸಮರ್ಥ ಗುರುವಿಗಾಗಿ ಅಲೆದಾಡುತ್ತಿರುವೆನೆಂದು ಜಯಸಿಂಹನು ಹೇಳಿದನು. ಅವನ ಉತ್ಕಟ ಆಕಾಂಕ್ಷೆಯನ್ನು ಕಂಡು ಮೆಚ್ಚಿದ ಆ ತರುಣ ಸನ್ಯಾಸಿಯು ಇಂತೆಂದನು;

"ಈ ಯುಗದಲ್ಲಿ ಆತ್ಮಜ್ಞಾನದಲ್ಲಿ ಉಪದೇಶವನ್ನು ನೀಡುವಂತಹ ಸಮರ್ಥ ಗುರು ಸಿಕ್ಕುವುದೂ ಕಷ್ಟ, ಅಂತಹವರು ಸಿಕ್ಕಿದರೂ ಸಿದ್ಧಿಯನ್ನು ಪಡೆಯುವುದು ಇನ್ನೂ ಕಷ್ಟ. ನಾನು ಐದು ವರ್ಷಗಳಿಂದ ಬಂಧು ಬಾಂಧವರಿಂದ ದೂರವಾಗಿ ಸಾಧನೆಯಲ್ಲಿ ನಿರತನಾಗಿದ್ದೇನೆ. ಸಿದ್ಧಿ ಲಭಿಸುವುದಿರಲಿ, ಇನ್ನೂ ಸಾಧಾರಣ ಮಾನಸಿಕ ಶಾಂತಿಯೂ ಲಭಿಸಿಲ್ಲ. ನಿನಗೆ ನಿಜವಾಗಿಯೂ ಯೋಗದ ವಿಚಾರದಲ್ಲಿ ಆಸಕ್ತಿಯಿದ್ದರೆ, ಆರಿದ್ರಾ ಪರ್ವತಶ್ರೇಣಿಯಲ್ಲಿರುವ ಪ್ರಭಾತಗಿರಿಯಲ್ಲಿ ಅಮಿತಾನಂದರೆಂಬ ಮಹಾಯೋಗಿಗಳಿದ್ದಾರೆ. ನೀನು ಅವರ ಆಶ್ರಯವನ್ನು ಪಡೆದರೆ, ನಿನ್ನ ಕರ್ಮ ಸವೆದಿದ್ದರೆ ನಿನಗೆ ಅದೃಷ್ಟವಿದ್ದರೆ ದಿವ್ಯಜ್ಞಾನದ ಬೆಳಕನ್ನು ಕಂಡರೂ ಕಾಣಬಹುದು. ಅಮಿತಾನಂದರು ಸದಾ ಧ್ಯಾನದಲ್ಲಿಯೇ ತಲ್ಲೀನರಾಗಿರುತ್ತಾರೆ. ಅವರ ದರ್ಶನ ಸಿಕ್ಕುವುದು ಬಹಳ ಕಷ್ಟ. ಚೈತ್ರಮಾಸದಲ್ಲಿ ಮಾತ್ರ ಕೆಲವು ದಿನಗಳ ಕಾಲ ಬಹಿರ್ಮುಖರಾಗಿ ತಮ್ಮ ನೆಚ್ಚಿನ ಶಿಷ್ಯಂಗೆ ದರ್ಶನ ನೀಡುತ್ತಾರೆ. ನಿನ್ನ ಹಂಬಲ ಉತ್ಕಟವಾಗಿದ್ದರೆ ಅವರ ದರ್ಶನ ಲಭಿಸಬಹುದು."

* * * *

ಜಯಸಿಂಹನು ಆ ಯುವಕ ಸನ್ಯಾಸಿಯನ್ನು ಹೃತ್ಪೂರ್ವವಾಗಿ ವಂದಿಸಿ, ಮರುದಿನವೇ ಆರಿದ್ರಾಪರ್ವತದ ಕಡೆಗೆ ಪ್ರಯಾಣ ಬೆಳೆಯಿಸಿದನು. ವಸಂತಕಾಲವು ಸಮೀಪಿಸುತ್ತಾ ಇದ್ದುದರಿಂದ, ಪಯಣದ ಮೇಲೆ ಪಯಣವನ್ನು ಮಾಡಿ, ಇಪ್ಪತ್ತು ದಿನಗಳಲ್ಲಿ ಪ್ರಭಾತಗಿರಿಗೆ ಸಮೀಪದಲ್ಲಿದ್ದ ಪ್ರಭಾತಪುರಿ ಎಂಬ ಊರನ್ನು ಸೇರಿದನು. ಪಯಣವು ಬಹಳ ಕಷ್ಟಕರವಾಗಿತ್ತು. ಕೆಲವು ದೂರ ರೈಲಿನಲ್ಲಿಯೂ, ಕೆಲವು ದೂರ ಬಸ್ಸಿನಲ್ಲಿಯೂ, ಕೆಲವು ದೂರ ಕಾಲುನಡಿಗೆಯಲ್ಲೂ ಪ್ರಯಾಣ ಮಾಡಿ ಬಳಲಿದ್ದನು.

ಪ್ರಭಾತಪುರಿಯನ್ನು ತಲುಪಿದ ನಂತರ ಜಯಸಿಂಹನು ಅಮಿತಾನಂದರ ವಿಚಾರದಲ್ಲಿ ಸಮಾಚಾರವನ್ನು ಸಂಗ್ರಹಿಸತೊಡಗಿದನು. ಆ ಊರಿನಲ್ಲಿ ಯಾರಿಗೂ ಅಮಿತಾನಂದರ ಹೆಸರೇ ಗೊತ್ತಿರಲಿಲ್ಲ. ಪ್ರಭಾತಗಿರಿಯಲ್ಲಿ ಯಾವ ಸನ್ಯಾಸಿಯೂ ಇಲ್ಲವೆಂದೂ, ಅಲ್ಲಿರಲು ಯಾರಿಗೂ ಸಾಧ್ಯವಿಲ್ಲವೆಂದೂ, ಅವರು ಜಯಸಿಂಹನಿಗೆ ಹೇಳಿದರು. ಜಯಸಿಂಹನಿಗೆ ನಿರಾಶೆಯಾಯಿತು. ಆದರೆ ತನಗೆ ಸಿಕ್ಕಿದ್ದ ತರುಣ ಸನ್ಯಾಸಿಯು, ಅಮಿತಾನಂದರಿರುವ ಸ್ಥಳ ಯಾರಿಗೂ ಗೊತ್ತಿಲ್ಲವೆಂದು ಹೇಳಿದ್ದು, ಅವನ ನೆನಪಿಗೆ ಬಂದು ಸಮಾಧಾನವಾಯಿತು.

ಪ್ರಭಾತಪುರಿಯಲ್ಲಿ ಎರಡು ದಿನಗಳು ವಿಶ್ರಮಿಸಿಕೊಂಡ ನಂತರ, ಜಯಸಿಂಹನು ನಾಲ್ಕು ದಿವಸಗಳಿಗಾಗುವಷ್ಟು ಬುತ್ತಿಯನ್ನು ಕಟ್ಟಿಕೊಂಡು ಪ್ರಭಾತಪುರಿ ಹತ್ತು ಮೈಲಿಗಳ ದೂರದಲ್ಲಿತ್ತು. ಮಾರ್ಗ ದುರ್ಗಮವಾಗಿತ್ತು. ಗಿಡಮರಗಳ ಮಧ್ಯೆ ಪ್ರಾಣಿಗಳು ಸವೆಸಿದ್ದ ಹಾದಿಯಲ್ಲಿ ಹೋಗಬೇಕಾಗಿತ್ತು. ಬೆಳಗಿನ ಜಾವ ಪ್ರಭಾತಪುರಿಯನ್ನು ಬಿಟ್ಟವನು, ಸಾಯಂಕಾಲ ಪ್ರಭಾತಪುರಿಯ ಕೆಳಗಿದ್ದ ಪಾಳು ದೇಗುಲವನ್ನು ತಲುಪಿದನು.

ದೇಗುಲದ ಸುತ್ತು ಮುತ್ತಲಿದ್ದ ದೃಶ್ಯ ಮನೋಹರವಾಗಿತ್ತು. ಸುತ್ತಲೂ ದಟ್ಟವಾದ ಕಾಡು ಬೆಳೆದಿದ್ದು, ಸಮೀಪದಲ್ಲೇ ಒಂದು ಸಣ್ಣ ಪುಷ್ಕರಣಿ ಇತ್ತು. ದೇವಾಲಯದ ಪಡಶಾಲೆ, ಕೈಸಾಲೆ, ಚಂದ್ರಶಾಲೆಗಳು ಬಹಳ ಹಿಂದೆಯೇ ನಿರ್ನಾಮವಾಗಿದ್ದವು. ಕಲ್ಲಿನಿಂದ ನಿರ್ಮಾಣವಾಗಿದ್ದ ಗರ್ಭಗುಡಿ ಮಾತ್ರ ಹಾಗೆಯೇ ಇತ್ತು. ಸಮೀಪದಲ್ಲಿ ಅಲ್ಲಲ್ಲಿ ಕೆಲವು ಪುರಾತನ ನೆಲಗಟ್ಟುಗಳೂ, ಕಟ್ಟಡದ ಅವಶೇಷಗಳೂ ಕಾಣುತ್ತಿದ್ದವು. ಸುತ್ತಮುತ್ತಲಿನ ಸನ್ನಿವೇಶವನ್ನು ನೋಡಿದರೆ ಬಹುಕಾಲ ಹಿಂದೆ ಆ ಪ್ರದೇಶವು ಒಂದು ಊರಾಗಿತ್ತೆಂದು ತೋರುತ್ತಿತ್ತು.

ಜಯಸಿಂಹನು ದೇವಾಲಯದ ಗರ್ಭಗುಡಿಯೊಳಗೆ ಬಿಡಾರ ಮಾಡಿಕೊಂಡು, ಅಮಿತಾನಂದರ ಶೋಧನೆ ಕಾರ್ಯದಲ್ಲಿ ತೊಡಗಬೇಕೆಂದು ಯೋಚಿಸಿದನು. ವಿಗ್ರಹ ವಿಲ್ಲದ ಗರ್ಭಗುಡಿಯ ಕಲ್ಲಿನ ಬಾಗಿಲನ್ನು ಹಾಕಿಕೊಂಡು ಮಲಗಲು ಯಾವ ತೊಂದರೆಯೂ ಇರಲಿಲ್ಲ. ಆದರೆ ಆ ಬಾಗಿಲಿಗೆ ಚಿಲಕವಿಲ್ಲದಿದ್ದುದು ಒಂದು ದೊಡ್ಡ ಕೊರತೆಯಾಗಿತ್ತು. ವನಸಿರಿಯಿಂದ ಕಂಗೊಳಿಸುತ್ತಿದ್ದ ಆ ವನವು ವನ್ಯ ಮೃಗಗಳಿಂದ ಭಯಾನಕವಾಗಿತ್ತು. ಕತ್ತಲಾಗುವುದಕ್ಕೆ ಇನ್ನೂ ಸ್ವಲ್ಪ ಹೊತ್ತಿತ್ತು. ಆದರೆ ಆಗಲೇ ಬಹಳ ಹತ್ತಿರದಲ್ಲೇ ಕಾಡು ಪ್ರಾಣಿಗಳ ಕೂಗು ಕೇಳಿಬರುತ್ತಿತ್ತು. ಹುಲಿಯ ಕೂಗನ್ನು ಕೇಳಿದಾಗ ಜಯಸಿಂಹನ ಎದೆಯು ಝಲ್ಲೆನ್ನುತ್ತಿತ್ತು.

ಜಯಸಿಂಹನು ಬುತ್ತಿಯನ್ನು ತಿಂದು ಪುಷ್ಕರಣಿಯಲ್ಲಿದ್ದ ತಿಳಿನೀರನ್ನು ಕುಡಿದು ದೇವಾಲಯದಲ್ಲಿ ವಿಶ್ರಾಂತಿ ಪಡೆದನು. ರಾತ್ರಿ ಕಾಡು ಮೃಗಗಳು ದೇವಾಲಯಕ್ಕೆ ನುಗ್ಗದಂತೆ ದೊಡ್ಡ ಕಲ್ಲೊಂದನ್ನು ಒಳಗಡೆಯಿಂದ ಬಾಗಿಲಿಗೆ ಅಡ್ಡವಾಗಿಟ್ಟು, ನಿಶ್ಚಿಂತೆಯಿಂದ ಮಲಗಿದನು. ರಾತ್ರಿ ದೇವಾಲಯದ ಸುತ್ತಲೂ ಕಾಡು ಮೃಗಗಳ ಕೂಗು ಕೇಳಿಬರುತ್ತಿತ್ತು. ಬಳಲಿಕೆಯಿಂದ ಜಯಸಿಂಹನು ನಿದ್ದೆ ಹೋದನು.

ಮರುದಿನ ಬೆಳಿಗ್ಗೆ ಪುಷ್ಕರಣಿಯಲ್ಲಿ ಮಿಂದು, ನಿತ್ಯ ವಿಧಿಗಳನ್ನು ಪೂರೈಸಿ, ಮನೆಯಲ್ಲೇ ಇರುವ ನಿಧಿಯನ್ನು ಮರೆತು, ನಿಧಿಗಾಗಿ ಹುಡುಕುತ್ತಿರುವವನಂತೆ ಅಮಿತಾನಂದರಿಗಾಗಿ ಗಿರಿಯನ್ನೇರಿದನು. ಪೂರ್ವಕಾಲದ ಋಷಿಗಳಂತೆ ಅಮಿತಾನಂದರು ಪರ್ಣಕುಟಿಯಲ್ಲೋ ಅಥವಾ ಗುಹೆಯಲ್ಲೋ ತಪಸ್ಸು ಮಾಡುತ್ತಿರಬಹುದೆಂದು ಅವನು ಭಾವಿಸಿದ್ದನು. ಅವರಿರುವ ಪರ್ಣಕುಟೀರಕ್ಕಾಗಿ ಅಥವಾ ಗುಹೆಗಾಗಿ ಅವನು ಶೋಧನೆ ನಡೆಸಿದ್ದನು.

ಬಹಳ ಹೊತ್ತ ಪ್ರಭಾತಗಿರಿಯ ಹಲವು ಕಡೆಗಳಲ್ಲಿ ಹುಡುಕಿದನು. ಎಲ್ಲಿಯೂ ಅಮಿತಾನಂದರಿರುವ ತಾಣ ಕಾಣಲಿಲ್ಲ. ಸಾಯಂಕಾಲ ಹೊತ್ತು ಇನ್ನೇನು ದೇವಾಲಯಕ್ಕೆ ಹಿಂದಿರುಗಬೇಕೆಂದು ಅವನು ಯೋಚಿಸುತ್ತಿರುವಾಗ, ದೂರದ ಕಲ್ಲುಬಂಡೆಯಲ್ಲಿದ್ದ ಕಲ್ಲು ಪೊಟರೆಯೊಂದು ಅವನ ಕಣ್ಣಿಗೆ ಕಾಣಿಸಿತು. ಪೊಟರೆಯನ್ನು ಪರೀಕ್ಷಿಸಲೋಸುಗ ಬಂಡೆಯಿದ್ದಲ್ಲಿಗೆ ಹೋಗಿ, ಮೇಲಕ್ಕೆ ಹತ್ತಿ ಪೊಟರೆಯೊಳಕ್ಕೆ ಇಣಕಿ ನೋಡಿದನು. ಪೊಟರೆಯ ಬಾಯಲ್ಲಿ ಮೂರು ಹುಲಿಮರಿಗಳು ಆಟವಾಡುತ್ತಿದ್ದುವು. ಮಾನವ ವ್ಯಕ್ತಿಯನ್ನು ನೋಡಿದ ಆ ಮರಿಗಳು ಗಾಬರಿಯಿಂದ ಏಕಾಏಕಿ ಕಿರಿಚಿಕೊಂಡವು. ಪೊಟರೆಯೊಳಗೆ ಮಲಗಿದ್ದ ಹೆಣ್ಣು ಹುಲಿ ತನ್ನ ಮರಿಗಳ ಆರ್ತನಾದವನ್ನು ಕೇಳಿ ಎಚ್ಚೆತ್ತು ಹೊರಗೆ ಧಾವಿಸಿತು.

ಹುಲಿಯ ಮರಿಗಳನ್ನು ಕಂಡ ತಕ್ಷಣ ಜಯಸಿಂಹನು ಗಾಬರಿಗೊಂಡು ಬಂಡೆಯಿಂದ ಕೆಳಗಿಳಿಯುತ್ತಿದ್ದನು. ಅವನನ್ನು ನೋಡಿದ ಹುಲಿ ಅವನ ಮೇಲೆರಗಿ, ಇನ್ನೇನು ತನ್ನ ಪಂಜದಿಂದ ಅವನ ತಲೆಯನ್ನು ಅಪ್ಪಳಿಸಬೇಕೆನ್ನುವಷ್ಟರಲ್ಲಿ, ಜಯಸಿಂಹನು ಹೆದರಿಕೆಯಿಂದ ಜಾರಿ ಕೆಳಗೆ ಬಿದ್ದನು. ಜಾರಿ ಬಿದ್ದವನೇ ಸುಮಾರು ಮನ್ನೂರು ಅಡಿಗಳ ಕೆಳಗೆ ಗಿರಿಯ ಇಳಿಜಾರಿನಲ್ಲಿ ಉರುಳಿ ಹೋದನು.

ಅದೃಷ್ಟವಶಾತ್ ಯಾವ ಕಾರಣದಿಂದಲೋ ಹುಲಿ ಅವನ ಬೆನಟ್ಟಿಬರಲಿಲ್ಲ. ಅವನು ಉರುಳುತ್ತಿರುವಾಗ ಮೂರ್ಛೆ ಹೋದನು. ಮೂರ್ಛೆ ತಿಳಿದೆದ್ದ ನಂತರ ಅವನು ಎಲ್ಲಿಯೂ ನಿಲ್ಲದೆ ಒಂದೇ ಸುಮ್ಮನೆ ಓಡುತ್ತಾ ದೇವಾಲಯವನ್ನು ಸೇರಿದನು. ಆ ದಿನದ ಅನುಭವವು ಅವನಿಗೆ ಭಯವನ್ನುಂಟು ಮಾಡುವುದರ ಜೊತೆಗೆ ನಿರಾಶೆಯನ್ನು ಸಹ ಉಂಟುಮಾಡಿತು. ಅಮಿತಾನಂದರಿಗಾಗಿ ಹುಡುಕುವುದು ವ್ಯರ್ಥವೆಂದು ಅವನು ಭಾವಿಸಿದನು. ಮುಂದೇನು ಮಾಡಬೇಕೆಂದು ಯೋಚಿಸುತ್ತಾ ನಿದ್ದೆ ಹೋದನು.

ಮರುದಿನ ಮುಂಜಾನೆ ಎದ್ದು ಹೊರಗಡೆ ನೋಡುವಲ್ಲಿ ದೇವಾಲಯದ ಸುತ್ತಲೂ ಕಾವಳ ಕವಿದಿತ್ತು. ದೇವಾಲಯವು ಮಂಜು ಮುಸುಕಿ ಸಮುದ್ರದ ಮಧ್ಯೆ ಇರುವ ದ್ವೀಪದೋಪಾದಿಯಲ್ಲಿ ಕಾಣುತ್ತಿತ್ತು. ಅಮಿತಾನಂದರಿಗಾಗಿ ಹುಡುಕುವದನ್ನು ಕೈಬಿಡಬೇಕೇ ಅಥವಾ ಇನ್ನೂ ಒಂದು ದಿನ ಶ್ರಮ ಪಟ್ಟು ನೋಡಬೇಕೆ ಎಂಬುದನ್ನು ಯೋಚಿಸುತ್ತಾ, ಜಯಸಿಂಹನು ಪುಷ್ಕರಣಿಯಲ್ಲಿ ಮಿಾಯುತ್ತಿರುವಾಗ, ಒಂದು ಆಶ್ಚಯಕರವಾದ ಘಟನೆ ನಡೆಯಿತು. ಕಾಷಾಯ ವಸ್ತ್ರಧಾರಿಯಾಗಿದ್ದ ಸನ್ಯಾಸಿಯೊಬ್ಬನು, ಅವಸರವಾಗಿ ದೇವಾಲಯದ ಗರ್ಭಗುಡಿಯಿಂದ ಹೊರಬಿದ್ದು, ಕವಿದಿದ್ದ ಮಂಜಿನಲ್ಲಿ ಮಾಯವಾದನು. ಜಯಸಿಂಹನು ತನ್ನ ಕಣ್ಣುಗಳನ್ನು ನಂಬಲಾರದವನಾಗಿದ್ದನು. ಕೇವಲ ಕೆಲವು ನಿಮಿಷಗಳ ಹಿಂದೆ ಅವನು ದೇವಾಲಯದ ಗರ್ಭಗುಡಿಯಿಂದ ಪುಷ್ಕರಣಿಗೆ ಬಂದಿದ್ದನು. ಆಗ ಗರ್ಭಗುಡಿಯಲ್ಲಿ ಯಾರೂ ಇರಲಿಲ್ಲ. ಪುಷ್ಕರಣಿಗೆ ಬಂದನಂತರ ಯಾರೂ ದೇವಾಲಯಕ್ಕೆ ಹೋದುದನ್ನು ಅವನು ನೋಡಿರಲಿಲ್ಲ. ಜಯಸಿಂಹನು ಆಶ್ಚರ್ಯಭರಿತನಾಗಿ ನಾನಾ ಊಹಾಪೋಹಗಳಲ್ಲಿ ತೊಡಗಿದನು.

"ಈ ವ್ಯಕ್ತಿ ಯಾರಾಗಿರಬಹುದು ? ಇವರೇ ಅಮಿತಾನಂದರಾಗಿರಬಹುದೇ? ಛೇ! ಇರಲಿಕ್ಕಿಲ್ಲ. ಇವನು ಯುವಕನಂತೆ ಕಂಡನು. ಅಮಿತಾನಂದರು ವೃದ್ಧರೆಂದು ಅಂದು ಆ ತರುಣ ಸನ್ಯಾಸಿ ನನಗೆ ತಿಳಿಸಿದ್ದನು. ಅವನ ಮೋರೆಯೂ ಸಹ ನನಗೆ ಮಂಜಿನಲ್ಲಿ ಕಾಣಲಿಲ್ಲವಲ್ಲಾ. ನಾನು ಭ್ರಾಂತನಾಗಿದ್ದರೂ ಆಗಿರಬಹುದು. ಅಥವಾ ದೆವ್ವ ಭೂತಗಳ ಚೇಷ್ಟೆ ಆಗಿದ್ದರೂ ಆಗಿರಬಹುದು. ಏನಾದರಾಗಲಿ ಈ ವ್ಯಕ್ತಿ ಯಾರೆಂಬುದನ್ನು ಪತ್ತೆ ಮಾಡಲೇಬೇಕು" ಎಂದು ಜಯಸಿಂಹನು ಮನಸ್ಸಿನಲ್ಲೇ ಅಂದುಕೊಂಡನು.

ಸ್ನಾನ ಮಾಡಿ ನಂತರ ಜಯಸಿಂಹನು ಬುತ್ತಿಯನ್ನು ತಿಂದು, ಕಣ್ಮರೆಯಾದ ವ್ಯಕ್ತಿ ಮರಳಿಬರಬಹುದೆಂಬ ಆಸೆಯಿಂದ ದೇವಾಲಯದ ಸಮಿಾಪ ಒಂದು ಮರದ ಕೆಳಗೆ ಅಡಗಿ ಕುಳಿತನು. ಕಣ್ಮೇಲೆ ಕಣ್ಣಿಟ್ಟು ನೋಡುತ್ತಿದ್ದನು. ನಿಮಿಷಗಳು ಉರುಳಿದವು; ಗಂಟೆಗಳು ಕಳೆದವು; ಮಧ್ಯಾಹ್ನವಾಯಿತು; ಆ ನಂತರ ಸಂಜೆಯೂ ಬಂತು. ಆದರೆ ಆ ಸನ್ಯಾಸಿ ತಿರುಗಿಬರಲೇ ಇಲ್ಲ. ಸಂಜೆಯ ಕಾವಳ ಮತ್ತೆ ಆ ಪ್ರದೇಶವನ್ನು ಸುತ್ತಲೂ ಆವರಿಸಿತು. ಅವನು ಕುಳಿತುಕೊಂಡಿದ್ದ ಜಾಗದಿಂದ ದೇವಾಲಯವು ಅತಿ ಸಮಿಾಪದಲ್ಲೇ ಇದ್ದರೂ ಮಸುಕು ಕಾಣಿಸಿಕೊಂಡಿತು. ಅಷ್ಟು ಹೊತ್ತಿಗೆ ಬೆಳಿಗ್ಗೆ ನೋಡಿದ ಕಾವಿ ಬಟ್ಟೆಯ ವ್ಯಕ್ತಿ ಗರ್ಭಗುಡಿಯೊಳಗೆ ಹೋಗುತ್ತಿರುವುದು ಅಸ್ಪಷ್ಟವಾಗಿ ಕಾಣಿಸಿತು.

ಜಯಸಿಂಹನಿಗೆ ಒಂದು ಕಡೆ ಕಾತರ; ಇನ್ನೊಂದು ಕಡೆ ಕೌತುಕ; ಮತ್ತೊಂದು ಕಡೆ ಭಯ. "ಮಾನವನೋ, ಭೂತವೋ ಅಥವಾ ನನ್ನ ಭ್ರಾಂತಿಯೋ? ಎಂದು ಯೋಚಿಸುತ್ತಾ ದೇವಾಲಯದ ಕಡೆಗೆ ಹೆಜ್ಜೆಯಿಟ್ಟನು. ಸುತ್ತಲೂ ಕತ್ತಲು ಕವಿಯುತ್ತಿತ್ತು; ಮಂಜು ಸುರಿಯುತ್ತಿತ್ತು. ಹೊರಗಡೆ ನಿಲ್ಲಲೂ ಭಯ; ಒಳಗಡೆ ಹೋಗಲು ಭಯ; ದೇವರ ಮೇಲೆ ಭಾರಹಾಕಿ ತನ್ನ ಕೈಯಲ್ಲಿದ್ದ ವಿದ್ಯುತ್‌ದೊಂದಿಯನ್ನು ಹೊತ್ತಿಸಿ

ದೇವರನ್ನು ಸ್ಮರಿಸುತ್ತಾ ದೇಗುಲದೊಳಗೆ ನುಗ್ಗಿದನು. ದೊಂದಿಯ ಸಹಾಯದಿಂದ ಗರ್ಭಗುಡಿಯಲ್ಲೆಲ್ಲಾ ಹುಡುಕಿದನು. ಅಲ್ಲೇನೂ ಕಾಣಿಸಲಿಲ್ಲ. ಹೊರಗಡೆ ಬಂದು ಪ್ರಾಕಾರದೆಲ್ಲೆಲ್ಲಾ ಹುಡುಕಿದನು. ಎಲ್ಲಿಯೂ ಆ ವ್ಯಕ್ತಿಯ ಸುಳಿವಿರಲಿಲ್ಲ. ಜಯಸಿಂಹನು ಆಶ್ಚರ್ಯದಿಂದ ಬೆಪ್ಪಾದನು. ಭಯದಿಂದ ನಡುಗಿದನು.

"ಇದೇನಾಶ್ಚರ್ಯ! ನನ್ನ ಕಣ್ಣುಗಳನ್ನು ನಂಬದಿರುವಂತೆಯೂ ಇಲ್ಲ; ನಂಬುವಂತೆಯೂ ಇಲ್ಲ. ಬೆಳಿಗ್ಗೆ ನಾನು ನೋಡಿದ ಕಾವಿ ವಸ್ತ್ರದ ವ್ಯಕ್ತಿ ಗರ್ಭಗುಡಿಯೊಳಗೆ ಹೋದುದನ್ನು ಕಣ್ಣಾರೆ ನೋಡಿದೆನು. ನಾ ನೋಡಿದ್ದು ನಿಜವಾದರೆ ಆ ವ್ಯಕ್ತಿ ಎಲ್ಲಿ ಮಾಯವಾದ? ಇದೇನು ನನ್ನ ಮನೋವಿಕಲ್ಪವೋ? ಭೂತಪ್ರೇತಗಳ ಕೈವಾಡವೋ? ನನಗೊಂದು ಅರಿಯದಾಗಿದೆ," ಎಂದು ಜಯಸಿಂಹನು ಯೋಚಿಸತೊಡಗಿದನು.

ಗರ್ಭಗುಡಿಯ ಕದವನ್ನು ಮುಚ್ಚಿ, ಕದಕ್ಕೆ ಅಡ್ಡಲಾಗಿ ಕಲ್ಲನ್ನು ಇಟ್ಟು ಮಲಗಿದನು. ನಿದ್ದೆ ಬರಲೇ ಇಲ್ಲ. ಅವನು ತಲೆಯಲ್ಲೆಲ್ಲಾ ಭೂತ ಪ್ರೇತಗಳ ವಿಚಾರವೇ ತುಂಬಿಹೋಗಿತ್ತು. ಒಮ್ಮೊಮ್ಮೆ ಹೆದರಿಕೆಯಿಂದ ನಡುಗುತ್ತಿದ್ದನು. ಮತ್ತೊಮ್ಮೆ ಯೋಗಿಯಾಗುವವನು ಭೂತ ಪ್ರೇತಗಳಿಗೆ ಅಂಜುವುದು ಹೇಡಿತನವೆಂದು ಧೈರ್ಯವನ್ನು ತಾಳುತ್ತಿದ್ದನು. ಹೊರಗಡೆ ಯಾವ ಸಪ್ಪಳ ಕೇಳಿದರೂ ಆಲಿಸುತ್ತಿದ್ದನು. ರಾತ್ರಿ ಬಹಳ ಹೊತ್ತಾದ ನಂತರ ಮಾನಸಿಕ ಬಳಲಿಕೆಯಿಂದ ನಿದ್ದೆ ಹೋದನು.

ಬೆಳಗಾಗುವ ಹೊತ್ತಿಗೆ ಗರ್ಭಗುಡಿಯ ಮೂಲೆಯಲ್ಲಿ ಗೋಡೆಯಲ್ಲಿ ಏನೋ ಶಬ್ದವಾದಂತೆ ಕೇಳಿಸಿತು. ಜಯಸಿಂಹನು ಮಲಗಿದಲ್ಲಿಯೇ ಕಣ್ತೆರೆದು ಆ ಕಡೆ ತನ್ನ ದೃಷ್ಟಿಯನ್ನು ಬೀರಿದನು. ಗರ್ಭಗುಡಿಯ ಕಲ್ಲಿನಗೋಡೆಯಲ್ಲಿ ಕಲ್ಲು ಚಪ್ಪಡಿಯೊಂದು ತನ್ನಷ್ಟಕ್ಕೆ ತಾನೆ ಹಿಂದೆ ಸರಿಯುತ್ತಿತ್ತು. ಅವನಿಗೆ ಮೈ ಜುಂ ಎಂದಿತು. ಉಸಿರು ಕಟ್ಟಿ ಮುಂದೆ ಏನಾಗುತ್ತದೆ ಎಂಬುದನ್ನು ಅರೆಗಣ್ಣಿನಿಂದ ನೋಡುತ್ತಿದ್ದನು. ಇದ್ದಕ್ಕಿದ್ದಹಾಗೆ ಗೋಡೆಯಲ್ಲಿ ಸಣ್ಣ ದ್ವಾರವಾಯಿತು. ಅದರಿಂದ ಹಿಂದಿನ ದಿನ ನೋಡಿದ್ದ ಕಾವೀ ವಸ್ತ್ರಧಾರಿ ಹೊರಗೆ ಬಂದನು.ತಕ್ಷಣ ಕಲ್ಲು ಚಪ್ಪಡಿ ತನ್ನಷ್ಟಕ್ಕೆ ತಾನೆ ಮುಂದೆ ಸರಿದು ಗೋಡೆಗೆ ಸಮನಾಗಿ ಸೇರಿಕೊಂಡಿತು.

ಜಯಸಿಂಹನು ನಿದ್ದೆ ಮಾಡುವವನಂತೆ ನಟಿಸುತ್ತಿದ್ದನು. ಕಾವಿ ಬಟ್ಟೆಯ ವ್ಯಕ್ತಿ, ಗರ್ಭಗುಡಿಯ ಬಾಗಿಲು ಮುಚ್ಚಿರುವುದನ್ನು ನೋಡಿ, ತನ್ನ ದೃಷ್ಟಿಯನ್ನು ಅತ್ತ ಇತ್ತ ಹೊರಳಿಸಿದನು. ಮಲಗಿದ್ದ ಜಯಸಿಂಹನು ಅವನ ದೃಷ್ಟಿಗೆ ಬಿದ್ದನು "ಯಾರದು ಮಲಗಿರುವವರು?" ಎಂದು ಗರ್ಜಿಸಿದನು. ಜಯಸಿಂಹನು ಆಗತಾನೆ ಎದ್ದವನಂತೆ ನಟಿಸುತ್ತಾ "ನಾನೊಬ್ಬ ದೂರದೇಶದ ಪ್ರವಾಸಿ ಪ್ರಭಾತಗಿರಿಯನ್ನು ನೋಡುವ ಸಲುವಾಗಿ ನಿನ್ನೆ ಬಂದಿದ್ದೆ," ಎಂದನು.

"ಇದು ಮಹಾರುದ್ರ ದೇವಾಲಯ ಮಹಾರುದ್ರನ ಗರ್ಭಗುಡಿಯಲ್ಲಿ ಮಲಗುವುದು ಅಕ್ಷಮ್ಯ ಅಪರಾಧ ಮತ್ತು ಅಪಾಯಕರ. ನಿನಗೆ ಪ್ರಾಣದ ಮೇಲೆ ಆಸೆ ಇದ್ದರೆ ಈಗಲೇ ಇಲ್ಲಿಂದ ತೊಲಗು."

"ನಾನು ಗೊತ್ತಿಲ್ಲದೆ ಮಲಗಿದ್ದೆ. ಕ್ಷಮಿಸಿ, ಅದಷ್ಟು ಜಾಗ್ರತೆ ಹೊರಟು ಹೋಗುತ್ತೇನೆ. ತಾವು ಯಾರು, ಎಲ್ಲಿಂದ ಬಂದಿರಿ?"

"ನಾನಾರಾದರೆ ನಿನಗೇನು? ನಾನೊಬ್ಬ ಮಹಾರುದ್ರನ ಭಕ್ತ." ಎಂದು ಹೇಳಿ ಆ ಕಾವಿ ಬಟ್ಟೆಯ ವ್ಯಕ್ತಿ ಬಾಗಿಲಿಗೆ ಚಾಚಿದ್ದ ಕಲ್ಲನ್ನು ಜಾರಿಸಿ ಬಾಗಿಲನ್ನು ತೆಗೆದು ಹೊರಗಡೆ ಹಿಮದಲ್ಲಿ ಅದೃಶ್ಯನಾದನು.

ಅವನು ಹೋದನಂತರ ಜಯಸಿಂಹನು ಜಾಗ್ರತೆಯಾಗಿ ನಿತ್ಯ ವಿಧಿಗಳನ್ನು ಪೂರೈಸಿ, ಗರ್ಭಗುಡಿಯ ಕಲ್ಲು ಚಪ್ಪಡಿಯ ರಹಸ್ಯವನ್ನು ಅರಿಯಲು ಉದ್ಯುಕ್ತನಾದನು. ಕಲ್ಲು ಚಪ್ಪಡಿಯನ್ನು ಬಲವಾಗಿ ಹಿಂದಕ್ಕೆ ತಳ್ಳಿದನು. ಒಡನೆ ಅದು ಹಿಂದಕ್ಕೆ ಸರಿದು ಗೋಡೆಯಲ್ಲೊಂದು ದ್ವಾರವಾಯಿತು. ಅದರಲ್ಲಿ ಇಣಕಿ ನೋಡುವಲ್ಲಿ, ಒಂದು ಸುರಂಗ ಮಾರ್ಗ ಕಾಣಿಸಿತು. ಜಯಸಿಂಹನು ದ್ವಾರದಲ್ಲಿ ನುಸುಳಿ ಮುಂದೆ ಮುಂದೆ ಸಾಗಿದನಂತರ ಎಲ್ಲಿಂದಲೋ ಬೆಳಕು ಬೀಳುವುದು ಕಾಣಿಸಿತು. ಬೆಳಕಿನ ಮುಂದೆ ಹೋದಾಗ ಮೆಟ್ಟಲುಗಳು ಕಾಣಿಸಿದುವು. ಒಂದೊಂದಾಗಿ ನೂರಾರು ಮೆಟ್ಟಲುಗಳನ್ನು ಹತ್ತಿ ಹೋದನು.

ಮೇಲೆ ಒಂದು ರಂಧ್ರ ಕಾಣಿಸಿತು. ಆ ರಂಧ್ರದಲ್ಲಿ ತೂರಿಕೊಂಡು ಮೇಲಕ್ಕೆ ಹತ್ತಿದನು. ಪ್ರಭಾತಗಿರಿಯ ಮೇಲಿದ್ದ ವಿಶಾಲ ಬಂಡೆಯ ಮೇಲೆ ತಾನಿರುವೆನೆಂದು ಅವನಿಗೆ ಭಾಸವಾಯಿತು. ಪ್ರಭಾತಗಿರಿಯ ತುದಿಯು ಅಲ್ಲಿಂದ ಐನೂರು ಅಡಿಗಳ ಎತ್ತರದಲ್ಲಿತ್ತು. ದೃಶ್ಯರಮಣೀಯವಾಗಿತ್ತು. ಸನ್ನಿವೇಶವು ಸಿದ್ಧ ಪುರುಷನೊಬ್ಬನಿರುವ ಭೂಮಿ ಅದೆಂಬುದನ್ನು ಸೂಚಿಸುತ್ತಿತ್ತು. ಶಾಂತಿಯ ಬುಗ್ಗೆಯೊಡೆದು ಚೆಲ್ಲಿ ಸೂಸುವಂತಿತ್ತು. ಜಯಸಿಂಹನು ಮೆಟ್ಟಲುಗಳನ್ನು ಹತ್ತಿ ದಣಿದಿದ್ದರೂ ಆನಂದದಲ್ಲಿ ಮುಳುಗಿದನು.

ಅಲ್ಲಿಂದ ಮುಂದೆ ಪ್ರಭಾತಗಿರಿಯ ತುಟ್ಟತುದಿಯಲ್ಲಿ ಒಂದು ಕಲ್ಲು ಮಂಟಪವನ್ನು ಹೋಲುವ ಗುಹೆಯೊಂದು ಕಾಣಿಸಿತು. ವಿಶ್ರಮಿಸಿಕೊಂಡ ನಂತರ ಗುಹೆಯಿದ್ದ ಕಡೆಗೆ ಗಿರಿಯನ್ನೇರತೊಡಗಿದನು. ಒಂದು ಗಂಟೆಯೊಳಗಾಗಿ ಆ ಸ್ಥಳವನ್ನು ಸೇರಿದನು. ಉನ್ಮಾದಿನಿ ಜಲಪಾತವನ್ನು ನೋಡುತ್ತಾ ಕುಳಿತಿದ್ದ ಅಮಿತಾನಂದರು ಜಯಸಿಂಹನ ಕಾಲುಸಪ್ಪಳವನ್ನು ಕೇಳಿ "ಶಿವಾ, ಇಷ್ಟು ಜಾಗ್ರತೆ ಬಂದುಬಿಟ್ಟೆಯಾ?" ಎಂದು ಹೇಳುತ್ತಾ ಹಿಂದಿರುಗಿ ನೋಡಿದರು. ಆಗಂತುಕನೊಬ್ಬನು ಹೇಳದೆ ಕೇಳದೆ ಗುಹೆಯೊಳಗೆ ಬರುತ್ತಿರುವುದನ್ನು ನೋಡಿ ಅವರಿಗೆ ಆಶ್ಚರ್ಯವೂ ಸ್ವಲ್ಪಮಟ್ಟಿಗೆ ಕೋಪವೂ ಉಂಟಾಯಿತು.

"ಪೂಜ್ಯರಿಗೆ ಪ್ರಣಾಮಗಳು. ಅಪ್ಪಣೆಯಿಲ್ಲದೆ ಬಂದುದಕ್ಕಾಗಿ ತಮ್ಮ ಕ್ಷಮೆಯನ್ನು ಕೇಳುತ್ತೇನೆ," ಎಂದು ಹೇಳಿ, ಜಯಸಿಂಹನು ಅಮಿತಾನಂದರ ಚರಣಗಳಿಗೆರಗಿದನು.

"ಮಗೂ, ಏಳು. ಯಾಕೆ ಇಷ್ಟು ದೂರ ಬಂದೆ? ಯಾರೂ ಪ್ರವೇಶಿಸಲಾಗದ ಈ ಸ್ಥಳಕ್ಕೆ ನೀನು ಬಂದ ಬಗೆ ಹೇಗೆ?"

"ಪೂಜ್ಯರೇ, ನಾನು ಹೇಮಾವತಿ ರಾಜ್ಯದವನು. ನಮ್ಮ ತಂದೆ ದುರ್ಗಾದಾಸರು ಆ ರಾಜ್ಯದ ಮುಖ್ಯಮಂತ್ರಿಯಾಗಿದ್ದರು. ದುಷ್ಟರು ಕೆಲವರು ರಾಜ್ಯದ ಕಾಂಗ್ರೆಸ್ಸನ್ನು

ಆಕ್ರಮಿಸಿಕೊಂಡು ತನ್ನ ತಂದೆಯನ್ನು ಪದಚ್ಯುತಿಗೊಳಿಸಿದರು. ಆ ದುಷ್ಟರು ಅಲ್ಲಿಗೂ ಬಿಡದೆ ನಮ್ಮ ತಂದೆಗೆ ಅಪರಿಮಿತ ಕಿರುಕುಳಗಳನ್ನು ಕೊಟ್ಟು, ಆ ಪರಿಣಾಮವಾಗಿ ಅವರು ಕೆಲವು ತಿಂಗಳ ಹಿಂದೆ ಸ್ವರ್ಗಸ್ಥರಾದರು. ಅವರು ನಮ್ಮ ರಾಜ್ಯದ ಜನರಿಗೆ ಆರಾಧ್ಯ ದೇವತೆಯಂತಿದ್ದರು. ಇಂದು ರಾಜ್ಯವು ದಾಮೋದರ ಮತ್ತು ಶಂಭು ಎಂಬ ದುಷ್ಟ ಶಿಖಾಮಣಿಗಳ ಮುಷ್ಟಿಯಲ್ಲಿ ಸಿಕ್ಕಿ ನರಳುತ್ತಾ ಇದೆ. ನಮ್ಮ ತಾಯಿ ವಿಧವೆಯಾಗಿ ಅನಾಥರಾಗಿದ್ದಾರೆ. ನನಗೆ ಜೀವನದಲ್ಲಿ ಜಿಗುಪ್ಸೆಯಾಗಿದೆ. ಯೋಗಿಯಾಗಬೇಕೆಂಬ ಹಂಬಲದಿಂದ ತಮ್ಮ ಸಾನ್ನಿಧ್ಯಕ್ಕೆ ಬಂದಿದ್ದೇನೆ. ನನ್ನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿ, ಉಪದೇಶವನ್ನು ಅನುಗ್ರಹಿಸಬೇಕಾಗಿ ಪ್ರಾರ್ಥಿಸುತ್ತೇನೆ."

"ವತ್ಸಾ, ನಿನ್ನ ದಾರುಣ ಕತೆಯನ್ನು ಕೇಳಿ ನನಗೆ ದುಃಖವಾಯಿತು. ನಿನ್ನ ಪಿತೃ ವರ್ಯರ ವಿಚಾರವನ್ನು ನಾನು ಕೇಳಿದ್ದೆ. ಅವರು ಸಾತ್ವಿಕರೆಂದೂ, ಪ್ರಜೆಗಳಿಂದ ಪೂಜಿತರಾದವರೆಂದೂ ಇಡೀ ಹಿಂದೂಸ್ಥಾನದೆಲ್ಲೆಲ್ಲಾ ಪ್ರತೀತಿ ಯೋಗಿಯಾಗಬೇಕೆಂಬ ನಿನ್ನ ಹಂಬಲ ಮೆಚ್ಚತಕ್ಕದ್ದೇ. ಆದರೆ ಯೋಗವೆಂಬುದು ಮಕ್ಕಳಾಟದ ಚೆಂಡು ದಾಂಡುಗಳೂ ಅಲ್ಲ; ಮಕ್ಕಳೂಟದ ಲಾಡು ಚಿರೋಟಿಗಳೂ ಅಲ್ಲ; ಯೋಗಿಯಾಗುವುದು ಸಾಮಾನ್ಯರಿಗೆ ಸಾಮಾನ್ಯವಾಗಿ ಸಾಧ್ಯವಾಗದ ಮಾತು. ಬಹುಶಃ ನೀನು ಯೋಗದ ಮಹಿಮೆಯನ್ನು ಪುಸ್ತಕಗಳಲ್ಲಿ ಓದಿ ಭ್ರಾಂತನಾಗಿರುವಂತೆ ತೋರುತ್ತದೆ."

"ಗುರಿಯನ್ನು ಸಾಧಿಸುತ್ತೇನೆಂಬ ಭರವಸೆ ನನಗಿದೆ."

"ಜಗತ್ತಿನ ರಾಗದ್ವೇಷಗಳನ್ನು ಕಿತ್ತೊಗೆದ ಜಗಜಟ್ಟಿ ಮಾತ್ರ ಯೋಗಿಯಾಗಲು ಸಾಧ್ಯ. ಆಸೆ, ಅಸೂಯೆ, ದ್ವೇಷಗಳಿಂದ ಕೂಡಿರುವವನು ಎಂದಿಗೂ ಯೋಗಿಯಾಗ ಲಾರನು. ಇಹಲೋಕದ ಆಸೆಯನ್ನು ತೊರೆದಾಗ ಮಾತ್ರ ಪರಲೋಕದ ಬೆಳಕು ಕಾಣಿಸುವುದು. ಆತ್ಮ ಜ್ಞಾನದ ಸರೋವರದಲ್ಲಿ ಮುಳುಗಲಿಚ್ಛಿಸುವವರು ಭೂಮಿಯನ್ನು ಬಿಟ್ಟು ನೀರಿಗಿಳಿಯಬೇಕು. ಮಾನವರು ಇಹಲೋಕದ ನೂರಾರು ಬಂಧನಗಳಿಗೊಳಗಾದ ಸೆರೆಯಾಳು. ಪ್ರೇಮ ದ್ವೇಷಗಳೆರಡೂ ಒಂದೊಂದು ವಿಧವಾದ ಬಂಧನಗಳು. ನಿನ್ನ ಮನಸ್ಸು ಯೋಗಸಾಧನೆಗಿನ್ನೂ ಪರಿಪಕ್ವವಾಗಿಲ್ಲ. ನಿನಗೆ ಬಂದಿರುವ ವೈರಾಗ್ಯ ತಾತ್ಕಾಲಿಕವಾದುದು."

" ತಮ್ಮ ಅನುಗ್ರಹ ಲಭಿಸಿದರೆ ಸಿದ್ಧಿ ಲಭಿಸುತ್ತದೆ."

"ನಿನಗೇ ಬರೀ ಭ್ರಾಂತಿ. ಎಷ್ಟೇ ಸಿದ್ಧಿಯನ್ನು ಪಡೆದವರಾದರೂ ಸಂಸ್ಕಾರವಿಲ್ಲದವ ನೊಬ್ಬನನ್ನು ಸಿದ್ಧಪುರುಷನನ್ನಾಗಿ ಮಾಡಲಾರರು. ಅದಿರಲಿ. ನೀನು ಇಲ್ಲಿಗೆ ಬಂದ ರೀತಿ ಹೇಗೆ?"

ಜಯಸಿಂಹನು ಅಮಿತಾನಂದರ ದರ್ಶನಕ್ಕಾಗಿ ತಾನು ಪಟ್ಟ ಕಷ್ಟಗಳೆಲ್ಲವನ್ನೂ ಒಂದೊಂದಾಗಿ ವಿವರಿಸಿ, ಆ ದಿನ ಬೆಳಿಗ್ಗೆ ದೇವಾಲಯದ ಗೋಡೆಯಲ್ಲಿದ್ದ ದ್ವಾರವನ್ನು ಕಂಡುಹಿಡಿದ ಬಗೆಯನ್ನು ಹೇಳುತ್ತಿರುವಷ್ಟರಲ್ಲಿ, ಅಮಿತಾನಂದರ ಶಿಷ್ಯ ಶಿವಾನಂದನು ಅಲ್ಲಿಗೆ ಬಂದು, ಜಯಸಿಂಹನನ್ನು ನೋಡಿ, ಕೋಪದಿಂದ ಕೆಂಡದಂತಾಗಿದ್ದ ತನ್ನ

ಕಣ್ಣುಗಳನ್ನು ಅರಳಿಸಿ, "ಈ ಸ್ಥಳವನ್ನು ಬಿಟ್ಟು ಹೋಗಬೇಕೆಂದು ನಿನಗೆ ಮುಂಜಾನೆಯೇ ತಿಳಿಸಿದ್ದೆ. ಹೋಗುವ ಬದಲು ಕಳ್ಳತನದಿಂದ ಗುಹೆಗೆ ಬಂದಿದ್ದೀಯಾ?" ಎಂದು ಗುಡುಗಿದನು.

"ವತ್ಸಾ, ಕೋಪಗೊಳ್ಳಬೇಡ. ನಿನ್ನ ತಪ್ಪಿನಿಂದ ಇವನು ಗುಹೆಗೆ ಬರುವ ದ್ವಾರವನ್ನು ಪತ್ತೆ ಮಾಡಿದನು. ಪದೇಪದೇ ಹೊರಗಡೆ ಹೋಗಬಾರದೆಂದು, ನಾನು ಎಷ್ಟು ಹೇಳಿದರೂ ಕೇಳದೆ, ನಿನ್ನೆ ತಾನೆ ಹೊರಗಡೆ ಹೋಗಿ ಬಂದವನು, ಇಂದು ಪುನಃ ಹೊರಗಡೆ ಹೋಗಿ ಬರುವ ಪ್ರಮೇಯ ನಿನಗೇನಿತ್ತು? ಇವನೊಬ್ಬ ಸುಸಂಸ್ಕೃತ ಯುವಕ. ಇವನು ಈ ರಾತ್ರಿ ಇಲ್ಲೇಇರಲಿ. ಏನಾದರೂ ಉಪಹಾರವನ್ನು ಅವನಿಗೆ ಕೊಡು. ವತ್ಸಾ ಜಯಸಿಂಹ, ನೀನು ಈ ರಾತ್ರಿ ಇಲ್ಲಿಯೇ ವಿಶ್ರಮಿಸಿಕೊ. ನಾಳೆ ಮುಂಜಾನೆ ಹೋಗಬಹುದು," ಎಂದು ಅಮಿತಾನಂದರು ನುಡಿದರು.

"ಪೂಜ್ಯರೇ, ತಾವು ತೋರಿಸುತ್ತಿರುವ ವಾತ್ಸಲ್ಯಕ್ಕಾಗಿ ಬಹಳ ಋಣಿಯಾಗಿದ್ದೇನೆ. ಈ ಗುಹೆಯಲ್ಲಿ ಅಡಿಗೆ ಮಾಡುವ ಸಾಧನಗಳೂ ಇಲ್ಲ, ಸಾಮಾಗ್ರಿಗಳೂ ಇಲ್ಲ. ಆಹಾರ ಎಲ್ಲಿಂದ ಒದಗುತ್ತದೆ.?"

"ಮಗೂ, ಅಡುಗೆ ಮಾಡುವ ಗೊಡವೆ ನಮಗಿಲ್ಲ. ನಾನು ಆಹಾರವಿಲ್ಲದೆ ಬಹುಕಾಲ ಇರಬಲ್ಲೆ. ನಮ್ಮ ಶಿವ ತಮ್ಮ ಆಹಾರಕ್ಕಾಗಿ ವಾರಕ್ಕೆ ಒಂದೆರಡು ಸಾರಿ ಅಕ್ಕಪಕ್ಕದ ಹಳ್ಳಿಗಳಿಗೆ ಹೋಗಿ ಭಿಕ್ಷಾನ್ನವನ್ನೂ, ಹಣ್ಣು ಹಂಪಲುಗಳನ್ನೂ ಯಾಚಿಸಿತರುತ್ತಾನೆ."

"ಬಹುಕಾಲ ಆಹಾರವಿಲ್ಲದೆ ಇರಬಹುದೆಂದು ತಾವು ಅಪ್ಪಣೆಕೊಡಿಸಿದಿರಿ. ಆಹಾರವಿಲ್ಲದೆ ಹೇಗೆ ಬದುಕಿರಲು ಸಾಧ್ಯ?"

"ಯೋಗಸಿದ್ಧಿಯನ್ನು ಪಡೆದವರು ಯೋಗಬಲದಿಂದ ಶರೀರಕ್ಕೆ ಅವಶ್ಯಕವಾದ ಪೋಷಕ ದ್ರವ್ಯವನ್ನು ಅನಿಲ ಮಂಡಲದಿಂದ ಹೀರಬಲ್ಲರು. ಆ ಶಕ್ತಿ ನನಗಿದ್ದುದರಿಂದಲೇ ಆಹಾರವಿಲ್ಲದೆ ಈ ಗಿರಿಯ ತುದಿಯಲ್ಲಿ ಜೀವಿಸಲು ಸಾಧ್ಯ."

"ಪೂಜ್ಯರೇ, ನಾನು ಕೆಲವು ಪ್ರಶ್ನೆಗಳನ್ನು ಕೇಳಬಹುದೇ?"

"ಅಭ್ಯಂತರವಿಲ್ಲ ಮಗೂ, ಕೇಳಬಹುದು?"

"ಯೋಗ ಸಿದ್ಧಿಗೆ ಬ್ರಹ್ಮಚರ್ಯ ಅವಶ್ಯಕವೆ?"

"ಬ್ರಹ್ಮಚರ್ಯೆಯನ್ನು ಪಾಲಿಸದಿದ್ದವರು ಯೋಗಿಗಳಾಗಲಾರರು. ಜಗತ್ತಿನಲ್ಲಿ ಮಹತ್ಕಾರ್ಯಗಳನ್ನು ಸಾಧಿಸಬೇಕೆಂದಿರುವವರು ಬ್ರಹ್ಮಚರ್ಯೆಯಿಂದಿರಬೇಕು. ಆದರೆ ಮಾನವರ ಹುಟ್ಟು ಪ್ರವೃತ್ತಿಯಲ್ಲಿ ಒಂದಾದ ಕಾಮ ಪ್ರವೃತ್ತಿಯನ್ನು ಗೆಲ್ಲವುದು ಅಷ್ಟು ಸುಲಭವಲ್ಲ. ಒಮ್ಮೊಮ್ಮೆ ಯೋಗಿಗಳೂ ಕೂಡ ಅದನ್ನು ಗೆಲ್ಲಲಾರದೆ ಯೋಗ ಭ್ರಷ್ಟರಾಗುತ್ತಾರೆ.

"ದೇವರಿರುವುದು ನಿಜವೇ? ಅವನು ಮಾನವರ ಬೇಡಿಕೆಗಳನ್ನು ಈಡೇರಿಸುವುದು ನಿಜವೇ?"

"ದೇವರ ಇರುವಿಕೆಯಲ್ಲೇ ಸಂಶಯಪಡುವ ನೀನು, ಯೋಗಿಯಾಗಲು ಹೊರಟಿರುವೆ! ಕಣ್ಣಿದ್ದವರು, ಬುದ್ಧಿಯಿದ್ದವರು ದೇವರ ಲೀಲೆಯನ್ನು ಅನುದಿನವೂ ನೋಡುತ್ತಾರೆ. ಅನುದಿನದ ಬಾಳಿನ ಅನುಭವಗಳಲ್ಲಿ, ಪ್ರಕೃತಿ ಸೌಂದರ್ಯದ ರಮಣೀಯತೆಯಲ್ಲಿ, ಸುಶ್ರಾವ್ಯ ಸಂಗೀತದ ಮಾಧುರ್ಯದಲ್ಲಿ, ಕಾರ್ಮೋಡಗಳ ಮಧ್ಯೆ ಸುಳಿಯುವ ಕೋಲ್ಮಿಂಚಿನಲ್ಲಿ, ಮುಗ್ಧ ಎಳೆ ಮಕ್ಕಳ ಕಿರುನಗೆಯಲ್ಲಿ ಶ್ರೇಷ್ಠ ಕಲಾವಿದರ ಕಲಾಕೃತಿಗಳಲ್ಲಿ, ದೈವೀ ಶಕ್ತಿಯ ಕೈವಾಡ, ಚೆಲ್ಲಾಟಗಳನ್ನು ಪ್ರತಿದಿವೂ ನೋಡಬಹುದು. ದೇವರು ಮಾನವರ ಬೇಡಿಕೆಗಳನ್ನು ಈಡೇರಿಸುವುದು, ಬೇಡುವವರ ಅರ್ಹತೆ ಮತ್ತು ಬೇಡಿಕೆಯ ಸ್ವರೂಪವನ್ನು ಅವಲಂಬಿಸಿರುತ್ತದೆ. ದೇವರು ನಾವು ಕೇಳುವುದೆಲ್ಲವನ್ನೂ ಕೊಡುವ ಕೈಗೊಂಬೆಯಲ್ಲ. ವಿವಿಧ ರೀತಿಯ ಜನರು ವಿವಿಧ ರೀತಿಯ ಬೇಡಿಕೆಗಳನ್ನು ದೇವರಲ್ಲಿ ಸಲ್ಲಿಸುತ್ತಾರೆ. ಜೂಜಾಡುವವರು ಜೂಜಿನಲ್ಲಿ ಗೆಲ್ಲಬೇಕೆಂದು ಪ್ರಾರ್ಥಿಸುತ್ತಾರೆ. ಲಂಚಕೋರರು ಲಂಚದ ವರಮಾನ ಹೆಚ್ಚಬೇಕೆಂದು ಪೂಜಿಸುತ್ತಾರೆ. ಕಾಳಸಂತೆಯವರು ಆಗರ್ಭ ಶ್ರೀಮಂತರಾಗಬೇಕೆಂದು ಆರಾಧಿಸುತ್ತಾರೆ. ಕೊಲೆ, ಕಳ್ಳತನ ಇತ್ಯಾದಿಗಳಲ್ಲಿ ತೊಡಗಿರುವವರು ಪೋಲಿಸರ ಕೈಗೆ ಸಿಕ್ಕಬಾರದೆಂದು ಭಗವಂತನಲ್ಲಿ ಮೊರೆಯಿಡುತ್ತಾರೆ."

"ಭಾರತೀಯರು ಪಾರಮಾರ್ಥಿಕ ವಿಷಯಗಳಲ್ಲಿ ಆಸಕ್ತಿಯುಳ್ಳವರೆಂದೂ ಪಾಶ್ಚಿಮಾತ್ಯರು ಲೌಕಿಕ ವಿಷಯಗಳ ಗುಲಾಮರೆಂದೂ ನಮ್ಮಲ್ಲಿ ಕೆಲವರು ಹೇಳುತ್ತಾರೆ. ಅದು ನಿಜವೇ?"

"ನಮ್ಮ ಜನರು ಪಾಶ್ಚಿಮಾತ್ಯರಷ್ಟೇ ಐಹಿಕ ಸುಖಗಳಿಗೆ ಆಸೆಪಡುತ್ತಾರೆ. ನಾವು ರಷ್ಯ ಅಥವಾ ಅಮೆರಿಕಾ ದೇಶಗಳ ಜನರಿಗಿಂತ ಹೆಚ್ಚು ಸುಸಂಸ್ಕೃತರೂ ಅಲ್ಲ; ಹೆಚ್ಚು ಸತ್ಯವಂತರೂ ಅಲ್ಲ. ಎಲ್ಲೋ ಕೆಲವರು ಮಹಾಪುರುಷರನ್ನು ಗಮನದಲ್ಲಿಟ್ಟುಕೊಂಡು, ಭಾರತೀಯರೆಲ್ಲಾ ಆತ್ಮಜ್ಞಾನದಲ್ಲಿ ಆಸಕ್ತಿಯುಳ್ಳವರೆಂದು ವಾದಿಸುವುದು ಸರಿಯಲ್ಲ. ನಮ್ಮಲ್ಲಿ ಕೆಲವರು ಇಮ್ಮಂಡೆ ಹಾವುಗಳಿದ್ದಂತೆ ಮಾತಿನಲ್ಲಿ ವೇದಾಂತ; ಕೃತಿಯಲ್ಲಿ ಕುತಂತ್ರ. ಅಪರಿಮಿತ ಆದರ್ಶ; ಅಪರೂಪದ ಅನುಷ್ಠಾನ. ಟನ್ನುಗಳ ಲೆಖ್ಖದಲ್ಲಿ ತತ್ವಗಳ ಪ್ರತಿಪಾದನೆ; ಗ್ರಾಮುಗಳ ಲೆಖ್ಖದಲ್ಲಿ ಅವುಗಳ ಪರಿಪಾಲನೆ. ಒಣವೇದಾಂತಗಳನ್ನು ಹೇಳಿಕೊಂಡು, ಸುಳ್ಳು ಸಟೆಗಳಲ್ಲಿ, ಮೋಸ ವಂಚನೆಗಳಲ್ಲಿ ನಿರತರಾಗಿರುವುದಕ್ಕಿಂತ ವೇದಾಂತದ ಸೊಲ್ಲೆತ್ತದಿರುವುದೇ ಮೇಲು. ನಮ್ಮಲ್ಲಿ ವ್ಯಕ್ತಿಯ ಅರ್ಹತೆ ಅವನ ಗುಣಗಳನ್ನುವಲಂಬಿಸಿರುವುದಿಲ್ಲ; ಅವನ ಜಾತಿಯನ್ನುವಲಂಬಿಸಿರುತ್ತದೆ."

"ಪೂಜ್ಯರೇ, ನನಗೆ ತಮ್ಮ ಅಂತಿಮ ಉಪದೇಶವೇನು?"

"ವತ್ಸಾ, ನೀನೊಬ್ಬ ಮಹಾನಾಯಕನಾಗುವ ಯೋಗವಿದೆ. ರಾಷ್ಟ್ರದ ಹಿತಕ್ಕಾಗಿ, ದೀನದಲಿತರ ಉದ್ಧಾರಕ್ಕಾಗಿ, ನೀನು ದುಡಿಯಬೇಕೆಂಬುದೇ ನನ್ನ ಉಪದೇಶ. ಭಗವಂತನನ್ನು ಅನನ್ಯ ಭಕ್ತಿಯಿಂದ ಪೂಜಿಸು. ಕಷ್ಟದಲ್ಲಿರುವವರ ಕಷ್ಟವನ್ನು ಪರಿಹರಿಸು. ಇದಕ್ಕಿಂತ ಹೆಚ್ಚಿನ ತಪಸ್ಸಿಲ್ಲ."

ಇವೇ ಮುಂತಾದ ಪ್ರಶ್ನೆಗಳಿಂದ, ಜಯಸಿಂಹನು ತನ್ನ ಸಂಶಯ ನಿವಾರಣೆ ಮಾಡಿಕೊಳ್ಳುತ್ತಿದ್ದನು. ಸಂಜೆ ಆಹ್ಲಾದಕರವಾಗಿತ್ತು. ಪಕ್ಕದಲ್ಲಿದ್ದ ಉನ್ಮಾದಿನಿ ಜಲಪಾತವು ಸ್ವರ್ಗ ಸೌಂದರ್ಯವನ್ನು ಮೀರಿಸುವಂತಿತ್ತು. ಹಕ್ಕಿಗಳು ಹಾಡುತ್ತಾ, ಹಾರಾಡುತ್ತಿದ್ದುವು. ಪುಷ್ಪರಾಗವನ್ನು ಹೊತ್ತ ತಂಗಾಳಿ ಹಿತಕರವಾಗಿ ಬೀಸುತ್ತಿತ್ತು. ಅಮಿತಾನಂದರ ದಿವ್ಯ ಸಾನ್ನಿಧ್ಯದಿಂದ ಲಭಿಸಿದ್ದ ಆನಂದದ ಜೊಂಪು, ಹಕ್ಕಿಗಳ ಮಧುರಗಾನದ ಇಂಪು, ಜಲಪಾತದ ಸೊಬಗಿನ ಸೊಂಪು, ತಂಗಾಳಿಯ ತಂಪು, ಇವುಗಳಿಂದ ಜಯಸಿಂಹನು ಭಾವಪರವಶನಾಗಿದ್ದನು. ಸನ್ನಿವೇಶವು ಅದಾವುದೋ ಸುಪ್ತ ಭಾವದ ಗುಪ್ತ ಸವಿನೆನಪನ್ನು ತರುವಂತಿತ್ತು. ಆರಂಭದಲ್ಲಿ ನಮ್ಮ ಕಣ್ಮುಂದೆ ಸುಳಿದು, ಹೊಳೆದು ಹೋಗಿದ್ದ ದೃಶ್ಯ ಇದೇ ಅಲ್ಲವೇ?

* * * *

## ೧೩. ಷಷ್ಠ್ಯಬ್ದಪೂರ್ತಿ ಶಾಂತಿ

ಇತ್ತ ಹೇಮಾವತಿ ರಾಜ್ಯದಲ್ಲಿ ಶಂಭುವಿಗೆ ಆಗಲೇ ಅರುವತ್ತೈದು ವರ್ಷಗಳು ದಾಟಿದ್ದರೂ ಅವನ ಭಕ್ತರೂ ಅವನ ಷಷ್ಠ್ಯಬ್ದಪೂರ್ತಿ ಶಾಂತಿಯನ್ನು ವಿಜೃಂಭಣೆಯಿಂದ ಮಾಡುವ ಸನ್ನಾಹದಲ್ಲಿದ್ದರು. ಆ ಬಗ್ಗೆ ಎಲ್ಲಾ ಜಿಲ್ಲೆಗಳ ಪ್ರತಿನಿಧಿಗಳನ್ನೊಳಗೊಂಡ ಸನ್ಮಾನ ಸಮಿತಿಯೊಂದು ಮುಖ್ಯಮಂತ್ರಿ ದಾಮೋದರನ ಅಧ್ಯಕ್ಷತೆಯಲ್ಲಿ ಏರ್ಪಟ್ಟಿತ್ತು. ಸಮಾರಂಭದ ಅಂಗವಾಗಿ, ಶಂಭುವಿಗೆ ಅರುವತ್ತು ಸಾವಿರ ರೂಪಾಯಿಗಳ ನಿಧಿಯನ್ನು ಅರ್ಪಿಸಬೇಕೆಂದೂ, ಅವನ ಜಿಲ್ಲೆಯಲ್ಲಿ ಅವನ ಹೆಸರಿನಲ್ಲಿ ವಿಶ್ವವಿದ್ಯಾನಿಲಯವೊಂದನ್ನು ಸ್ಥಾಪಿಸಲಿಕ್ಕಾಗಿ ಅರವತ್ತು ಲಕ್ಷ ರೂಪಾಯಿಗಳನ್ನು ಸಂಗ್ರಹಿಸಬೇಕೆಂದೂ, ಒಂದು ಸ್ಮಾರಕ ಗ್ರಂಥವನ್ನು ಪ್ರಕಟಿಸಬೇಕೆಂದು ಸನ್ಮಾನ ಸಮಿತಿಯಲ್ಲಿ ತೀರ್ಮಾನವಾಗಿದ್ದಿತು. ಸನ್ಮಾನ ಸಮಿತಿಯವರೂ ಶಂಭುವಿನ ಬಂಧು ಬಾಂಧವರೂ, ನಿಧಿ ಸಂಗ್ರಹಕ್ಕಾಗಿ ರಾಜ್ಯದಾದ್ಯಂತ ಹೊರಟಿದ್ದರು. ದಾಮೋದರನ ಆದೇಶದಂತೆ ಸರ್ಕಾರಿ ಅಧಿಕಾರಿಗಳು ಸರ್ಕಾರದ ಹಂಗಿಗೊಳಗಾಗಿದ್ದ ಕಂಟ್ರಾಕ್ಟ್, ಲೈಸನ್ಸ್, ಪರ್ಮಿಟ್ ಮುಂತಾದ ಸವಲತ್ತುಗಳನ್ನು ಪಡೆದವರಿಂದಲೂ, ಕೈಗಾರಿಕಾ ಸಂಸ್ಥೆಗಳಿಂದಲೂ, ವ್ಯಾಪಾರಿಗಳಿಂದಲೂ ಹಣವನ್ನು ಸಂಗ್ರಹಿಸುತ್ತಿದ್ದರು. ಅಧಿಕಾರಿಗಳ ಬಳಿ ಸಣ್ಣ ಪುಟ್ಟ ಕೆಲಸಗಳಿಗಾಗಿ ಬರುತ್ತಿದ್ದ ಬಡಬಗ್ಗರ ರಿಂದಲೂ ಸಹ ನಿಧಿಯನ್ನು ವಸೂಲು ಮಾಡುತ್ತಿದ್ದರು.

ಸಮಾರಂಭದ ದಿನ ರಾಜಧಾನಿಯಲ್ಲಿಯೂ, ಜಿಲ್ಲಾ ಮತ್ತು ತಾಲ್ಲೂಕುಗಳ ಕೇಂದ್ರ ಪಟ್ಟಣಗಳಲ್ಲೂ ಶಂಭುವಿನ ಅರುವತ್ತನೇ ವರ್ಷದ ಜನ್ಮದಿನೋತ್ಸವವನ್ನು ಆಚರಿಸಬೇಕೆಂದು ತೀರ್ಮಾನವಾಗಿದ್ದಿತು. ಅಲ್ಲದೆ ಆ ದಿನ ಅವನನ್ನು ಆನೆಯ ಮೇಲೆ ಕುಳ್ಳಿರಿಸಿ, ರಾಜಧಾನಿಯ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಮಾಡಿಸಿ, ಪುರಭವನದಲ್ಲಿ ಮಾನ ಪತ್ರಗಳನ್ನು ಅರ್ಪಿಸಿ, ಆ ನಂತರ ಅರುವತ್ತು ಸಾವಿರ ರೂಪಾಯಿಗಳ ನಿಧಿಯನ್ನು ಅವನಿಗೆ ಕೊಡಬೇಕೆಂದು ಸನ್ಮಾನ ಸಮಿತಿಯಲ್ಲಿ ನಿರ್ಧಾರವಾಗಿತ್ತು.

ನಿಧಿ ಸಂಗ್ರಹದ ಕಾರ್ಯ ನಿರೀಕ್ಷಿಸಿದ ಗತಿಯಲ್ಲಿ ಸಾಗಿತ್ತು. ಶಂಭುವಿನ ಮತ್ತು ಸರ್ಕಾರದ ಕೃಪಾ ಕಟಾಕ್ಷಕ್ಕೆ ಪಾತ್ರರಾಗಲು ಕಾತುರರಾಗಿದ್ದ ಲಾಭ ಬಡುಕರು ನಿಧಿಗೆ ವಿಶೇಷ ರೀತಿಯಲ್ಲಿ ಹಣವನ್ನು ನೀಡಿದ್ದರು. ಅಧಿಕಾರಿಗಳ ಅಥವಾ ಶಂಭುವಿನ ಭಕ್ತರ ಆಗ್ರಹಕ್ಕೆ ಪಾತ್ರರಾಗಲು ಅಂಜುತ್ತಿದ್ದವರು, ಒತ್ತಾಯ ಬಲಾತ್ಕಾರಗಳಿಗೆ ಮಣಿದು, ನಿರ್ವಾಹವಿಲ್ಲದೆ ನಿಧಿಗಾಗಿ ಹಣವನ್ನು ಕೊಟ್ಟಿದರು. ಕೆಲವರು ಅಧಿಕಾರಿಗಳೂ, ಕೆಲವರು ಶಂಭುವಿನ ಬಂಧು ಬಾಂಧವರೂ, ನಿಧಿಯನ್ನು ಸಂಗ್ರಹಿಸುವ ನೆಪದಲ್ಲಿ ನಿಧಿಗೆ

ಹೋಗಬೇಕಾಗಿದ್ದ ಹಣದಲ್ಲಿ ಕೆಲವು ಭಾಗವನ್ನು ಗುಪ್ತವಾಗಿ ತಮ್ಮ ಸ್ವಂತ ಬೊಕ್ಕಸಕ್ಕೆ ಸೇರಿಸಿದ್ದರು.

* * * *

ಮರುದಿನ ವರ್ಧಂತಿ ಸಮಾರಂಭ ಜರುಗಬೇಕಾಗಿತ್ತು. ನಿಧಿ ಸಂಗ್ರಹದ ಕೆಲಸ ಮುಗಿದಿತ್ತು. ಸ್ಮಾರಕ ಗ್ರಂಥದ ರಚನೆಯೂ ಪೂರೈಸಿತ್ತು. ಸಂಭ್ರಮದ ಸಿದ್ಧತೆಗಳು ನಡೆಯುತ್ತಿದ್ದುವು. ಶಂಭುವಿನ ಹೆಬ್ಬುಬ್ಬೆ ಹೇಳತೀರದು. ಭ್ರಮರಳ ಬಡಿವಾರ ವರ್ಣಿಸ ತೀರದು. ಶಂಭು ಬಿಡುವಿಲ್ಲದ ಕೆಲಸ ಕಾರ್ಯಗಳಲ್ಲಿ ತೊಡಗಿದ್ದನು. ಅವನನ್ನು ಅಭಿನಂದಿಸಿ ನೂರಾರು ಕಾಗದಗಳೂ, ತಂತಿಗಳೂ ಬರುತ್ತಿದ್ದುವು. ಜೊತೆಗೆ ಅವನನ್ನು ಅಭಿನಂದಿಸಲು ಬರುತ್ತಿದ್ದ ಭಕ್ತವೃಂದಕ್ಕೆ ದರ್ಶನ ನೀಡಬೇಕಾಗಿತ್ತು.

ಕೆಲವು ತಿಂಗಳ ಹಿಂದೆ, ಶಂಭುವಿನ ಮತ್ತು ಭ್ರಮರಳ ಅಂತರಂಗ ವ್ಯವಹಾರ ಶಂಭುವಿನ ಹೆಂಡತಿಗೆ ಹೇಗೋ ಗೊತ್ತಾಗಿತ್ತು. ಶಂಭುವಿನ ಹೆಂಡತಿ ದಿಂಡೆ ಬಜಾರಿಯೂ ಹೌದು; ಗಂಡುಬೀರಿಯೂ ಹೌದು. ಶಂಭುವಿನ ಮತ್ತು ಭ್ರಮರಳ ಸ್ನೇಹ ಅವಳಿಗೆ ಗೊತ್ತಾದನಂತರ, ಭ್ರಮರಳನ್ನು ಕೆಲಸದಿಂದ ತೆಗೆದು ಹಾಕಬೇಕೆಂದು ತನ್ನ ಗಂಡನಿಗೆ ಒತ್ತಾಯ ಮಾಡಿದಳು. ಆದರೆ ಆ ಗಂಡುಬೀರಿಯ ಗಂಡ, ಶಂಭು ಅವಳ ಒತ್ತಾಯಕ್ಕೆ ಮಣಿಯಲಿಲ್ಲ. ಆದ್ದರಿಂದ ಅವಳು ಭ್ರಮರಳ ಮೇಲೆ ತನ್ನ ಸೇಡನ್ನು ತೀರಿಸಿಕೊಳ್ಳಲು, ಸೂಕ್ತ ಸಮಯಕ್ಕಾಗಿ ಕಾಯುತ್ತಿದ್ದಳು. ಒಂದು ದಿನ ಶಂಭು ಮನೆಯಲ್ಲಿಲ್ಲದ ವೇಳೆಯಲ್ಲಿ, ಅವನನ್ನು ಕಾಣುವ ಸಲುವಾಗಿ ಭ್ರಮರ ಅವನ ಮನೆಗೆ ಹೋಗಿದ್ದಳು. ಶಂಭುವಿನ ಹೆಂಡತಿ ಭ್ರಮರಳ ಜುಟ್ಟನ್ನು ಹಿಡಿದು, "ಮು....ರಂ......ಹ......ಬೆ......ಹಾ.....ಗಿತ್ತಿ" ಮುಂತಾಗಿ ಬಾಯಿಗೆ ಬಂದಂತೆ ಬೈದು, ಕಸಗುಡಿಸುವ ಬರಲಿನಿಂದ, ಅವಳನ್ನು ಚೆನ್ನಾಗಿ ಥಳಸಿದಳು.

ಮರುದಿನ ಶಂಭು ಊರಿಗೆ ಬಂದನಂತರ, ಭ್ರಮರ ಅವನಿಗೆ ದೂರು ಹೇಳಿದಳು. ಪಾಪ! ಶಂಭು ಏನು ಮಾಡಿಯಾನು? ಅವನು ದುಷ್ಟನಾಗಿದ್ದರೂ ಬ್ರಹ್ಮರಾಕ್ಷಸಿಯಂತಿದ್ದ ಅವನ ಹೆಂಡತಿಯ ಮುಂದೆ ಅವನ ಆಟ ಏನೂ ನಡೆಯುತ್ತಿರಲಿಲ್ಲ. ಆದ್ದರಿಂದ, "ಇನ್ನು ಮೇಲೆ ನೀನು ನಮ್ಮ ಮನೆಗೆ ಬರಬೇಡ. ನನ್ನ ಆಫೀಸಿನಲ್ಲೇ ನನ್ನನ್ನು ನೋಡಬಹುದು," ಎಂದು ಭ್ರಮರಳಿಗೆ ಸೂಚಿಸಿದನು. ಆ ಲಾಗಾಯ್ತು ಭ್ರಮರ ಸಚಿವಾಲಯದ್ದಲ್ಲಿದ್ದ ಶಂಭುವಿನ ಆಫೀಸಿನಲ್ಲಿಯೇ ಮನಸ್ಸಿಗೆ ತೋಚಿದ ಕೆಲಸಗಳನ್ನು ಮಾಡುತ್ತಿದ್ದಳು. ಅವಳ ಮೇಲೆ ಯಾರ ಹತೋಟಿಯೂ ಇರಲಿಲ್ಲ. ಮೊದಲು ಶಂಭು ಸಚಿವಾಲಯಕ್ಕೆ ಹೋಗುವ ಪದ್ಧತಿಯನ್ನೇ ಇಟ್ಟುಕೊಂಡಿರಲಿಲ್ಲ. ಆದರೆ ಈಚೆಗೆ ಭ್ರಮರಳಿಗಾಗಿ ವಾರಕ್ಕೆ ಎರಡು ಮೂರು ಸಾರಿ ಅಲ್ಲಿಗೆ ಹೋಗುತ್ತಿದ್ದನು.

ಮರುದಿನ, ನಾಗರಿಕರ ಪರವಾಗಿ ಶಂಭುವಿಗೆ ಅರ್ಪಿಸಲಿದ್ದ ಮಾನ ಪತ್ರಕ್ಕೆ ಉತ್ತರ ರೂಪದಲ್ಲಿ ಅವನೊಂದು ಭಾಷಣ ಮಾಡಬೇಕಾಗಿತ್ತು. ಭ್ರಮರ ಶಂಭುವಿಗಾಗಿ ಒಂದು ಭಾಷಣವನ್ನು ಬರೆದು ಸಿದ್ಧಗೊಳಿಸಿದ್ದಳು. ಅವಳು ಸಿದ್ಧಗೊಳಿಸಿದ್ದ ಆ ಭಾಷಣವನ್ನು ಶಂಭು ಒಪ್ಪಿ ಅನುಮೋದಿಸಬೇಕಾಗಿತ್ತು. ಅವಳು ಬರೆದಿದ್ದ ಭಾಷಣವನ್ನು

ನೋಡಲು ಸಂಜೆ ಆರು ಗಂಟೆಗೆ ತನ್ನ ಆಫೀಸಿಗೆ ಬರುವುದಾಗಿ ಶಂಭು ಫೋನ್ ಮಾಡಿದ್ದನು. ಉದ್ದೇಶ ಪೂರ್ವಕವಾಗಿಯೇ ಅವನು ಸಂಜೆ ಆರು ಗಂಟೆಗೆ ಬರುವುದಾಗಿ ತಿಳಿಸಿದ್ದನು. ಸಚಿವಾಲಯದ ಕಛೇರಿಗಳೆಲ್ಲವೂ ಮುಚ್ಚಿದನಂತರ ಜನರ್‍ಯಾರೂ ಅಲ್ಲಿರುವುದಿಲ್ಲವಾದ್ದರಿಂದ, ಭಾಷಣದ ಪ್ರತಿಯನ್ನು ನೋಡುವುದಾಗಿ ಜೊತೆಗೆ ಭ್ರಮರಳೊಡನೆ ಸರಸ ಸಲ್ಲಾಪಗಳನ್ನು ಸಾಗಿಸಬಹುದೆಂದು ಅವನ ಉದ್ದೇಶವಾಗಿತ್ತು.

ಸಂಜೆ ಆರೂವರೆ ಗಂಟೆಯಾಗಿದ್ದರೂ ಶಂಭು ಆಫೀಸಿಗೆ ಬಂದಿರಲಿಲ್ಲ. ಭ್ರಮರ ಅವನ ಆಗಮನಕ್ಕಾಗಿ, ಅವನ ಏಕಾಂತ ಕೊಠಡಿಯಲ್ಲಿ ಕಾಯುತ್ತಿದ್ದಳು. ಕಛೇರಿಯ ದ್ವಾರಪಾಲಕ ಹರಿ ಮುಂದುಗಡೆ ಬಾಗಿಲ ಪಕ್ಕದಲ್ಲಿ ಕುಳಿತು, ಸಾಹೇಬರ ಆಗಮನವನ್ನು ನಿರೀಕ್ಷಿಸುತ್ತಿದ್ದನು. ಹರಿ ಇಪ್ಪತ್ತು ವರ್ಷಗಳ ಹಿಂದೆ ಸಚಿವಾಲಯದಲ್ಲಿ ಜವಾನನಾಗಿ ಕೆಲಸಕ್ಕೆ ಸೇರಿದ್ದವನು. ಅವನು ರಾಜಧಾನಿಗೆ ಐವತ್ತು ಮೈಲಿಗಳ ದೂರದಲ್ಲಿ ಹಳ್ಳಿಯೊಂದರಲ್ಲಿ ಹುಟ್ಟಿದವನು.

ಹರಿಯು ಇಪ್ಪತ್ತು ವರ್ಷಗಳ ಕಾಲ ಸಚಿವಾಲಯದಲ್ಲಿ ಕೆಲಸಮಾಡಿ, ಹಲವರು ಮಂತ್ರಿಗಳು ಮತ್ತು ಅಧಿಕಾರಿಗಳ ಇತಿಹಾಸವನ್ನು ಅರಿತುಕೊಂಡಿದ್ದವನು. ನಿರಂಜನದಾಸರು ಮತ್ತು ದುರ್ಗಾದಾಸರಂತಹ ಸತ್ಯಸಂಧರ ಸ್ವಚ್ಛ ಆಳ್ವಿಕೆಯನ್ನೂ ನೋಡಿದ್ದನು; ದಿಲೀಪ್‌ಚಂದ್ರನಂತಹ ಮತ್ತು ದಾಮೋದರನಂತಹ ಸ್ವಾರ್ಥ ಸಾಧಕರ ದುರಾಡಳಿತವನ್ನೂ ಕಂಡಿದ್ದನು. ಅವನು ಬಡವನಾಗಿದ್ದರೂ, ಆತ್ಮ ಗೌರವದಲ್ಲಾಗಲಿ, ಸತ್ಯಸಂಧತೆಯಲ್ಲಾಗಲಿ ಬಡವನಾಗಿರಲಿಲ್ಲ. ಪದವೀಧರನಾಗಿಲ್ಲದಿದ್ದರೂ, ರಾಜ್ಯದ ರಾಜಕಾರಣವನ್ನು ಸೂಕ್ಷ್ಮವಾಗಿ ಗ್ರಹಿಸಿದ್ದನು.

ಸರ್ಕಾರದವರು ಕೊಡುತ್ತಿದ್ದ ಸಂಬಳವು ಹರಿಗೆ ಏನೇನೂ ಸಾಕಾಗುತ್ತಿರಲಿಲ್ಲ. ಸಾಲದುದಕ್ಕೆ ಮನೆ ತುಂಬ ಮಕ್ಕಳು. ಮಡದಿ ಜಗಳಗಂಟಿ. ಅವಳಿಗೆ ಬೇಕಾಗಿದ್ದುದು ಹರಿಯ ಸತ್ಯಸಂಧತೆಯಲ್ಲ; ಅವನ ದುಡ್ಡು. ಜೀವನೋಪಾಯಕ್ಕಾಗಿ ಹರಿಯು ಎರಡು ಎಮ್ಮೆಗಳನ್ನು ಕಟ್ಟಿಕೊಂಡು ಹಾಲನ್ನು ಮಾರಿ, ಖರ್ಚುವೆಚ್ಚಗಳ ತಕ್ಕಡಿಯನ್ನು ಹಾಗೂ ಹೀಗೂ ಸರಿತೂಗಿಸುತ್ತಿದ್ದನು. ಇಷ್ಟೆಲ್ಲಾ ಕಷ್ಟಬಿದ್ದರೂ, ಹರಿ ಮಂತ್ರಿಗಳನ್ನು ನೋಡಲು ಬಂದ ಗೃಹಸ್ಥರಿಂದ ಎಂದೂ ಪುಡಿಗಾಸುಗಳನ್ನು ಯಾಚಿಸಿದವನಲ್ಲ. ಕೆಲವರು ಜಾಗ್ರತೆ ಮಂತ್ರಿಗಳ ಸಂದರ್ಶನವನ್ನು ಪಡೆಯುವ ತವಕದಿಂದ, ದ್ವಾರಪಾಲಕ ಹರಿಗೆ ಬಕ್ಷೀಸು ಕೊಡುವುದಾಗಿ ಆಸೆ ತೋರಿಸಿದಾಗ, ಹರಿ ಸಿಟ್ಟಿನಿಂದ "ಸ್ವಾಮೀ, ನಾನು ಬಡವ ಆದರೆ ಬಕ್ಷೀಸಿನ ಆಸೆಗಾಗಿ ನಿಯಮವನ್ನು ಮುರಿಯಲಾರೆ. ತಾವು ಈಗತಾನೇ ಬಂದಿದ್ದೀರಿ. ದಯವಿಟ್ಟು ಸ್ವಲ್ಪಕಾದಿರಿ. ಮೊದಲು ಬಂದವರು ಮೊದಲು ಹೋಗಬೇಕು. ಆ ನಂತರ ತಾವು," ಎಂದು ಕಟ್ಟು ನಿಟ್ಟಾಗಿ ಹೇಳಿ ಬಿಡುತ್ತಿದ್ದನು.

ಮಂತ್ರಿಗಳ ಮತ್ತು ಅಧಿಕಾರಿಗಳ ಇತ್ತೀಚಿನ ರೀತಿನೀತಿಗಳನ್ನು ನೋಡಿ ಹರಿಗೆ ಜುಗುಪ್ಸೆಯಾಗಿತ್ತು. ಆದರೂ ಬಹಿರಂಗವಾಗಿ ಯಾರನ್ನೂ ಟೀಕಿಸುತ್ತಿರಲಿಲ್ಲ. ಶಂಭುವಿನ ಕಾರುಭಾರುಗಳನ್ನು ಕಂಡು ಹರಿಯು ಬಹಳವಾಗಿ ದುಃಖಿಸುತ್ತಿದ್ದನು. ಆದರೆ ಶಂಭುವಿನ

ವಿಚಾರದಲ್ಲಿ ಯಾರೊಡನೆಯೂ ಏನನ್ನೂ ಹೇಳುತ್ತಿರಲಿಲ್ಲ. ಒಮ್ಮೊಮ್ಮೆ ತನ್ನ ಆತ್ಮೀಯ ಗೆಳೆಯನಾದ ಮುಖ್ಯಕಾರ್ಯದರ್ಶಿಯ ಕಛೇರಿಯ ದ್ವಾರಪಾಲಕನಾಗಿದ್ದ ನಾರಾಯಣ ನೊಡನೆ ತನ್ನ ದುಃಖವನ್ನು ತೋಡಿಕೊಳ್ಳುತ್ತಿದ್ದನು.

ಹರಿಯೂ ಮತ್ತು ನಾರಾಯಣ ಒಂದೇ ಸ್ವಭಾವದವರಾಗಿದ್ದುದರಿಂದ, ಇಬ್ಬರಲ್ಲಿಯೂ ಆತ್ಮೀಯತೆ ಬೆಳೆದಿತ್ತು. ಆ ದಿನ ನಾರಾಯಣನು ತನ್ನ ಕೆಲಸವನ್ನು ಮುಗಿಸಿಕೊಂಡು ಹರಿಯನ್ನು ನೋಡುವ ಸಲುವಾಗಿ ಶಂಭುವಿನ ಆಫೀಸಿನ ಬಳಿಗೆ ಬಂದಿದ್ದನು. ಆ ದಿನ ರಾತ್ರಿ ತನ್ನ ಮೊಮ್ಮಗನ ನಾಮಕರಣಕ್ಕೆ ಹರಿಯನ್ನು ಆಹ್ವಾನಿಸಲು ಅವನು ಅಲ್ಲಿಗೆ ಬಂದಿದ್ದನು. ಅಪರೂಪವಾಗಿ ಬಂದಿದ್ದ ಗೆಳೆಯನನ್ನು ಹರಿ ಆದರದಿಂದ ಬರಮಾಡಿಕೊಂಡು, ಪಕ್ಕದಲ್ಲಿ ಕುಳ್ಳರಿಸಿ, ಎಲೆ ಅಡಿಕೆಗಳನ್ನು ಕೊಟ್ಟು ಉಪಚರಿಸಿದನು.

"ಏನೋ ಹರೀ, ಇನ್ನೂ ನಿನ್ನಾಫೀಸು ಮುಗಿಲಿಲ್ಲೇನೊ.? ಯಾಕೋ ಇಷ್ಟೊತ್ತು?"

"ಎಲ್ಲಪ್ಪಾ ಮುಗೀತದೆ? ನಮ್ಮ ಸಾಹೇಬರು ಬತ್ತಾರೆ ಅಂತ, ಸ್ಟೆನೋ ಭ್ರಮರ ಒಳಗೆ ಕೂತವ್ಳೆ. ನಾನೂ ಕಾಯ್ತ ಬಿದ್ದೀವ್ನಿ. ಎಷ್ಟೊತ್ತಿಗೆ ಬತ್ತಾವ್ರೋ ಏನೋ?

"ನಿಮ್ಮ ಸಾಹೇಬ್ರಿಗೆ ನಾಳೆ ಅರವತ್ತು ವುರ್ಸದ ಸಾಂತಿಯಂತೆ. ಆನೆ ಮ್ಯಾಲೆ ಅವರನ್ನ ಮೆರವಣಿಗೀ ಮಾಡಿ, ಅರವತ್ತು ಸಾವ್ರ ರೂಪಾಯಿ ಪರ್ಸ್ ಕೊಡ್ತಾರಂತೆ! ಅದೃಷ್ಟ ಕಣಯ್ಯಾ."

"ನಾರಾಯಣಾ, ಯಾರಿಗೆ ಅದೃಷ್ಟಬಂದರೆ ನಂಗೇ ಬಂದದ್ದು ಏನಪ್ಪಾ?"

"ಅಲ್ಲೋ ಹರಿ, ಏನ್ಕಾಲ ಬಂತೋ ಪುಣ್ಯಾತ್ಮ! ನೀ ಬೇಜಾರ್ ಮಾಡ್ಬ್ಯಾಡ, ನಿಮ್ಮ ಸಾಹೇಬ್ರ ಇಚಾರ ಹೀಗೆ ಅಂತೀನಿ ಅಂತ. ಇಂತಾ ಮುಂಡೇಮಕ್ಳೆಲ್ಲಾ ಮಂತ್ರಿಗಳಾದ್ರೆ ಮಳೆ ಬೆಳೆ ಹ್ಯಾಂಗಾತದೋ? ನಿಮ್ಮ ಶಂಭು ಮಾಡ್ದೆ ಇದ್ದ ಅನಾಚಾರಾನೇ ಇಲ್ಲ. ಇಂತವ್ನ ವರ್ದಂತಿ ಮಾಡ್ತಾರಲ್ಲಯ್ಯಾ–ನಂಜನ–ಏನ್ ಹೇಳ್ಬೇಕು? ರಾಮ, ಕೃಷ್ಣ, ಬುದ್ಧ, ಗಾಂಧಿ ಇವರ ಜಯಂತಿ ಮಾಡ್ದಾಗೆ ಶಂಭು ಅಂತಹ ಘಟಂಗ್ರ ಜಯಂತೀನೂ ಮಾಡ್ತಾರಲ್ಲಯ್ಯಾ! ಸಾಕೋ ಪರಮಾತ್ಮ!"

"ನಾರಾಯಣ, ನಂಗೂ ಇದೆಲ್ಲಾ ನೋಡೀ ಸಾಕಾಗಿಹೊಗ್ಯದೆಯಪ್ಪಾ. ನಾನು ನೀನು ಏನ್ಮಾಡೂಕಾತದೆ. ಜನಾನೂ ಹಾಗೇ ಆಗ್ಯಾರೆ. ಈ ಕಾಲ್ದಾಗೆ ಸತ್ಯಕ್ಕೂ ಸುಳ್ಳೀಗೂ ಯತ್ಯಾಸನೇ ಕಾಣುದಿಲ್ಲ."

"ಜನ ಏನ್ ಮಾಡ್ತಾರೆ ಪಾಪ! ಅವರೂ ನಮ್ಹಾಗೇ ಕೊರ್ಗತ್ತಾರೆ. ಈ ವರ್ದಂತಿ ಮಾಡ್ಲೂಕೆ ಹೊಳ್ಟಾರಲ್ಲ, ಆ ಲಫಂಗರನ್ನು ಗಲ್ಲಿಗೆ ಹಾಕ್ಬೇಕು. ವರ್ದಂತೀಗೆ ಅಂತ ಇಂದು ಐದು ಸಾವ್ರ ಕೊಡ್ತಾರೆ; ನಾಳೆ ಹತ್ಸಾವ್ರ ಹೊಡೀತಾರೆ. ನಂಗೆ ನಿಂಗೆ ದುಡ್ಡೆಲ್ಲಿಂದ ತರ್ಬೇಕು ಅಂತ ಯೇಚ್ನೆ ಆದ್ರೆ, ಅವ್ರೀಗೆ ದುಡ್ಡು ಎಲ್ಲಿ ಇಡ್ಬೇಕು ಅಂತ ಯೇಚ್ನೆ. ನ್ಯಾಯ ಧರ್ಮ ಬಿಟ್ಟೋರೆಲ್ಲಾ ದೊಡ್ಡ ಮನುಸರಾದರು. ನಾನೂ ನೀನೂ ಜವಾನರಾಗೇಬಿದ್ದೀವಿ."

"ಹೋಗ್ಲಿ ಬಿಡು. ನಿಮ್ಹುಡುಗುಂದು ಈ ಸಾರಿ ಪ್ಯಾಸ್ ಆತೇನು?"

"ಇಲ್ಲ ಕಣಪ್ಪ. ಪೇಲಾಗಿ ಬಿಟ್ಟ."

"ಅದ್ಯಾಕೋ?"

"ಅಯ್ಯೋ, ಅದೇನು ಹೇಳಲಪ್ಪಾ! ಈಗಿನ ಕಾಲ್ದಾಗೆ ಈ ಹುಡುಗರೀಗೆ ಅದೇನು ಕೇಡ್ಗಾಲ ಬಂದದೋ ನಾಕಾಣೆ. ನಮ್ಮ ಹುಡ್ಗ ಸರಿಯಾಗಿದ್ದ ನೋಡು. ಈಚೀಗೆ ಯಾರೋ ದೊಡ್ಡವ್ರ ಮಕ್ಕಳಜೊತೆ ಸೇರ್ಕ್ಯಂಡು ಕುಡಿಯೋದು ಕಲ್ತಾನೆ. ನಾನೂ ಹೇಳಿ ಹೇಳಿ ಸಾಕಾತು. ಹದ್ದುಮಿೂರಿ ಹೋಗ್ಯಾನೆ. ಏನಾದರೂ ಸಾಯಿ ಅಂತ ಬಿಟ್ಟೀನಿ."

"ದೊಡ್ಡ ದೊಡ್ಡವರೇ ಕುಡೀತಿರಾಗ ಅವನ್ದೇನು ಮಹಾ ದೊಡ್ಡ ತಪ್ಪೋ? ಈ ಕಾಲ್ದಾಗೆ ಕುಡಿದು ಕುಣಿಯೂದೇ ವುಂದು ಚಂದ."

"ದೊಡ್ಡವರ ಹತ್ತಿರ ದುಡ್ಡದೆ,; ಕುಡೀತಾರೆ. ನಮ್ಗತಿ ಹೇಳು. ನಿನ್ನ ಮಗಂದು ಪ್ಯಾಸಾತೇನು?"

"ಅವನೂ ಪೇಲಾಗಿಬಿಟ್ನಪ್ಪ."

"ಅವ ಬ್ಹಾಳಾ ಚುರ್ಕಾಗಿ ಇದ್ನಲ್ಲಾ!"

"ನಮ್ಮ ಅದೃಷ್ಟ. ಈಗಿನ ಕಾಲ್ದಾಗೆ ಪೇಪರ್ ಚೆಕ್ ಮಾಡೋರು ಅವರೀಗೆ ಬೇಕಾದೋರಿಗೆ ನಂಬ್ರ ತುಂಬ್ತಾರೆ. ನಮ್ಮಂತೋರ್ನ ಯಾರ್ ಕೇಳ್ತಾರೆ? ಕೆಲೋರಂತೂ ಅವರ ಜಾತಿ ಹುಡುಗರು ಅಂತ ಗೊತ್ತಾದ್ರೆ ಸಾಕು, ಎಷ್ಟು ಬೇಕಾರ್ರು ನಂಬ್ರ ಕೊಡ್ತಾರೆ. ವುಂದುಂದು ಸಾರಿ ಅವಂದು ಇವನೀಗೆ ಹಾಕ್ತಾರೆ, ಇವಂದು ಅವನೀಗೆ ಹಾಕ್ತಾರೆ. ಇದರಗಡೆ ಕಾಲೇಜಿನ ಪ್ರಿನ್ಸಿಪಾಲ ಇದ್ದಾನೆ ನೋಡು, ಅವ ಜಾತಿ ನೋಡಿ ಮಾರ್ಕು ಕೊಡೋದು. ಹಿಂಗಾದ್ರೆ ಚಂದಾಗಿ ಓದ್ದೋರು ಪೇಲಾತಾರೆ, ಓದ್ದೇ ಇದ್ದೋರು ಪ್ಯಾಸಾತಾರೆ."

"ಅಷ್ಟು ದೂರ ಯಾಕಪ್ಪಾ ಹೋತಿಯಾ. ಹ್ವಾದ್ಕಾಲ ನಿಮ್ಮ ಸಾಹೇಬ್ರ ಮಗ ನಪಾಸಾಗಿದ್ದನಂತೆ. ನಿಮ್ ಸಾಹೇಬ್ರು ಶಿಪಾರಸ್ಸು ಮಾಡಿ ಮಗನ್ನ ಪ್ಯಾಸ್ ಮಾಡಸದ್ರಂತೆ. ಆ ಮ್ಯಾಲೆ ಆ ಹುಡುಗ್ಗೆ ಮೆಡಿಕಲ್ ಕಾಲೇಜಾಗೂ ಸೀಟು ಕೊಟ್ರಂತೆ. ನೋಡು ಹ್ಯಾಂಗಿದೆ! ಹೋಗ್ಲಿ ಬಿಡು. ನಿಮ್ಮ ಸಾಹೇಬ್ರೀಗೆ ಹೇಳಿ ನಮ್ಮ ಹುಡುಗನೀಗೆ ಏನಾದ್ರೂ ಒಂದು ಕೆಲಸ ಕೊಡಿಸ್ತೀಯೇನಯ್ಯಾ?"

"ಈಗೀಗ ನಮ್ಮ ಸಾಹೇಬ್ರು ನನ್ನ ಕಂಡ್ರೆ ಗುರ್ರಂತಾರೆ. ಆ ಭ್ರಮರಮ್ಮ ನನ್ನ ಮ್ಯಾಲೆ ಏನೋ ಚಾಡಿ ಚುಚ್ಚವ್ಳೆ ಅಂತ ಕಾಣಸ್ತದೆ.

"ನಿನ್ಮ್ಯಾಲೆ ಅವಳಿಗ್ಯಾಕೋ ಕ್ವಾಪಾ?"

"ಅಯ್ಯೋ..... ಅವಳ ಒಯ್ಯಾರ, ಅವಳ ಬಡಿವಾರ ಹೇಳೂಕೆ ತೀರದು ಕಣಪ್ಪಾ. ತಾನೇ ಮಂತ್ರಿ ಅಂತಾ ಮೆರೀತಾಳೆ. ಎಲ್ಲಾರಮ್ಯಾಲೂ ಸವಾರಿ ಮಾಡ್ತಾಳೆ. ನನ್ನ ಮ್ಯಾಲೂ ಒಂದಿನ ಬಿದ್ಲು. ನಾ ಬಿಟ್ಟೇನ? ಅವಳ ಮಕಕ್ಕೆ ಹೊಡೆದ್ಹಾಗೆ ಜವಾಬ್ ಕೊಟ್ಟೆ, ಆಮ್ಯಾಲೆ ಅವಳೀಗೆ ನನ್ನ ಮ್ಯಾಲೆ ಅಷ್ಟಗಷ್ಟೆ."

"ಎಂತಾ ಪೆದ್ದ ಕಣಯ್ಯಾ ನೀನು? ಅವಳು ನಿಮ್ಮ ಸಾಹೇಬ್ರು ಮ್ಯಾಲೇ ಸವಾರಿ ಮಾಡೋಳು, ನಿನ್ನ ಬಿಡ್ತಾಳೇನೋ?"

"ನಮ್ಮ ಪ್ರೈವೇಟ್ ಸೆಕೆಟ್ರಿ ಮ್ಯಾಲು ಹಾರ್‍ಯಾರಿ ಬೀಳ್ತಾಳೆ ಆಯಮ್ಮಾ."

ನಿಮ್ಮ ಪ್ರೈವೇಟ್ ಸೆಕ್ರೆಟ್ರೀಗೆ ಲಂಚ ತಿಂದು ತಿಂದು, ಕುತ್ಗಿ ತಿರ್‍ಗೋದೇ ಇಲ್ಲ. ಅವನೂ ಅವಳೂ ಲಂಚಕ್ಕೆ ಪೈಪೋಟಿ ನಡ್ಸ್ಯಾರೆ. ಅದಕ್ಕೆ ಅವರಿಬ್ರೀಗೂ ಆಗೂದಿಲ್ಲ. ಹಾ....ನಿಮ್ಮ ಸಾಹೇಬ್ರು ಬತ್ತವ್ರೆ. ನಾ ಹೋತೀನಿ. ರಾತ್ರೆ ಬಾ.... ಮತ್ತೆ ಮರೀ ಬ್ಯಾಡ."

ಮರುದಿನ, ಶಂಭುವಿನ ಅರುವತ್ತು ವರ್ಷದ ಹುಟ್ಟು ಹಬ್ಬವು ರಾಜ್ಯಾದ್ಯಂತ ಬಹಳ ವಿಜೃಂಭಣೆಯಿಂದ ನಡೆಯಿತು. ಮೊದಲೇ ಗೊತ್ತಾಗಿದ್ದಂತೆ ಅವನನ್ನು ರಾಜಧಾನಿಯಲ್ಲಿ ರಾಜಬೀದಿಗಳಲ್ಲಿ ಆನೆಯ ಮೇಲೆ ಮೆರವಣಿಗೆ ಮಾಡಿದರು. ಆ ನಂತರ ದಾಮೋದರರನ ಅಧ್ಯಕ್ಷತೆಯಲ್ಲಿ, ಪುರಭವನದಲ್ಲಿ ಸನ್ಮಾನ ಸಭೆ ನಡೆಯಿತು. ಸಭೆಗೆ ಶಂಭು ದಾಮೋದರರ ಭಕ್ತರೂ, ಸುಪ್ರಸಿದ್ಧ ಲಾಭಕೋರರೂ, ಹಲವರು ಪುಢಾರಿಗಳೂ ಆಗಮಿಸಿದ್ದರು. ಸನ್ಮಾನ ಸಮಿತಿಯವರು ಪರವಾಗಿ ಶಂಭುವಿಗೆ ಮಾನಪತ್ರವನ್ನು ಅರ್ಪಿಸಿ, ಅರುವತ್ತು ಸಾವಿರ ರೂಪಾಯಿಗಳ ನಿಧಿಯನ್ನು ಅರ್ಪಿಸಿದರು. ಆ ನಂತರ ಬಹಳ ಜನರು ಅವನ ಗುಣಗಾನ ಮಾಡಿದರು.

ಸನ್ಮಾನ ಸಭೆಯಲ್ಲಿ ಭಾಷಣ ಮಾಡಿದವರು. ಶಂಭು ಸತ್ಯಸಂಧನೆಂದೂ, ದಕ್ಷ ಆಡಳಿತಗಾರನೆಂದೂ, ದೇಶ ಪ್ರೇಮಿ ಎಂದೂ ಹೊಗಳಿದರು ಈ ಗುಣಗಾನವನ್ನು ಕೇಳುತ್ತಿದ್ದ ಸಭಿಕನೊಬ್ಬನು, ಸಭೆಯಲ್ಲಿ ತನ್ನ ಪಕ್ಕದಲ್ಲಿ ಕುಳಿತಿದ್ದ ಸ್ನೇಹಿತನನ್ನು ತಿವಿದು, "ಯಲಾ ಇವ್ನಾ! ಮನ್ನೆ ಮನ್ನೆ ನಾ ಇದೇ ಶಂಭೂಗೆ, ಮೈರಾವಣ ಕಂಪನಿ ಮ್ಯಾನೇಜರ್ ಮ್ಯಾಲೆ ಹಾಕದ ಕಟ್ಲೆ ಪರತ್ ತಗೋಳ್ಳೀಕೆ ಅಂತ, ಐದು ಸಾವ್ರ ರೂಪಾಯಿ ಲಂಚ ಕೊಟ್ಟೀನಿ. ಇಂತಾವ್ಗೆ ದೊಡ್ ಮನುಷ್ಯ, ಹರಿಶ್ಚಂದ್ರ ಅಂತ ಹೇಳ್ತಾರಲ್ಲಾ ಈ ಮಂದಿ!" ಎಂದನು.

ಶಂಭುಗೆ ರಗಡ ಮಂದಿ ಲಂಚ ಕೊಟ್ಟಾರೆ. ನೀವೊಬ್ಬನೇ ಏನು? ಇಲ್ಲೀತಂಕಾ ಒಂದ ಕೋಟಿ ಹತ್ತತ್ರರೊಕ್ಕ ಮಾಡ್ಯಾನ ಬಿಡಪ್ಪಾ," ಎಂದು ಅವನ ಸ್ನೇಹಿತ ನುಡಿದನು.

ದಾಮೋದರನು ತನ್ನ ಅಧ್ಯಕ್ಷ ಭಾಷಣದಲ್ಲಿ, ಶಂಭು ಹೇಮಾವತಿ ರಾಜ್ಯದ ಹೆಮ್ಮೆಯ ಪುತ್ರನೆಂದೂ, ಅವನ ಸಲಹೆ ಮತ್ತು ಸಹಕಾರಗಳಿಂದ ರಾಜ್ಯದ ಆಡಳಿತವು ಸುಲಲಿತವಾಗಿ ನಡೆಯುತ್ತಿದೆ ಎಂದೂ ನುಡಿದನು. ಅಂತೂ ಕಳ್ಳತನ ಕೊಲೆಗಳಿಗೂ, ಕೃತ್ರಿಮ ಭ್ರಷ್ಟಾಚಾರಗಳಿಗೂ ಹೆಸರುವಾಸಿಯಾಗಿದ್ದ ಶಂಭುವಿಗೆ ಸನ್ಮಾನ ಮಾಡಿ, ಸನ್ಮಾನ ಸಮಿತಿಯ ಲಾಭಕೋರರು ಕೃತಾರ್ಥರಾದರು.

* * * *

# ೧೪. ಯೋಧ ಜಯಸಿಂಹ

ಅಮಿತಾನಂದರ ಆಶೀರ್ವಾದವನ್ನು ಪಡೆದು, ಪ್ರಭಾತಗಿರಿಯಿಂದ ಹೊರಟ ಜಯಸಿಂಹನು ಮುಂದೇನು ಮಾಡಬೇಕೆಂಬುದನ್ನು ಚಿಂತಿಸುತ್ತಿದ್ದನು. ಹೇಮಾವತಿ ರಾಜ್ಯಕ್ಕೆ ಹೋಗಿ ರಾಜಕಾರಣದಲ್ಲಿ ದುಮುಕಬೇಕೆಂದು ಒಮ್ಮೆ ಯೋಚಿಸುತ್ತಿದ್ದರೆ, ಯಾವುದಾದರೊಂದು ಸರ್ಕಾರಿ ನೌಕರಿಗೆ ಸೇರಬೇಕೆಂದು ಇನ್ನೊಮ್ಮೆ ಯೋಚಿಸುತ್ತಿದ್ದನು. ಹೇಮಾವತಿ ರಾಜ್ಯದ ಅಂದಿನ ಪರಿಸ್ಥಿತಿಯಲ್ಲಿ ರಾಜಕಾರಣಕ್ಕೆ ಧುಮುಕುವುದು ಅವನಿಗೆ ಸರಿ ಎನ್ನಿಸಲಿಲ್ಲ. ಸರ್ಕಾರಿ ನೌಕರಿಗೆ ಸೇರುವುದೂ ಸಹ ಅವನ ಮನಸ್ಸಿಗೆ ಹಿಡಿಸಲಿಲ್ಲ. ಆಗ ಭಾರತದ ಗಡಿಯಲ್ಲಿ, ನೆರೆ ರಾಷ್ಟ್ರದ ನಮ್ಮ ಶತ್ರುಗಳು ಭಾರೀ ಸೈನ್ಯವನ್ನು ಜಮಾಯಿಸಿದ್ದರು. ಹಿಂದೆ ಹಲವು ಬಾರಿ ನಮ್ಮ ವೀರ ಸೈನಿಕರು ಶತ್ರು ಸೈನ್ಯವನ್ನು ಹೊಡೆದೋಡಿಸಿದ್ದರು. ಆದರೂ ಸಹ, ಆಗಾಗ ಶತ್ರು ಸೈನಿಕರು ಕಾಲು ಕೆರೆದು ಜಗಳಕ್ಕೆ ಬರುತ್ತಿದ್ದರು.

ಶತ್ರು ಸೈನ್ಯವು ನಮ್ಮ ದೇಶದ ಗಡಿಗೆ ಅತಿ ಸಮೀಪದಲ್ಲಿಯೇ ಬೀಡುಬಿಟ್ಟಿದ್ದು, ಆಗಾಗ ನಮ್ಮನ್ನು ಕೆರಳಿಸುವ ಕಾರ್ಯದಲ್ಲಿ ತೊಡಗಿತ್ತು. ಶತ್ರು ಸೈನಿಕರು ಯಾವ ಗಳಿಗೆಯಲ್ಲಾದರೂ ನಮ್ಮ ಗಡಿಯೊಳಗೆ ನುಗ್ಗಿ, ದೊಡ್ಡ ಸಮರವನ್ನಾರಂಭಿಸಬಹುದೆಂಬ ಶಂಕೆ ಇತ್ತು. ಆದ್ದರಿಂದ ಶತ್ರುಗಳನ್ನು ಎದುರಿಸುವ ಸಲುವಾಗಿ ನಮ್ಮವರೂ ಸಹ ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು. ಉತ್ತರದ ಗಡಿಯುದ್ಧಕ್ಕೂ ಸೈನ್ಯವನ್ನು ಜಮಾಯಿಸುವುದರ ಜೊತೆಗೆ, ಹೊಸದಾಗಿ ಜನರನ್ನು ಸೈನ್ಯಕ್ಕೆ ಸೇರಿಸಿಕೊಳ್ಳುತ್ತಿದ್ದರು.

ಜಯಸಿಂಹನು ಕಾಲೇಜಿನಲ್ಲಿ ಓದುತ್ತಿದ್ದಾಗ ಸೈನಿಕ ಶಿಕ್ಷಣವನ್ನು ಪಡೆದಿದ್ದನು. ಜೊತೆಗೆ ಪದವೀಧರನಾಗಿದ್ದನು. ಆದ್ದರಿಂದ ಅವನು ಸುಲಭವಾಗಿ ಸೈನ್ಯಕ್ಕೆ ಸೇರಬಹುದಾಗಿತ್ತು. ರಾಜಕೀಯ ರಂಗಕ್ಕಿಂತ ಅಥವಾ ಸರ್ಕಾರಿ ಚಾಕರಿಗಿಂತ ಯುದ್ಧರಂಗವೇ ಶ್ರೇಷ್ಠವೆಂದು ಅವನು ತೀರ್ಮಾನಿಸಿ, ಉತ್ತರದ ಗಡಿಯತ್ತ ಪ್ರಯಾಣ ಬೆಳೆಸಿ, ಹದಿನೈದು ದಿನಗಳ ನಂತರ ಸೈನ್ಯಕ್ಕೆ ಸೇರಿಕೊಂಡನು. ತಾನು ಸೈನ್ಯಕ್ಕೆ ಸೇರಿರುವ ವಿಚಾರವನ್ನು ತನ್ನ ತಾಯಿಗೂ ಇತರ ಆಪ್ತರಿಗೂ ಪತ್ರದ ಮೂಲಕ ತಿಳಿಸಿದನು.

ಸೈನ್ಯದಲ್ಲಿ ಅಧೀನ ಅಧಿಕಾರಿಯಾಗಿ ನೇಮಕ ಮಾಡಲ್ಪಟ್ಟ ಜಯಸಿಂಹನು ಅತ್ಯಲ್ಪ ಕಾಲದಲ್ಲಿಯೇ ಮೆಚ್ಚಿಗೆಗೆ ಪಾತ್ರನಾದನು. ಅವನ ಪ್ರತಿಭೆ ಮತ್ತು ದಕ್ಷತೆಗಳನ್ನು ಕಂಡು ಮೆಚ್ಚಿದ ಅವನ ಮೇಲಧಿಕಾರಿಗಳು ಅವನನ್ನು ಕೆಲಕಾಲದ ನಂತರ ದಳಾಧಿಕಾರಿಯನ್ನಾಗಿ ನೇಮಕ ಮಾಡಿದರು. ಅವನು ದಳಾಧಿಕಾರಿಯಾದ ಮೂರು ತಿಂಗಳೊಳಗಾಗಿ, ಉತ್ತರದ ಗಡಿಯಲ್ಲಿ ಶತ್ರು ಸೈನ್ಯದೊಡನೆ ಯುದ್ಧ ಮಾಡುವ ಪ್ರಸಂಗ ಒದಗಿತು. ಆ ಸಮಯದಲ್ಲಿ

ಶತ್ರು ಸೈನಿಕರು ನಮ್ಮ ಗಡಿಯನ್ನು ಅತಿಕ್ರಮಿಸುವ ಸನ್ನಾಹದಲ್ಲಿ ತೊಡಗಿದ್ದರು. ಅವರನ್ನು ತಡೆಗಟ್ಟುವ ಸಲುವಾಗಿ ನಮ್ಮ ದಂಡು ಆ ಕಡೆಗೆ ಧಾವಿಸಿತ್ತು. ಆ ದಂಡಿನಲ್ಲಿ ಜಯಸಿಂಹನ ದಳವೂ ಸೇರಿತ್ತು.

ನಮ್ಮ ದಂಡು ಗಡಿಯನ್ನು ತಲುಪಿದ ನಂತರ, ಸೇನಾಧಿಕಾರಿಯ ಆಜ್ಞೆಯ ಮೇರೆಗೆ, ಜಯಸಿಂಹನ ದಳವನ್ನು ಪರ್ವತದ ಮೇಲಿದ್ದ ಒಂದು ದುರ್ಗಮ ಪ್ರದೇಶಕ್ಕೆ ಕಳುಹಿಸಿದರು. ಜಯಸಿಂಹನು ತನ್ನ ದಳದೊಡನೆ ಅತಿ ಕಷ್ಟದಿಂದ ಪರ್ವತಾರೋಹಣ ಮಾಡಿ, ತಾನು ಹೋಗಬೇಕೆಂದು ನಿಗದಿಯಾದ ಸ್ಥಳವನ್ನು ಸೇರಿದನು. ಅಲ್ಲಿಗೆ ಹೋದನಂತರ ತಾನೊಂದು ದುರ್ಗಮ ಪ್ರದೇಶಕ್ಕೆ ಬಂದಿರುವುದಾಗಿ ಅವನಿಗೆ ಅರಿವಾಯಿತು. ಅವನಿದ್ದ ಸ್ಥಳಕ್ಕೂ ನಮ್ಮ ಸೈನ್ಯದ ಉಳಿದ ದಳಗಳ ನೆಲೆಗಳಿಗೂ ಬಹಳ ದೂರದ ಅಂತರವಿತ್ತು. ಆದ್ದರಿಂದ ಪ್ರಸಂಗಬಿದ್ದಾಗ ಜಯಸಿಂಹನಿಗೆ ಸುಲಭವಾಗಿ ನೆರವು ಸಿಕ್ಕುವಂತಿರಲಿಲ್ಲ. ಸಮರತಂತ್ರಕ್ಕನುಗುಣವಾಗಿ ದಳಗಳನ್ನು ಒಂದಕ್ಕೊಂದಕ್ಕೆ ಅತಿ ಸಮೀಪದಲ್ಲೇ ನಿಲ್ಲಿಸಬೇಕಾಗಿದ್ದರೂ, ಆ ಪರ್ವತ ಶ್ರೇಣಿಯಲ್ಲಿ ಆ ರೀತಿ ಮಾಡಲು ಸಾಧ್ಯವಾಗಿರಲಿಲ್ಲ.

ಜಯಸಿಂಹನು ಅಲ್ಲಿಗೆ ಹೋದ ಒಂದೆರಡು ದಿನಗಳೊಳಗಾಗಿ ಶತ್ರು ಸೈನ್ಯವು ಅನತಿ ದೂರದಲ್ಲಿಯೇ ಬೀಡುಬಿಟ್ಟಿದೆ ಎಂಬುದು ಗೊತ್ತಾಯಿತು. ಶತ್ರು ಸೈನ್ಯವು ಆಯಕಟ್ಟಿನ ಸ್ಥಳದಲ್ಲಿತ್ತು. ಜಯಸಿಂಹನ ದಳವು ಅನಾನುಕೂಲವಾದ ಪ್ರದೇಶದಲ್ಲಿತ್ತು. ಅವನ ದಳವು ಕೇವಲ ನೂರೈವತ್ತು ಸೈನಿಕರನ್ನೊಳಗೊಂಡಿತ್ತು. ಶತ್ರು ಸೈನ್ಯವು ಒಂದು ಸಾವಿರ ಯೋಧರನ್ನೊಳಗೊಂಡಿತ್ತು. ಬಲಾಬಲಗಳನ್ನು ಹೋಲಿಸಿ ನೋಡಿದ ಅವನಿಗೆ ತಾನು ಇಕ್ಕಟ್ಟಿನ ಪ್ರಸಂಗದಲ್ಲಿ ಸಿಕ್ಕಿರುವುದಾಗಿ ಗೊತ್ತಾಯಿತು. ಶತ್ರುಗಳಿಗೆ ಜಯಸಿಂಹನ ಸೇನಾಬಲವು ಗೊತ್ತಾಗಿ ಅವನ ಮೇಲೆ ಬೀಳಲು ಸಿದ್ಧತೆ ಮಾಡಿಕೊಳ್ಳುತ್ತಿದ್ದರು. ಈ ವಿಚಾರ ಜಯಸಿಂಹನಿಗೆ ಅವನ ಬೇಹುಗಾರರಿಂದ ಗೊತ್ತಾಗಿದ್ದಿತು. ಅವನು ಕಠಿಣ ಪರಿಸ್ಥಿತಿಯಲ್ಲಿದ್ದನು. ಶತ್ರುಗಳಿಗಂಜಿ ಹಿಂದೆ ಸರಿಯುವುದು ಅವಮಾನಕರವಾಗಿತ್ತು; ಶತ್ರುಗಳ ಧಾಳಿಯನ್ನು ಎದುರಿಸುವುದು ಕಷ್ಟಕರವಾಗಿತ್ತು. ಸಾವಿರ ಯೋಧರ ಸೈನ್ಯವು ತನ್ನ ಸೈನ್ಯದ ಮೇಲೆ ಬಿದ್ದರೆ, ತಾನೂ, ತನ್ನ ಸೈನ್ಯವೂ ನುಚ್ಚುನೂರಾಗಿ ಹೋಗುವುದರಲ್ಲಿ, ಅವನಿಗೆ ಸಂದೇಹವಿರಲಿಲ್ಲ. ಶತ್ರುವಿನ ಧಾಳಿಗೆ ಸಿಕ್ಕಿ ಹತನಾಗುವುದಕ್ಕಿಂತ ಏನಾದರೊಂದು ಉಪಾಯದಿಂದ ಗಂಡಾಂತರದಿಂದ ಪಾರಾಗಬೇಕೆಂದು ಯೋಚಿಸತೊಡಗಿದನು.

ತನ್ನ ಸೈನ್ಯವು ಬೀಡುಬಿಟ್ಟಿದ್ದ ಸ್ಥಳದಿಂದ ಸುಮಾರು ಎರಡು ಮೈಲಿಗಳ ದೂರದಲ್ಲಿ, ಎರಡು ಬೆಟ್ಟಗಳ ಮಧ್ಯೆ, ಒಂದು ಕಣಿವೆ ಇದ್ದುದನ್ನು ಜಯಸಿಂಹನು ಪತ್ತೆ ಮಾಡಿದನು. ಈ ಕಣಿವೆಗೆ ಉಪಾಯದಿಂದ ಶತ್ರು ಸೈನ್ಯವು ಬರುವಂತೆ ಮಾಡಿದರೆ, ಕಣಿವೆಯಲ್ಲಿ ಆ ಸೈನ್ಯವನ್ನು ಹತ ಮಾಡಬಹುದೆಂದು ಯೋಚಿಸಿದನು. ತನ್ನ ಸೈನ್ಯವನ್ನು ಮೂರು ತಂಡಗಳನ್ನಾಗಿ ವಿಂಗಡಿಸಿ, ಆ ಕಣಿವೆಯ ಕಡೆಗೆ ಅವುಗಳನ್ನು ಕೊಂಡೊಯ್ದನು. ಆ ಕಣಿವೆಯನ್ನು ತಲುಪಿದ ನಂತರ, ಒಂದು ತಂಡವನ್ನು ಕಣಿವೆಯ ಎಡಭಾಗದ ಬೆಟ್ಟದ

ಮೇಲೂ, ಇನ್ನೊಂದು ತಂಡವನ್ನು ಕಣಿವೆಯ ಬಲಭಾಗದ ಬೆಟ್ಟಮೇಲೂ, ಆಯ ಕಟ್ಟಿನ ಸ್ಥಳದಲ್ಲಿ ಇರಿಸಿದನು. ಮತ್ತೊಂದು ತಂಡವನ್ನು ಆ ಎರಡು ಬೆಟ್ಟಗಳ ಮಧ್ಯೆ ಇದ್ದ ಕಣಿವೆಯ ಮಾರ್ಗವಾಗಿ ಶತ್ರು ಶಿಬಿರದ ಕಡೆಗೆ ಮುನ್ನುಗ್ಗುವಂತೆ ಆಜ್ಞಾಪಿಸಿ ಕಳುಹಿಸಿದನು. ಆ ತಂಡದವರು ನೇರವಾಗಿ ಯುದ್ಧ ಮಾಡದೆ, ಶತ್ರು ನೆಲೆಯ ಸಮೀಪ ಸುಳಿದಾಡಿ, ಹುಸಿ ಗುಂಡನ್ನು ಹಾರಿಸಿ, ಅವರನ್ನು ಸಿಟ್ಟಿಗೇಳುವಂತೆ ಮಾಡಿ, ಅವರು ಕಣಿವೆಯ ಮಾರ್ಗವಾಗಿ ತಮ್ಮನ್ನು ಬೆನ್ನಟ್ಟಿ ಬರುವಂತೆ ಮಾಡಬೇಕೆಂದು ಆದೇಶ ನೀಡಿದನು.

ಅವನ ಆದೇಶದಂತೆ ಅವನ ಯೋಧರು, ಶತ್ರು ನೆಲೆಯ ಸಮೀಪ ಸುಳಿದಾಡಿ, ಹುಸಿ ಗುಂಡುಗಳನ್ನು ಹಾರಿಸುತ್ತಾ, ಶತ್ರುಗಳು ಪ್ರತಿ ಗುಂಡುಗಳನ್ನು ಹಾರಿಸಿದೊಡನೆ, ಕಾಲಿಗೆ ಬುದ್ಧಿ ಹೇಳುತ್ತಾ, ಕಣ್ಣುಮುಚ್ಚಾಲೆಯ ಕದನದಲ್ಲಿ ತೊಡಗಿದನು. ಕೆಲವು ಜನರನ್ನು ಒಳಗೊಂಡ ಭಾರತೀಯ ಸೈನ್ಯದ ಒಂದು ಸಣ್ಣ ತಂಡವು, ತಮ್ಮ ಮೇಲೆ ಬೀಳುವ ಪ್ರಯತ್ನದಲ್ಲಿ ತೊಡಗಿರುವುದನ್ನು ಕಂಡ ಶತ್ರು ಸೈನಿಕರಿಗೆ ಆಶ್ಚರ್ಯ ಉಂಟಾಗಿದ್ದರ ಜೊತೆಗೆ ಕೋಪವೂ ಉಂಟಾಯಿತು. ತುಂಟಾಟದಲ್ಲಿ ತೊಡಗಿದ್ದ ಭಾರತೀಯ ಸೈನ್ಯವನ್ನು ತುಂಡಾಡಿ ಬರಬೇಕೆಂದು, ಶತ್ರು ಸೈನ್ಯದ ದಳಪತಿಯು ಐನೂರು ಜನ ಸೈನಿಕರನ್ನೊಳಗೊಂಡ ಒಂದು ಸೈನ್ಯವನ್ನು ಕಳುಹಿಸಿಕೊಟ್ಟನು. ಅತ್ಯಾಧುನಿಕ ಶಸ್ತ್ರಧಾರಿಗಳಾದ ಐನೂರು ಜನ ಸೈನಿಕರು ನಮ್ಮ ಐವತ್ತು ಜನ ಸೈನಿಕರನ್ನು ಬೆನ್ನಟ್ಟಿ ಬಂದರು. ನಮ್ಮ ಸೈನಿಕರು ಬೆನ್ನಟ್ಟಿ ಬರುತ್ತಿದ್ದ ಶತ್ರು ಪಡೆಯ ಮೇಲೆ ಗುಂಡಿನ ಮಳೆಯನ್ನು ಸುರಿಸುತ್ತ, ನಾಗಾಲೋಟದಿಂದ ಕಣಿವೆಯ ಕಡೆಗೆ ನುಗ್ಗಿದರು. ಶತ್ರು ಸೈನಿಕರು ಗರ್ವದಿಂದ ಅವರನ್ನು ಓಡಿಸುತ್ತಾ ಕಣಿವೆಯೊಳಗೆ ನುಗ್ಗಿದರು.

ಶತ್ರು ಸೈನ್ಯವು ಕಣಿವೆಯ ಕಡೆಗೆ ಮುನ್ನುಗ್ಗುತ್ತಿರುವುದನ್ನು ನೋಡಿದ ಜಯಸಿಂಹನು ಅವರನ್ನು ಹತಮಾಡುವುದಕ್ಕಾಗಿ ವ್ಯೂಹವನ್ನು ರಚಿಸಿದನು. ಮುನ್ನುಗ್ಗುತ್ತಿದ್ದ ಶತ್ರು ಸೈನಿಕರ ದೃಷ್ಟಿ ಮುಂದುಗಡೆ ಓಡುತ್ತಿದ್ದ ಭಾರತೀಯ ಸೈನಿಕರ ಮೇಲಿತ್ತೇ ಹೊರತು, ಎಡಬಲದ ಬೆಟ್ಟಗಳಲ್ಲಿ ಅವಿತುಕೊಂಡಿದ್ದವರ ಮೇಲಿರಲಿಲ್ಲ. ಶತ್ರುಗಳ ಸೊಕ್ಕಿನಿಂದ ಕಣಿವೆಯ ಮಧ್ಯೆ ಬರುವವರೆಗೂ ಜಯಸಿಂಹನು ಸುಮ್ಮನಿದ್ದನು. ಕಣಿವೆಯ ಮಧ್ಯೆ ಬಂದೊಡನೆ ಜಯಸಿಂಹನ ಸೈನಿಕರು ಎಡಬಲದ ಬೆಟ್ಟಗಳಿಂದ ಹಠಾತ್ತನೆ ಮಾರ್ಟರುಗಳ ಮಳೆಗರೆಯಲಾರಂಭಿಸಿದರು. ಓಡಿ ಹೋಗುತ್ತಿದ್ದ ಮೂರನೇ ತಂಡದವರು ಏಕಾಏಕಿ ಹಿಂದಿರುಗಿ ಶತ್ರುಗಳ ಮೇಲೆ ಗುಂಡು ಹಾರಿಸಲಾರಂಭಿಸಿದರು.

ಶತ್ರು ಸೈನಿಕರು ದಿಗ್ಭ್ರಾಂತರಾದರು. ಅವರು ಹಿಂದೆ ಸರಿಯುವಂತೆಯೂ ಇರಲಿಲ್ಲ; ಮುಂದೆ ಹೋಗುವಂತೆಯೂ ಇರಲಿಲ್ಲ. ಗಾಬರಿಯಲ್ಲಿ ಏನುಮಾಡಬೇಕೆಂಬುದು ಅವರಿಗೆ ತೋಚಲಿಲ್ಲ. ತಾವು ಸಾವಿನ ದವಡೆಯಲ್ಲಿ ಸಿಕ್ಕಿದ್ದೇವೆಂಬುದನ್ನು ಅರಿತುಕೊಳ್ಳಲು ಅವರಿಗೆ ತಡವಾಗಲಿಲ್ಲ. ಆದರೂ ಅವರು ಭಾರತೀಯ ಸೈನಿಕರೊಡನೆ ಜೀವದ ಹಂಗು ತೊರೆದು ವೀರಾವೇಶದಿಂದ ಹೋರಾಡಿದರು. ಒಂದು ಗಂಟೆಯ ಕಾಲ

ನಡೆದ ಕದನದಲ್ಲಿ ಶತ್ರು ಸೈನ್ಯವು ಸಂಪೂರ್ಣ ಹತವಾಯಿತು. ನಮ್ಮ ಕಡೆ ಕೆಲವರು ಮಡಿದರು. ವಿಜಯಿಯಾದ ಜಯಸಿಂಹನು ಶತ್ರುವಿನ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡು, ಗಾಯಗೊಂಡ ಶತ್ರು ಸೈನಿಕರನ್ನು ಸೆರೆಹಿಡಿದು, ತನ್ನ ಶಿಬಿರಕ್ಕೆ ಕೊಂಡೊಯ್ದನು.

ಇತ್ತ ಶತ್ರು ಸೈನ್ಯದ ದಳಪತಿಯು ಕಣಿವೆಯ ಕಡೆಯಿಂದ ಕೇಳಿಬರುತ್ತಿದ್ದ ಗುಂಡಿನ ಶಬ್ದದ ಆಧಾರದಮೇಲೆ ತನ್ನ ಸೈನಿಕರು ಭಾರತೀಯ ಸೈನ್ಯವನ್ನು ಧ್ವಂಸ ಮಾಡಿರಬೇಕೆಂದು ಭಾವಿಸಿದನು. ಆದರೆ ಗುಂಡಿನ ಶಬ್ದವು ನಿಂತು ಕೆಲವುಗಂಟೆಗಳಾದರೂ ಕೂಡ ತನ್ನ ಸೈನಿಕರು ಹಿಂದಿರುಗದಿದ್ದುದನ್ನು ನೋಡಿ, ಅವನು ಕಾತರಗೊಂಡನು.ತನ್ನ ಸೈನ್ಯದ ಸಮಾಚಾರವನ್ನು ತಿಳಿದು ಬರುವಂತೆ ಅವನು ಸಣ್ಣ ಬೇಹುಗಾರ ಪಡೆಯೊಂದನ್ನು ಕಣಿವೆಯ ಕಡೆಗೆ ಅಟ್ಟಿದನು. ಬೇಹುಗಾರ ಪಡೆಯು ತಮ್ಮವರನ್ನರಿಸಿಕೊಂಡು ಕಣಿವೆಯ ಕಡೆಗೆ ನುಗ್ಗಿತು. ಕಣಿವೆಯ ಮಧ್ಯೆ ಬಂದೊಡನೆ ಕೇವಲ ಹದಿನೈದು ನಿಮಿಷಗಳೊಳಗಾಗಿ ಅದು ಜಯಸಿಂಹನ ಸೈನ್ಯದ ಕೈಯಲ್ಲಿ ಸಿಕ್ಕು ನಿರ್ನಾಮವಾಯಿತು.

ಒಂದು ದಿನ ಕಳೆದರೂ ಸಹ, ಭಾರತೀಯ ಸೈನ್ಯವನ್ನು ಬೆನ್ನಟ್ಟಿಹೋಗಿದ್ದ ಪಡೆಯಾಗಲಿ, ಆ ನಂತರ ಹುಡುಕಲು ಹೋಗಿದ್ದ ಬೇಹುಗಾರ ಪಡೆಯಾಗಲಿ ಹಿಂದಿರುಗದೆ ಇದ್ದುದರಿಂದ ಶತ್ರು ದಳಪತಿಯು ಕಳವಳಕ್ಕೀಡಾದನು. ಮರುದಿನ ಬೆಳಿಗ್ಗೆ ಅವನು ತನ್ನ ಸಮಸ್ತ ಸೈನ್ಯದೊಡಗೂಡಿ ಕಣಿವೆಯ ಕಡೆಗೆ ಸಾಗಿದನು. ಶತ್ರುಗಳು ತಮ್ಮವರನ್ನರಸಿಕೊಂಡು ಬರಬಹುದೆಂಬುದನ್ನು ಊಹಿಸಿ, ಜಯಸಿಂಹನು ಇಮ್ಮಡಿ ಹುಮ್ಮಸ್ಸಿನಿಂದ ವ್ಯೂಹವನ್ನು ರಚಿಸಿ, ಶತ್ರುಗಳ ದಾರಿಯನ್ನು ಕಾಯುತ್ತಿದ್ದನು.

ಕಣಿವೆಯನ್ನು ಸಮೀಪಿಸಿದೊಡನೆ, ಶತ್ರು ದಳಪತಿಯು ಕಣಿವೆಯಲ್ಲಿ ತನಗೆ ಅಪಾಯ ಕಾದಿದೆ ಎಂಬುದನ್ನು ಗ್ರಹಿಸಿದನು. ಸೂಕ್ಷ್ಮಮತಿಯಾದ ಅವನು ಭಾರತೀಯ ಸೈನಿಕರು ಇಕ್ಕೆಲದ ಬೆಟ್ಟಗಳ ಮೇಲೆ ಅವಿತುಕೊಂಡಿರಬಹುದೆಂದು ಊಹಿಸಿದನು. ತನ್ನ ಸೈನ್ಯವನ್ನು ಮೂರು ತಂಡಗಳನ್ನಾಗಿ ವಿಂಗಡಿಸಿ, ಎರಡು ತಂಡದವರು ಎಡಬಲದ ಬೆಟ್ಟಗಳನ್ನು ಹತ್ತಿ, ಭಾರತೀಯ ಸೈನ್ಯದ ನೆಲೆಯ ಮೇಲೆ ಬೀಳಬೇಕೆಂದು ಆಜ್ಞಾಪಿಸಿ, ಉಳಿದ ತಂಡದೊಡನೆ ಕಣಿವೆಯ ಮಾರ್ಗವನ್ನು ಹಿಡಿದು ಮುಂದೆ ಸಾಗಿದನು. ಶತ್ರು ಸೈನ್ಯವು ಕಣಿವೆಯ ಮಧ್ಯೆ ಬಂದೊಡನೆ ಯಥಾವಿಧಿಯಾಗಿ, ಜಯಸಿಂಹನ ಸೈನಿಕರು ಗುಂಡಿನ ಮಳೆಗರೆದರು. ಅತ್ತ ಶತ್ರು ಸೈನಿಕರು ಬೆಟ್ಟಗಳ ಹಿಂಬದಿಯಿಂದ ಮೇಲಕ್ಕೇರಿ ಭಾರತೀಯ ಸೈನಿಕರ ಮೇಲೆ ಹಲ್ಲೆ ನಡೆಸಿದರು.

ಭೀಕರ ಸಮರ ಆರಂಭವಾಯಿತು., ಶತ್ರುಗಳು ಬೆಟ್ಟಗಳನ್ನು ಹತ್ತಿ ತನ್ನ ಸೈನ್ಯದ ಮೇಲೆ ಬೀಳಬಹುದೆಂದು ಜಯಸಿಂಹನು ಮೊದಲೇ ಊಹಿಸಿದ್ದನು. ಅಂತಹ ಪ್ರಸಂಗವನ್ನು ಎದುರಿಸುವ ಸಲುವಾಗಿ ಅವನು ತಕ್ಕ ವ್ಯವಸ್ಥೆ ಮಾಡಿದ್ದನು. ಆದರೆ ಪುಟ್ಟ ಒಂದು ಭಾರತೀಯ ಪಡೆಯು ಶತ್ರುವಿನ ಭಾರೀ ಸೈನ್ಯವನ್ನು ಎದುರಿಸುವುದು ಕಷ್ಟವಾಗಿತ್ತು. ಉಭಯ ಕಡೆಯವರೂ ವೀರಾವೇಶದಿಂದ ಹೋರಾಡಿ, ಮಾರ್ಟರ್, ಗ್ರೆನೇಡ್, ಮೆಷಿನ್‌ಗನ್ ಮುಂತಾದ ಆಯುಧಗಳಿಂದ ಒಬ್ಬರನ್ನೊಬ್ಬರು

ಹತಮಾಡುತ್ತಿದ್ದರು. ಶತ್ರು ಸೈನ್ಯವು ಬಹುಸಂಖ್ಯೆಯಲ್ಲಿದ್ದರೂ, ಸಮರ್ಥ ಈಡುಗಾರರಾಗಿದ್ದ ಭಾರತೀಯ ಯೋಧರ ಮುಂದೆ, ಅವರ ಪ್ರತಾಪ ಏನೂ ನಡೆಯಲಿಲ್ಲ.

ಸತತ ಆರು ಗಂಟೆಗಳ ಕಾಲ ನಡೆದ ರೌದ್ರ ಹೋರಾಟದಲ್ಲಿ ಬಹುಮಂದಿ ಶತ್ರು ಸೈನಿಕರು ಮಡಿದರು. ಶತ್ರು ದಳಪತಿಯು ಜಯಸಿಂಹನ ಗುಂಡಿನೇಟಿಗೆ ಬಲಿಯಾಗಿ, ಕಣಿವೆಯಲ್ಲಿ ನೆಲಕ್ಕುರುಳಿದನು. ಜಯಸಿಂಹನ ಸೈನ್ಯದಲ್ಲಿ ಅರೆವಾಸಿ ಸೈನಿಕರು ಹತರಾದರು. ಶತ್ರು ಸಿಪಾಯಿಯೊಬ್ಬನ ತುಪಾಕಿಯ ತುಂಡಿನಿಂದ ಜಯಸಿಂಹನ ಎಡಗೈ ಅಪಾಯಕರವಾದ ರೀತಿ ಘಾಸಿಗೊಂಡಿತ್ತು. ಘಾಸಿಗೊಂಡ ಕೈಯಿಂದ ರಕ್ತ ಧಾರಕಾರವಾಗಿ ಸುರಿಯುತ್ತಿದ್ದರೂ, ಜಯಸಿಂಹನು ತನ್ನ ಸೈನಿಕರನ್ನು ಹುರಿದುಂಬಿಸುತ್ತಿದ್ದನು. ಅಂತಿಮದಲ್ಲಿ ಭಾರತೀಯರ ಗುಂಡಿನೇಟನ್ನು ತಾಳಲಾರದೆ, ಅಳಿದುಳಿದ ಶತ್ರು ಸೈನಿಕರು ಪಲಾಯನ ಮಾಡಿದರು. ಆದರೆ ವಿಜಯಿಯಾದ ಜಯಸಿಂಹನು ರಕ್ತಸ್ರಾವದಿಂದ ಬಳಲಿ ಮೂರ್ಛೆಗೊಂಡು ಕೆಳಗುರುಳಿದನು.

ಮರುದಿನ ಕದನ ವಿಚಾರವನ್ನರಿತ ಭಾರತೀಯ ಸೇನಾಧಿಕಾರಿಯು ಸಣ್ಣ ವಿಮಾನದಲ್ಲಿ ಜಯಸಿಂಹನ ದಳವು ಬೀಡು ಬಿಟ್ಟಿದ್ದ ಸ್ಥಳಕ್ಕೆ ಬಂದನು. ಜಯಸಿಂಹನು ಶಿಬಿರದಲ್ಲಿ ಪ್ರಜ್ಞಾಶೂನ್ಯನಾಗಿ ಬಿದ್ದಿದ್ದನು. ಸೇನಾಧಿಕಾರಿಯು ಕದನ ನಡೆದ ಬಗೆಯನ್ನು ಜಯಸಿಂಹನ ಸೈನಿಕರಿಂದ ಸವಿಸ್ತಾರವಾಗಿ ತಿಳಿದುಕೊಂಡು, ಬಹಳ ಸಂತೋಷ ಪಟ್ಟನು. ಕದನ ನಡೆದ ಸ್ಥಳವನ್ನು ಪರಿಶೀಲಿಸಿದ ನಂತರ ಅವನಿಗೆ ಅಪರಿಮಿತ ಆನಂದವಾಯಿತು. ಜಯಸಿಂಹನು ಜಗದ್ವಿಖ್ಯಾತ ಸೇನಾನಿಯಾಗತಕ್ಕ ಅರ್ಹತೆಯುಳ್ಳ ಯೋಧನೆಂಬುದನ್ನು ಅವನು ಮನಗಂಡನು. ಕೇವಲ ನೂರೈವತ್ತು ಸೈನಿಕರನ್ನೊಳಗೊಂಡ ಒಂದು ಪುಟ್ಟದಳವು ಒಂದು ಸಾವಿರ ಜನರನ್ನೊಳಗೊಂಡ ಪಡೆಯನ್ನು ಸೋಲಿಸಿದ್ದು ಅದ್ಭುತವಾದ ಸಾಧನೆಯಾಗಿತ್ತು.

ಪ್ರಜ್ಞೆಯಿಲ್ಲದೆ ಮಲಗಿದ್ದ ಜಯಸಿಂಹನನ್ನು ಸೇನಾಧಿಕಾರಿಯು ತನ್ನ ವಿಮಾನದಲ್ಲಿ ಮಲಗಿಸಿ, ಉತ್ತರವಲಯದ ಕೇಂದ್ರ ಶಿಬಿರದ ಸೈನಿಕ ಆಸ್ಪತ್ರೆಗೆ ಕೊಂಡೊಯ್ದು, ಅವನಿಗೆ ಅತ್ಯುತ್ತಮ ಚಿಕಿತ್ಸೆ ನೀಡುವ ವ್ಯವಸ್ಥೆಮಾಡಿದನು. ಆದರೂ ಅವನು ಬದುಕುವುದು ಅಸಂಭವವೆಂದು ತೋರಿದ್ದರಿಂದ, ಅವನ ತಾಯಿಗೆ ತಂತಿಯನ್ನು ಕಳುಹಿಸಿದನು. ಈಚೆಗೆ ಜಯಸಿಂಹನಿಂದ ನಿರ್ಮಲಾದೇವಿಯವರಿಗೆ ಪತ್ರವೇ ಇರಲಿಲ್ಲ. ಏಕಾಏಕಿ ಮಗನ ಸ್ಥಿತಿ ಚಿಂತಾಜನಕವಾಗಿದೆ ಎಂಬ ತಂತಿ ಸುದ್ದಿಯಿಂದ ನಿರ್ಮಲಾದೇವಿಯವರು ದುಃಖ ಸಾಗರದಲ್ಲಿ ಮುಳುಗಿದರು. ವಾರ್ತೆ ತಿಳಿದೊಡನೆ ರಾಜಧಾನಿಗೆ ಹೋಗಿ, ಅಮರಚಂದರನ್ನು ಕರೆದುಕೊಂಡು, ಮಗನಿರುವ ಸ್ಥಳಕ್ಕೆ ಪ್ರಯಾಣ ಬೆಳೆಸಿದರು.

ಇತ್ತ ಜಯಸಿಂಹನ ಸ್ಥಿತಿ ದಿನೇ ದಿನೇ ವಿಷಮಿಸುತ್ತಿತ್ತು. ಘಾಸಿಗೊಂಡಿದ್ದ ಕೈಯನ್ನು ಭುಜದವರೆಗೆ ಕತ್ತರಿಸಿದರೆ ಮಾತ್ರ, ಅವನು ಬದುಕುವ ಸಂಭವವಿದೆ ಎಂದು ತಜ್ಞರು ಅಭಿಪ್ರಾಯಪಟ್ಟರು. ಆ ತರುವಾಯ ಸೇನೆಯ ಅಧಿಕಾರಿಗಳು ಸಮಾಲೋಚನೆಮಾಡಿ, ಕೈಯನ್ನು ಕತ್ತರಿಸಬಹುದೆಂದು ಸೂಚಿಸಿದರು. ಆ ಸೂಚನೆಯ ಪ್ರಕಾರ, ಅವನ

ಎಡಗೈಯನ್ನು ಭುಜದವರೆಗೆ ಕತ್ತರಿಸಿ ಹಾಕಲಾಯಿತು. ಕೈಯನ್ನು ಕತ್ತರಿಸಿದ ಮರುದಿನ, ನಿರ್ಮಲಾದೇವಿಯವರೂ, ಅಮರಚಂದರೂ ಜಯಸಿಂಹನಿದ್ದ ಆಸ್ಪತ್ರೆಯನ್ನು ತಲುಪಿದರು ಜಯಸಿಂಹನು ಪ್ರಜ್ಞಾಶೂನ್ಯನಾಗಿ ಮಲಗಿದ್ದನು. ಮೂರು ದಿನಗಳ ಕಾಲ ಅದೇ ರೀತಿ ಜ್ಞಾನವಿಲ್ಲದೆ, ಸಾವು ಬದುಕಿನ ಮಧ್ಯೆ ತೊಳಲಾಡುತ್ತಿದ್ದನು. ಒಮ್ಮೊಮ್ಮೆ ಈಗಲೋ ಆಗಲೋ ಎನ್ನುವ ಸ್ಥಿತಿ ಕಾಣುತ್ತಿತ್ತು. ನಿರ್ಮಲಾದೇವಿಯವರು ನಿದ್ರೆ, ಆಹಾರಗಳಿಲ್ಲದ ದುಃಖಪರಿತಪ್ತರಾಗಿ ಅವನ ಬಳಿಯಲ್ಲಿಯೇ ಕಾದಿದ್ದು, ಭಗವಂತನನ್ನು ಪ್ರಾರ್ಥಿಸುತ್ತಿದ್ದರು.

ಮೂರು ದಿನಗಳ ನಂತರ ಜಯಸಿಂಹನು ಪ್ರಜ್ಞೆ ತಿಳಿದವನಾಗಿ ಕಣ್ತೆರೆದು, ಪಕ್ಕದಲ್ಲಿಯೇ ಕುಳಿತಿದ್ದ ತಾಯಿಯನ್ನು ನೋಡಿದನು. ತಾಯಿಯ ಆನಂದಕ್ಕೆ ಪಾರವೇ ಇರಲಿಲ್ಲ. ಆ ಬಳಿಕ ಜಯಸಿಂಹನ ಆರೋಗ್ಯ ದಿನೇ ದಿನೇ ಸುಧಾರಿಸತೊಡಗಿತು. ಒಂದು ತಿಂಗಳು ದಾಟುವುದರೊಳಗಾಗಿ ಅವನು ಎದ್ದು ಓಡಾಡುವ ಸ್ಥಿತಿಗೆ ಬಂದನು. ಆದರೆ ಅವನು ಒಂದು ಕೈಯನ್ನು ಕಳೆದುಕೊಂಡು ಅಂಗಹೀನನಾಗಿದ್ದುದರಿಂದ, ಸೇನಾ ನಿಯಯದಂತೆ ಮುಂದೆ ಅವನು ಸೈನ್ಯದಲ್ಲಿ ಸೇವೆ ಸಲ್ಲಿಸುವಂತಿರಲಿಲ್ಲ. ಆದ್ದರಿಂದ ಅವನನ್ನು ಕೆಲಸದಿಂದ ನಿವೃತ್ತಿ ಮಾಡಿ, ಅವನಿಗೆ ವಿರಾಮವೇತನವನ್ನು ಕೊಡತಕ್ಕದ್ದೆಂದು ತೀರ್ಮಾನವಾಯಿತು. ಅವನ ಅದ್ಭುತ ಸಾಹಸವನ್ನು ಮೆಚ್ಚಿದ್ದ ದಂಡನಾಯಕರು, ಅವನಿಗೆ 'ಪರಮವೀರಚಕ್ರ' ಪ್ರಶಸ್ತಿಯನ್ನು ದಯಪಾಲಿಸಬೇಕೆಂದು ರಾಷ್ಟ್ರಾಧ್ಯಕ್ಷರಿಗೆ ಶಿಫಾರಸ್ಸು ಮಾಡಿದರು.

ಕೆಲವು ದಿನಗಳ ತರುವಾಯ, ರಾಷ್ಟ್ರಪತಿ ಭವನದಲ್ಲಿ ಪ್ರಶಸ್ತಿಯನ್ನು ನೀಡುವ ಸಮಾರಂಭವು ಅತಿ ವಿಜೃಂಭಣೆಯಿಂದ ಜರುಗಿತು. ಪ್ರಧಾನ ಮಂತ್ರಿಗಳೂ, ಸೈನ್ಯದ ಮಹಾದಂಡನಾಯಕರೂ, ಇತರ ಗಣ್ಯ ಮಹನೀಯರೂ ಸಮಾರಂಭಕ್ಕೆ ಆಗಮಿಸಿದ್ದರು. ಸಮಾರಂಭದಲ್ಲಿ ಜಯಸಿಂಹನನ್ನು ವೀರಾಧಿವೀರನೆಂದು ಹೊಗಳಿದರು. ರಾಷ್ಟ್ರಪತಿಗಳು ಪ್ರಶಸ್ತಿಯನ್ನು ದಯಪಾಲಿಸಿ ಅವನನ್ನು ಅಭಿನಂದಿಸಿದರು. ಪ್ರಧಾನ ಮಂತ್ರಿಗಳೂ, ಮಹಾದಂಡನಾಯಕರೂ ಸಹ ಅವನಿಗೆ ಅಭಿನಂದನೆಗಳನ್ನು ಸಲ್ಲಿಸಿದರು.

ರಾಷ್ಟ್ರಪತಿಗಳು ಜಯಸಿಂಹನಿಗೆ 'ಪರಮವೀರಚಕ್ರ' ಪ್ರಶಸ್ತಿಯನ್ನು ದಯಪಾಲಿಸುತ್ತಿದ್ದ ವೇಳೆಯಲ್ಲಿ ತೆಗೆದಿದ್ದ ಚಿತ್ರವು ಮರುದಿನ ದೇಶದ ಎಲಾ ಪ್ರಮುಖ ಪತ್ರಿಕೆಗಳಲ್ಲೂ ಪ್ರಕಟವಾಗಿತ್ತು. ಜಯಸಿಂಹನು ದಿವಂಗತ ದುರ್ಗಾದಾಸರ ಪುತ್ರನೆಂದು ಪತ್ರಿಕೆಗಳಲ್ಲಿ ವರದಿಯಾಗಿತ್ತು. ಅವನು ಸೈನ್ಯಕ್ಕೆ ಸೇರಿದ ವಿಚಾರ ಹೇಮಾವತಿ ರಾಜ್ಯದಲ್ಲಿ ಕೆಲವರಿಗೆ ಮಾತ್ರ ಗೊತ್ತಾಗಿತ್ತು. ಬಹು ಮಂದಿಗೆ ಅವನೆಲ್ಲಿದ್ದಾನೆಂಬುದು ಸಹ ಗೊತ್ತಿರಲಿಲ್ಲ. ಪತ್ರಿಕೆಗಳನ್ನೋದಿದ ಹೇಮಾವತಿ ರಾಜ್ಯದ ಜನರು, ಸಿಂಹದ ಹೊಟ್ಟೆಯಲ್ಲಿ ಸಿಂಹವೇ ಹುಟ್ಟಿದೆ ಎಂದು ಹೆಮ್ಮೆ ಪಟ್ಟು ಹರ್ಷಗೊಂಡರು. ದುರ್ಗಾದಾಸರ ಹಿತೈಷಿಗಳಿಗಂತೂ ಅದೊಂದು ಅತ್ಯಂತ ಹರ್ಷದಾಯಕ ಸುದ್ದಿಯಾಗಿತ್ತು.

ಜಯಸಿಂಹನು ಸೈನ್ಯದಲ್ಲಿ ಒಬ್ಬ ಅನಾಮಧೇಯ ಸಿಪಾಯಿಯಾಗಿ ಕೆಲಸ ಮಾಡುತ್ತಿರ ಬಹುದೆಂದು ಶಂಭು ದಾಮೋದರರು ಅದುವರೆಗೆ ಭಾವಿಸಿದ್ದರು. ಪತ್ರಿಕೆಗಳನ್ನೋದಿದ

ಅವರು ಅಸೂಯೆ ಪಟ್ಟರು. ಅವರಿಗೆ ಕೊಂಚ ದಿಗಿಲೂ ಆಯಿತು. ಭಾರತದ ಆದ್ಯಂತ ಪ್ರಖ್ಯಾತನಾಗಿ, ದೆಹಲಿಯಲ್ಲಿರುವ ಮುಖಂಡರ ಮೆಚ್ಚುಗೆಯನ್ನು ಪಡೆದಿದ್ದ ಜಯಸಿಂಹನು ಎಂದಾದರೊಂದು ದಿನ ತಮಗೆ ಅಪಾಯವನ್ನು ಉಂಟು ಮಾಡಬಹುದೆಂದು, ಅವರಿಬ್ಬರೂ ತಳಮಳಗೊಂಡರು.

* * * *

ಪ್ರಶಸ್ತಿಯನ್ನು ಪಡೆದು ಪ್ರಖ್ಯಾತ ವೀರವೆನಿಸಿಕೊಂಡಿದ್ದ ಜಯಸಿಂಹನು ಹೇಮಾವತಿ ನಗರಕ್ಕೆ ಬರುತ್ತಾನೆಂಬ ಸುದ್ದಿಯನ್ನು ಕೇಳಿದ ನಗರದ ನಾಗರಿಕರು ಅವನನ್ನು ಸ್ವಾಗತಿಸಲು ಸಿದ್ಧತೆಗಳನ್ನು ಮಾಡಿಕೊಳ್ಳುತ್ತಿದ್ದರು. ದುರ್ಗಾದಾಸರ ಹಿತೈಷಿಗಳಾಗಿದ್ದವರು ಅವನನ್ನು ನೋಡಲು ಕಾತುರರಾಗಿದ್ದರು. ಅವನ ದರ್ಶನವನ್ನು ಪಡೆಯಲು ರಾಜ್ಯದ ನಾನಾ ಕಡೆಗಳಿಂದ ಜನರು ನಗರಕ್ಕಾಗಮಿಸುತ್ತಿದ್ದರು. ಜಯಸಿಂಹನು ದೆಹಲಿಯಿಂದ ಹೇಮಾವತಿಗೆ ರೈಲಿನಲ್ಲಿ ಪ್ರಯಾಣ ಮಾಡುತ್ತಿದ್ದನು. ಮರುದಿನ ಅವನು ರಾಜಧಾನಿಗೆ ಬರತಕ್ಕವನಾಗಿದ್ದನು.

ಜಯಸಿಂಹನ ಸ್ವಾಗತಕ್ಕಾಗಿ ನಡೆಯುತ್ತಿದ್ದ ವಿಜೃಂಭಣೆಯ ಏರ್ಪಾಟುಗಳನ್ನು ನೋಡಿದ್ದ ಶಂಭು ದಾಮೋದರರಿಗೆ ಬಹಳ ಅಸೂಯೆಯುಂಟಾಯಿತು. ಏನಾದರೂ ನೆಪದಲ್ಲಿ, ಜಯಸಿಂಹನ ಸಲುವಾಗಿ ನಡೆಯಬೇಕೆಂದಿದ್ದ ಸ್ವಾಗತೋತ್ಸವ ನಡೆಯದಂತೆ ಮಾಡಬೇಕೆಂದು, ಅವರಿಬ್ಬರೂ ಯೋಚಿಸಿ ಜಿಲ್ಲಾಧಿಕಾರಿಯನ್ನು ಕರೆಸಿ, ಅವನೊಡನೆ ಸಮಾಲೋಚನೆ ಮಾಡಿದರು. ನಗರದಲ್ಲಿ ಕೋಮುವಾರು ಗಲಭೆ ನಡೆಯಬಹುದೆಂಬ ಕುಂಟು ನೆಪದಿಂದ, ನಗರದಲ್ಲಿ ಎಲ್ಲೂ ಐದು ಜನರಿಗಿಂತ ಹೆಚ್ಚು ಸಂಖ್ಯೆಯಲ್ಲಿ ಸೇರಬಾರದೆಂದೂ, ಮೆರವಣಿಗೆ ಮತ್ತು ಸಭೆಗಳು ನಡೆಯಬಾರದೆಂದೂ ಜಿಲ್ಲಾಧಿಕಾರಿಯಿಂದ ನಿಷೇಧಾಜ್ಞೆಯನ್ನು ಹೊರಡಿಸಿದರು.

ಉದ್ದೇಶಪೂರ್ವಕವಾಗಿ ನಿಷೇಧಾಜ್ಞೆಯನ್ನು ಹೊರಡಿಸಿದ್ದಾರೆಂದು ಹೇಮಾವತಿ ನಗರದ ಜನರು ಗ್ರಹಿಸಿದರು. ಶಂಭು ದಾಮೋದರರು, ತಮ್ಮ ವೈರಿಯಾಗಿದ್ದ ದುರ್ಗಾದಾಸರ ಮಗನಿಗೆ ಭವ್ಯವಾದ ಸ್ವಾಗತ ಲಭಿಸದಂತೆ ಮಾಡುವ ಉದ್ದೇಶದಿಂದ ಆ ನಿಷೇಧಾಜ್ಞೆಯನ್ನು ಹೊರಡಿಸಿದ್ದಾರೆಂದು ಜನರು ಭಾವಿಸಲು ಕಾರಣಗಳಿದ್ದುವು. ಆದ್ದರಿಂದ ನಿಷೇಧಾಜ್ಞೆಯನ್ನು ಉಲ್ಲಂಘಿಸಬೇಕೆಂದು ಜನರು ನಿರ್ಣಯಿಸಿದರು. ಶಂಭು, ದಾಮೋದರರು ಆ ಆಜ್ಞೆಯನ್ನು ಜಾರಿಗೆ ತರಲು ತರದೂದು ನಡೆಸುತ್ತಿದ್ದರೆ, ಜನರು ಅದನ್ನು ಮುರಿಯಲು ಮಸಲತ್ತು ಮಾಡುತ್ತಿದ್ದರು.

ಮರುದಿನ ಬೆಳಿಗ್ಗೆ ನಗರದ ರೈಲ್ವೇ ನಿಲ್ದಾಣವು ಜನಸ್ತೋಮದಿಂದ ಕಿಕ್ಕಿರಿದು ಹೋಗಿದ್ದಿತು. ಹೇಮಾವತಿ ನಗರದಲ್ಲಿದ್ದ ಸೈನ್ಯದ ಪ್ರಮುಖ ಅಧಿಕಾರಿಗಳೂ ಸಹ ಜಯಸಿಂಹನನ್ನು ಸ್ವಾಗತಿಸಲು ನಿಲ್ದಾಣಕ್ಕೆ ಆಗಮಿಸಿದ್ದರು. ಶಂಭು ದಾಮೋದರರಿಂದ ಆಜ್ಞಪ್ತರಾದ ಪೋಲಿಸ್ ಅಧಿಕಾರಿಗಳು ಲಾಠಿ ಪ್ರಯೋಗ ಮಾಡಬೇಕೆಂದು ಹವಣಿಸುತ್ತಿದ್ದರು. ಪೋಲಿಸಿನವರು ಬಲ ಪ್ರಯೋಗ ಮಾಡಿದರೆ, ಶಂಭು ದಾಮೋದರರ

ಮನೆಗಳ ಮೇಲೆ ಹಲ್ಲೆ ನಡೆಸಬೇಕೆಂದು ಜನರ ಹವಣಿಸುತ್ತಿದ್ದರು. ಜನರು ನಿರ್ಧಾರ ಹೇಗೋ ದಾಮೋದರನಿಗೆ ಗೊತ್ತಾಯಿತು. ಲಾಠಿ ಪ್ರಯೋಗವಾದಲ್ಲಿ ಸ್ಥಳೀಯ ಸೇನಾಧಿಕಾರಿಗಳ ಆಗ್ರಹಕ್ಕೂ, ಪ್ರಧಾನಮಂತ್ರಿಗಳ ಆಗ್ರಹಕ್ಕೂ ತಾನು ಪಾತ್ರನಾಗಬಹು ದೆಂಬ ಭಯ ಅವನಿಗುಂಟಾಯಿತು. ಆದ್ದರಿಂದ ಗುಂಪನ್ನು ಚದುರಿಸಲು ಬಲ ಪ್ರಯೋಗ ಮಾಡಬಾರದೆಂದು ಅಧಿಕಾರಿಗಳಿಗೆ ಸೂಚನೆ ಮಾಡಿದನು.

ರೈಲ್ವೇ ನಿಲ್ದಾಣದಲ್ಲಿ ಜಯಸಿಂಹನನ್ನು ಸ್ವಾಗತಿಸಿ, ಅವನನ್ನು ರಾಜಧಾನಿಯ ಪ್ರಮುಖ ಬೀದಿಗಳಲ್ಲಿ ಮೆರವಣಿಗೆಯಲ್ಲಿ ಕೊಂಡೊಯ್ದರು. ಜನರ ಉತ್ಸಾಹಕ್ಕೆ ಪಾರವೇ ಯಿರಲಿಲ್ಲ. ಲಕ್ಷಾಂತರ ಜನರು ಮೆರವಣಿಗೆಯಲ್ಲಿ ಪಾಲ್ಗೊಂಡು ಜಯಸಿಂಹನಿಗೆ ಗೌರವವನ್ನು ಸೂಚಿಸಿದರು. ಅವನಿಗೆ ಗೌರವವನ್ನು ಸೂಚಿಸುವುದಕ್ಕಾಗಿ ಸಾಯಂಕಾಲ ರಾಜಧಾನಿಯ ಕ್ರೀಡಾ ಮೈದಾನದಲ್ಲಿ ಒಂದು ಬಹಿರಂಗ ಸಭೆ ಏರ್ಪಟ್ಟಿದ್ದಿತು. ಪ್ರತಾಪ ರಾಜನು ಆ ಸಭೆಯ ಅಧ್ಯಕ್ಷತೆಯನ್ನು ವಹಿಸಿದ್ದನು. ಸಭೆಗೆ ಮೂರು ಜನರು ಆಗಮಿಸಿದ್ದರು. ಪ್ರಮುಖರನೇಕರು ಸಭೆಯಲ್ಲಿ ಮಾತನಾಡಿ ಜಯಸಿಂಹನನ್ನು ಅಭಿನಂದಿಸಿದರು. ಆ ನಂತರ ಸಭೆಯನ್ನು ಕುರಿತು ಜಯಸಿಂಹನು ಮಾತನಾಡಿದನು. ಅವನು ಮಾತು ಈ ರೀತಿ ಇತ್ತು:

"ಬಂಧು ಭಗಿನಿಯರೇ, ಈ ದಿನ ತಾವು ನನಗಿತ್ತ ಬಹು ವಿಜೃಂಭಣೆಯ ಮಮತೆಯ ಸ್ವಾಗತಕ್ಕಾಗಿ ಬಹಳ ಋಣಿಯಾಗಿದ್ದೇನೆ. ನನ್ನ ಪೂಜ್ಯ ತಂದೆಯವರಾದ ದುರ್ಗಾದಾಸರ ಸವಿನೆನಪಿಗಾಗಿ ತಾವು ಇಷ್ಟೊಂದು ಸಂಭ್ರಮದ ಸ್ವಾಗತವನ್ನು ನೀಡಿದ್ದೀರೆಂದು ಭಾವಿಸುತ್ತೇನೆ. ನಾನೊಬ್ಬ ಯುದ್ಧ ಮಾಡುವ ಸಿಪಾಯಿ; ಉಪನ್ಯಾಸ ಮಾಡುವ ವಾಗ್ಮಿಯಲ್ಲ. ಯೋಧನಾಗಿ ಕೆಲವು ಮಾತುಗಳನ್ನಾಡಲು ಇಚ್ಛಿಸುತ್ತೇನೆ. ಮಾತೃಭೂಮಿಯೇ ನನ್ನ ದೇವರು. ಮಾತೃ ಭೂಮಿಯ ರಕ್ಷಣೆಗಾಗಿ ಹೋರಾಡುವುದೇ ನನ್ನ ಪೂಜೆ. ವೀರ ಸ್ವರ್ಗವೇ ನನಗೆ ಮುಕ್ತಿ. ಗಡಿಯಲ್ಲಿ ನಾನೆಸಗಿದ ಕಾರ್ಯವನ್ನು ಮೆಚ್ಚಿ ರಾಷ್ಟ್ರಪತಿಯವರು ನನಗೆ ಪ್ರಶಸ್ತಿಯನ್ನು ನೀಡಿದ್ದಾರೆ. ನಾನವರಿಗೆ ಋಣಿಯಾಗಿದ್ದೇನೆ. ಆದರೆ ಪ್ರಶಸ್ತಿಯಿಂದ ನನಗಾಗಿರುವ ಸಂತೋಷಕ್ಕಿಂತ ಸೈನ್ಯದಿಂದ ನಿವೃತ್ತಿ ಹೊಂದಿದ ದುಃಖವೇ ಹೆಚ್ಚಾಗಿದೆ."

"ಇಲ್ಲಿ ನೆರೆದಿರುವ ಹಿರಿಯರಿಗೆ ಉಪದೇಶ ಮಾಡುವ ಜ್ಞಾನ ಸಂಪತ್ತು ನನ್ನಲಿಲ್ಲ. ನಾನವರ ಆಶೀರ್ವಾದವನ್ನು ಬೇಡುತ್ತೇನೆ. ಯುವಕರಿಗೆ ನನ್ನ ಸಂದೇಶವಿಷ್ಟೆ. ಹೆತ್ತು, ಹೊತ್ತು ಸಾಕಿ ಸಲಹಿದ ಮಾತೆಯಷ್ಟೇ ನಮಗೆ ಜನ್ಮವಿತ್ತು ಆಶ್ರಯ ನೀಡಿದ ಮಾತೃಭೂಮಿಯು ಪ್ರಿಯವಾದುದು ಮತ್ತು ಪೂಜನೀಯವಾದುದು. ಮಾತೃಭೂಮಿಯ ಕಷ್ಟವೇ ನಮ್ಮಕಷ್ಟ; ಮಾತೃಭೂಮಿಯ ಅಭ್ಯುದಯವೇ ನಮ್ಮ ಅಭ್ಯುದಯ; ಮಾತೃಭೂಮಿಯ ರಕ್ಷಣೆಯೇ ನಮ್ಮ ರಕ್ಷಣೆ. ಯುವಕರಲ್ಲಿ ಹೊಸ ಆದರ್ಶ, ಹೊಸ ಸ್ಫೂರ್ತಿ ಮೂಡಬೇಕು. ರಂಗಭೂಮಿಯ ಶೃಂಗಾರ ಗೀತೆಗಳ ಜೊತೆಗೆ ಯುದ್ಧರಂಗದ ರಣಗೀತೆಗಳಿಂದಲೂ ಅವರು ಸ್ಫೂರ್ತಿಯನ್ನು ಪಡೆಯಬೇಕು. ಸೈನಿಕರ, ವೈಮಾನಿಕರ, ನಾವಿಕರ ಶಿಸ್ತು ಸಾಹಸಗಳು ಅವರಲ್ಲಿ ಉದಯವಾಗಬೇಕು.

"ಮಾನವರಾದವರು ಎಂದಾರೊಂದು ದಿನ ಸಾಯಲೇ ಬೇಕು. ಮೋಟಾರು, ರೈಲು ಅಥವಾ ವಿಮಾನಗಳ ಅಪಘಾತಗಳಿಗೊಳಗಾಗಿ ಸಾಯುವುದಕ್ಕಿಂತ, ರೋಗ ರುಜಿನಗಳಿಂದ ನರಳಿ ಸಾಯುವುದಕ್ಕಿಂತ, ನೂರಾರು ಕೋಟಲೆಗಳಿಂದ ಕೊರಗಿ ಸಾಯುವುದಕ್ಕಿಂತ, ಮುಪ್ಪಾಗಿ ಸೊರಗಿ ಸಾಯುವುದಕ್ಕಿಂತ, ವೀರನಾಗಿ ರಣಭೂಮಿಯಲ್ಲಿ ವೀರ ಸ್ವರ್ಗವನ್ನೇರುವುದು ಮೇಲು. ನೂರಾರು ಜಾತಿಗಳನ್ನು ನಿರ್ಮಿಸಿ, ಸಮಾಜವನ್ನು  ನುಚ್ಚುನೂರಾಗಿ ಮಾಡಿದ, ಹಾಳು ಧರ್ಮದ ಬದಲು, ರಾಷ್ಟ್ರ ಭಕ್ತಿಯ, ಮಾನವೀಯತೆಯ, ಸತ್ಯಸಂಧತೆಯ, ಸರಿಸಮಾನತೆಯ ಹೊಸ ದರ್ಮ ಉದಯವಾಗಬೇಕು. ಅರ್ಥವಿಲ್ಲದ ಆಚಾರಗಳನ್ನೂ, ಮೂಢನಂಬಿಕೆಗಳನ್ನೂ, ಬದಿಗೊತ್ತಿ ವಿಜ್ಞಾನ ಮತ್ತು ಆತ್ಮ ಜ್ಞಾನಗಳ ಹೆದ್ದಾರಿಯಲ್ಲಿ ಮುನ್ನಡೆಯಿರಿ.

"ನಮ್ಮಲ್ಲಿ ಕೆಲವರು ತಲೆ ಕೆಟ್ಟವರಂತೆ ವರ್ತಿಸುತ್ತಾರೆ. ದೇಶದ ಗಡಿ ರಕ್ಷಣೆಗಾಗಿ ದುಡಿಯುವ ಬದಲು ರಾಜ್ಯಗಳ ಗಡಿಗಾಗಿ ಬಡಿದಾಡುತ್ತಾರೆ. ಸಂಪತ್ತನ್ನು ವೃದ್ಧಿಸುವ ಬದಲು ಇದ್ದ ಸಂಪತ್ತನ್ನು ಚಳವಳಿ ಮಾಡಿ ಧ್ವಂಸ ಪಡಿಸುತ್ತಾರೆ. ಬಡವರ ಉದ್ಧಾರಕ್ಕಾಗಿ, ಭ್ರಷ್ಟಾಚಾರದ ನಿರ್ಮೂಲಕ್ಕಾಗಿ ಹೋರಾಡುವ ಬದಲು, ಕ್ಷುಲಕ ಕಾರಣಗಳಿಗಾಗಿ ಉಪವಾಸ ಮುಷ್ಕರಗಳಿಂದ ಗೊಂದಲವೆಬ್ಬಿಸುತ್ತಾರೆ. ವಿಭೂತಿ ಪುರುಷ ಗಾಂಧಿ ಹುಟ್ಟಿದ ಈ ನಾಡಿನಲ್ಲಿ ಆಂತರಿಕ  ಸಮಸ್ಯೆಗಳ ಇತ್ಯರ್ಥಕ್ಕಾಗಿ ವಿಧ್ವಂಸಕ ಕೃತ್ಯಗಳಲ್ಲಿ ತೊಡಗುವುದು ನಾಚಿಗೇಡು. ಹೇಡಿಗಳಂತೆ ಅರ್ಥವಿಲ್ಲದ ಗೊಂದಲವೆಬ್ಬಿಸುವುದು ದೇಶದ್ರೋಹ. ಯುವಕರು ರಾಷ್ಟ್ರ ಪ್ರೇಮಿಗಳಾಗಿ ನವಯುಗದ ನವನಾಯಕರಾಗಬೇಕೆಂಬುದೇ ನನ್ನ ಹಾರೈಕೆ."

ಜಯಸಿಂಹನಿಗೆ ಲಭಿಸಿದ್ದ ವೈಭವಯುತವಾದ ಸ್ವಾಗತವನ್ನು ನೋಡಿ ಶಂಭುವೂ ದಾಮೋದರನೂ ಅಚ್ಚರಿಗೊಂಡರು. ಅವರಿಬ್ಬರೂ ಉನ್ನತ ಅಧಿಕಾರದಲ್ಲಿದ್ದರೂ, ಅವರಿಗೆ ಎಂದೂ ಲಭಿಸದ ಸ್ವಾಗತವು ಯಕಶ್ಚಿತ್ ಹುಡುಗನೊಬ್ಬನಿಗೆ ದೊರಕಿದ್ದು ಅವರಿಬ್ಬರ ಅಸೂಯೆಯನ್ನು ಕೆರಳಿಸಿತು. ಜಯಸಿಂಹನು ಎಂದಾದರೊಂದು ದಿನ ತಮಗೆ ಕಂಟಕಪ್ರಾಯನಾಗಬಹುದೆಂದು ಅವರು ಕಳವಳಕ್ಕೀಡಾದರು. ಜಯಸಿಂಹನು ರಾಜಧಾನಿಯಲ್ಲಿ ಕೆಲವು ದಿನಗಳು ತಂಗಿದ್ದು, ಮಿತ್ರರನ್ನೂ, ಹಿತೈಷಿಗಳನ್ನೂ, ಬಂಧುಬಾಂಧವರನ್ನೂ ನೋಡಿ, ಅನಂತರ ತಾಯಿಯೊಡನೆ ಜಿತೇಂದ್ರಪುರಕ್ಕೆ ಹೋದನು.

* * * *

## ೧೫. ಭ್ರಷ್ಟಾಚಾರದ ತಾಂಡವನೃತ್ಯ

ಹೇಮಾವತಿ ರಾಜ್ಯದಲ್ಲಿ ಶಂಭು ದಾಮೋದರರ ಆಳ್ವಿಕೆ ಪ್ರಾರಂಭವಾಗಿ ನಾಲ್ಕು ವರ್ಷಗಳು ಸಂದು ಹೋಗಿದ್ದವು. ಅಧಿಕಾರ ಮತ್ತು ಲಂಚದ ರುಚಿಯನ್ನು ಕಂಡಿದ್ದ ಅವರು ತಮ್ಮ ಅಧಿಕಾರದ ಕೋಟೆಯನ್ನು ಭದ್ರಪಡಿಸುವುದಕ್ಕಾಗಿ, ಹಲವು ಮುಂಜಾಗ್ರತೆಯ ಕ್ರಮಗಳನ್ನು ಕೈಗೊಂಡಿದ್ದರು. ಸಮಾಜದಲ್ಲಿ ಪ್ರಭಾವ ಶಾಲಿಗಳೆನಿಸಿಕೊಂಡವರಲ್ಲಿ ಹಲವರನ್ನು ನಾನಾ ಕುಟಿಲೋಪಾಯಗಳಿಂದ ತಮ್ಮ ಕೂಟಕ್ಕೆ ಸೇರಿಸಿಕೊಂಡಿದ್ದರು. ಕೆಲವು ಪ್ರಮುಖ ವೃತ್ತಪತ್ರಿಕೆಗಳನ್ನು ತಮ್ಮ ಕಡೆಗೆ ಒಲಿಸಿಕೊಂಡಿದ್ದರು. ಅವರ ದುರಾಡಳಿತದಿಂದ ನೊಂದು, ಕಂಗೆಟ್ಟು, ನಿರಾಶೆಯ ತುಟ್ಟ ತುದಿಯನ್ನು ಮುಟ್ಟಿದ್ದ ಜನ ಸಾಮಾನ್ಯರು ಅವರ ಆಡಳಿತ ಮುಗಿದರೆ ಸಾಕೆಂದು ಭಗವಂತನಲ್ಲಿ ಮೊರೆ ಇಡುತ್ತಿದ್ದರು. ಆದರೆ ಶಂಭು ದಾಮೋದರರ ಅನುಚರರಾಗಿದ್ದ ಪ್ರಭಾವಶಾಲಿಗಳೂ, ಅವರ ಕೃಪಾಶ್ರಯಕ್ಕೆ ಒಳಗಾಗಿದ್ದ ಪತ್ರಿಕೆಯವರೂ ಅವರ ಆಡಳಿತವನ್ನು ಸದಾ ಹೊಗಳುತ್ತಿದ್ದರು.

ರಾಜ್ಯದ ಕಾಂಗ್ರೆಸ್ಸಿನಲ್ಲಿ ನಿರ್ದಿಷ್ಟ ಎರಡು ಗುಂಪುಗಳಾಗಿದ್ದುವು. ಆಳುವ ಗುಂಪಿಗೆ ಶಂಭು ದಾಮೋದರರು ಮುಖಂಡರಾಗಿದ್ದರೆ, ವಿರೋಧ ಗುಂಪಿಗೆ ಭಾರ್ಗವದಾಸರೂ, ಅಮರಚಂದರೂ ಮುಖಂಡರಾಗಿದ್ದರು. ಆಳುವ ಗುಂಪಿನವರು ವಿರೋಧ ಗುಂಪನ್ನು ತುಳಿಯಲು ತಮ್ಮ ಸರ್ವಶಕ್ತಿಯನ್ನೂ ಉಪಯೋಗಿಸುತ್ತಿದ್ದರು. ವಿರೋಧ ಗುಂಪಿನವರು ಆಳುವ ಗುಂಪನ್ನು ಹಳಿದು, ಜರಿದು, ತಮ್ಮ ಸೇಡನ್ನು ತೀರಿಸಿಕೊಳ್ಳುತ್ತಿದ್ದರು. ಆಳುವ ಗುಂಪಿಗೂ ಆಳಿಸಿಕೊಳ್ಳುವ ಗುಂಪಿಗೂ ಬಾಂಧವ್ಯ ಹೇಗಿತ್ತೆಂಬುದು ಪ್ರಭಾವಶಾಲಿಗಳಾಗಿದ್ದ ಇಬ್ಬರು ಕಾಂಗ್ರೆಸ್ ಕಾರ್ಯಕರ್ತರ ಸಂಭಾಷಣೆಯಿಂದ ಗೊತ್ತಾಗುತ್ತದೆ. ಒಬ್ಬನು ಶಂಭು ದಾಮೋದರರ ಗುಂಪಿಗೆ ಸೇರಿದ್ದ ನಂದೀಶ್; ಇನ್ನೊಬ್ಬನು ಭಾರ್ಗವದಾಸರ ಭಕ್ತ ದಿನಮಣಿ, ಅವರಿಬ್ಬರೂ ಬಾಲ್ಯ ಸ್ನೇಹಿತರಾಗಿದ್ದರು. ಆದರೆ ಇತ್ತೀಚಿನ ರಾಜಕಾರಣ ದಿಂದ ಅವರ ಸ್ನೇಹ ಮೊದಲಿನಂತೆ ಉಳಿದಿರಲಿಲ್ಲ. ಅಂದು ಆಕಸ್ಮಿಕವಾಗಿ ರಾಜಧಾನಿಯ ಒಂದು ಭೋಜನ ಮಂದಿರದಲ್ಲಿ ಅವರಿಬ್ಬರ ಸಮಾಗಮವಾಗಿತ್ತು.

ಪರಸ್ಪರ ಕ್ಷೇಮ ಸಮಾಚಾರ ಮುಗಿದ ಮೇಲೆ, ದಿನಮಣಿಯು ಕೊಂಕು ನುಡಿಗಳಿಂದ ನಂದೀಶನನ್ನು ಕುರಿತು, "ಏನಯ್ಯಾ ನಂದೀಶ್, ನಿನ್ನ ರಾಜ್ಯಭಾರ ಹೇಗೆ ನಡೆದಿದೆ?" ಎಂದು ಪ್ರಶ್ನಿಸಿದನು.

"ಮಣಿ, ನಾನು ಮಂತ್ರಿಯೂ ಅಲ್ಲ; ಉಪಮಂತ್ರಿಯೂ ಅಲ್ಲ; ಶಾಸಕನೂ ಸಹ ಅಲ್ಲ. ನನ್ನ ರಾಜ್ಯಭಾರ ಎಲ್ಲಿ ಬಂತು.?"

"ನೀನು ಆಳುವ ಗುಂಪಿಗೆ ಸೇರಿದವನಲ್ಲವೇನಯ್ಯ? ಆದ್ದರಿಂದ ರಾಜ್ಯಭಾರ ನಿನ್ನದೇ ಆಯಿತು."

"ನೀನು ಆಳುವ ಗುಂಪಿಗೆ ಸೇರಿದವನು. ನೀನೇನು ಕಾಂಗ್ರೆಸ್ ಬಿಟ್ಟಿದ್ದೀಯೇನು?"

"ನಾನು ಕಾಂಗ್ರೆಸ್ ಬಿಟ್ಟಿಲ್ಲ. ಆದರೆ ಆಳುವ ಗುಂಪಿಗೆ ಸೇರಿದವನಲ್ಲ. ಆಳಿಸಿಕೊಳ್ಳುವ ಗುಂಪಿಗೆ ಸೇರಿದವನು. ನೀನು ಆಳುವ ಗುಂಪಿಗೆ ಸೇರಿದವನಾದ್ದರಿಂದ ಸರ್ಕಾರ ನಿನ್ನದು"

"ನೀನು ಹೇಳುವುದು ನನಗರ್ಥವಾಗುವುದಿಲ್ಲ. ಕಾಂಗ್ರೆಸ್ ರಾಜ್ಯಭಾರ ಹಿಂದೆ ನಡೆಯುತ್ತಿದ್ದಂತೆಯೇ ಇಂದೂ ನಡೆಯುತ್ತಾ ಇದೆ. ನಿನ್ನ ದುರ್ಗಾದಾಸರ ಕಾಲದ ಆಡಳಿತವೇ ಇನ್ನೂ ಮುಂದುವರಿಯುತ್ತಾ ಇದೆ."

"ಗುಂಪು ರಾಜಕಾರಣದ ಪಿತ್ತ ನಿನ್ನ ನೆತ್ತಿಗೇರಿರುವಂತೆ ತೋರುತ್ತದೆ."

"ಆ ಪಿತ್ತ ನಿನ್ನ ನೆತ್ತಿಗೇರಿರುವುದರಿಂದಲೇ, ನೀನು ನನ್ನನ್ನು ಅನಾವಶ್ಯಕವಾಗಿ ಕೆಣಕುತ್ತಿದ್ದೀಯ."

"ದುರ್ಗಾದಾಸರ ಆಳ್ವಿಕೆ ಎಲ್ಲಿ? ನಿನ್ನ ಭಂಡ ಮುಖಂಡರ ಭಂಡ ಆಳ್ವಿಕೆ ಎಲ್ಲಿ? ಆನೆಗೂ ಆಡಿಗೂ ಎಲ್ಲಿಯ ಹೋಲಿಕೆ? ಮೆಚ್ಚಿದವರಿಗೆ ಕೋಡಗ ಮುದ್ದು ಎಂಬಂತೆ ನೀನು ಶಂಭು ದಾಮೋದರರರನ್ನು ಮೆಚ್ಚಿದವನು. ಅವರು ಹೇಳಿದ್ದೆಲ್ಲಾ ನಿನಗೆ ವೇದ; ಅವರು ಮಾಡಿದ್ದೆಲ್ಲಾ ನಿನಗೆ ಚಂದ. ನಿನ್ನಂತಹವರು ಅವರ ಎಂಜಲಿನಾಸೆಗಾಗಿ ಅವರ ಜೊತೆ ಸೇರಿ ಜನ ಹಿತವನ್ನು ಅಲ್ಲಗಳೆದಿದ್ದೀರಿ."

"ಇರಲಿ ಮಣಿ, ನಾನು ಎಂಜಲಿನಾಸೆಗಾಗಿ ಅವರ ಜೊತೆ ಸೇರಿದವನು! ನೀನು ಅದ್ವಿತೀಯ ದೇಶಭಕ್ತ! ಪರವಾಯಿಲ್ಲ. ಶಂಭು ದಾಮೋದರರು ಮಾಡಬಾರದ್ದನ್ನು ಏನು ಮಾಡಿದ್ದಾರೆ? ಅದನ್ನಾದರೂ ಹೇಳು."

"ಶಂಭು ದಾಮೋದರರು, ಮಾಡಿರುವ ಅನ್ಯಾಯ ಅಕ್ರಮಗಳನ್ನು ಹೇಳಬೇಕಾದರೆ ಒಂದು ದಿನವಾದರೂ ಸಾಲದು."

"ಕೆಲವನ್ನಾದರೂ ಹೇಳಪ್ಪಾ."

"ನಿನಗೇನು ಗೊತ್ತಿಲ್ಲವೇನು?"

"ನನಗೆ ಗೊತ್ತಿಲ್ಲ. ನನ್ನ ಅಭಿಪ್ರಾಯದಲ್ಲಿ ರಾಜ್ಯದ ಆಡಳಿತ ಹಿಂದೆ ನಡೆಯುತ್ತಿದ್ದಂತೆಯೇ ಇಂದೂ ನಡೆಯುತ್ತಾ ಇದೆ. ಗೊತ್ತಿದ್ದವನು ಒಂದೊಂದಾಗಿ ಹೇಳು"

"ಹೇಳುತ್ತೇನೆ ಕೇಳು. ಶಂಭು ದಾಮೋದರರ ಆಳ್ವಿಕೆಯಲ್ಲಿ ಇಂದು ಈ ರಾಜ್ಯದಲ್ಲಿ ಭ್ರಷ್ಟಾಚಾರದ ತಾಂಡವನೃತ್ಯ ನಡೆಯುತ್ತಾ ಇದೆ. ಅವರೇ ಭ್ರಷ್ಟರಾಗಿರುವುದರಿಂದ ಭ್ರಷ್ಟಾಚಾರವು ಆಡಳಿತವನ್ನೂ, ಸಮಾಜವನ್ನೂ ವ್ಯಾಪಿಸಿದೆ. ಲಂಚ ದೇವತೆಗೆ ಪನಿವಾರವಿಲ್ಲದೆ ಯಾವ ಕಾರ್ಯವೂ ನಡೆಯವಂತಿಲ್ಲ. ಕಂಟ್ರಾಕ್ಟು ಪರ್ಮಿಟ್ಟಿಗೆ ಲಂಚ; ನೌಕರಿ ಬಡ್ತಿಗೆ ಲಂಚ; ವರ್ಗಾವರ್ಗಿಗೆ ಲಂಚ; ಆಮದು ರಫ್ತಿಗೆ ಲಂಚ; ಭೂಮಿ ಪಡೆಯಲು ಲಂಚ; ಸಾಲ ಪಡೆಯಲು ಲಂಚ; ಆಸ್ಪತ್ರೆಯಲ್ಲಿ ಲಂಚ, ಆಫೀಸಿನಲ್ಲಿ

ಲಂಚ; ಅಲ್ಲಿಯೂ ಲಂಚ; ಇಲ್ಲಿಯೂ ಲಂಚ; ಎಲ್ಲೆಲ್ಲೂ ಲಂಚ. ಲಂಚ ದೇವತೆ ಒಲಿದರೆ ಬಡವನಾದವನು ಶ್ರೀಮಂತನಾಗುತ್ತಾನೆ. ಲಂಚ ದೇವತೆ ಮುನಿದರೆ ಶ್ರೀಮಂತನಾದವನು ಬಡವನಾಗುತ್ತಾನೆ."

"ಇಷ್ಟೆಯೋ ಇನ್ನೂ ಇದೆಯೋ?"

"ಇನ್ನೂ ಇದೆ ಕೇಳು. ಶಂಭು ದಾಮೋದರರು ರಾಜ್ಯದ ಬುಡವನ್ನು ಭದ್ರಮಾಡುವ ಬದಲು, ತಮ್ಮ ಬುಡವನ್ನು ಭದ್ರಮಾಡಿಕೊಳ್ಳುತ್ತಿದ್ದಾರೆ. ತಮ್ಮ ಶಕ್ತಿ ಸಾಮರ್ಥ್ಯಗಳನ್ನು ರಾಜ್ಯದ ಅಭ್ಯುದಯಕ್ಕಾಗಿ ವಿನಿಯೋಗಿಸುವ ಬದಲು, ಅವರಿಗಾಗದ ಕಾಂಗ್ರೆಸ್ಸಿಗರನ್ನು ತುಳಿಯಲು ಉಪಯೋಗಿಸುತ್ತಿದ್ದಾರೆ. ಕ್ರಿಮಿನಲ್ ಕೈದಿಗಳಾಗಿ ಸದಾ ಸೆರೆಮನೆಯಲ್ಲಿರಬೇಕಾಗಿದ್ದ ಕೆಲವರು, ಶಂಭು ದಾಮೋದರರ ಬೆಂಬಲದಿಂದ, ಇಂದು ಈ ರಾಜ್ಯದಲ್ಲಿ ರಾಜಕೀಯ ಧುರಂಧರರಾಗಿ ಮೆರೆಯುತ್ತಿದ್ದಾರೆ. ಕೆಲವು ಅಧಿಕಾರಿಗಳು, ಹಗಲುಗಳ್ಳರಂತೆ ಬಹಿರಂಗ ಲಂಚವನ್ನು ತಿನ್ನುತ್ತಿದ್ದಾರೆ. ಲಂಚದಿಂದ ಕೊಬ್ಬಿರುವ ಆ ಹಗಲುಗಳ್ಳರನ್ನು ಜನಸಾಮಾನ್ಯರು ಮಾತನಾಡಿಸುವಂತೆಯೇ ಇಲ್ಲ. ಕೆಲವು ಅಧಿಕಾರಿಗಳು, ತಮ್ಮ ಬಳಿಗೆ ನ್ಯಾಯವಾದ ಕೆಲಸಕಾರ್ಯಗಳ ಸಲುವಾಗಿ ಜನರು ಬಂದಾಗ, ತಮ್ಮ ಸ್ವಂತ ಬೊಕ್ಕಸದಿಂದ ಭಿಕ್ಷೆ ಕೊಡುವವರಂತೆ ಅಹಂಕಾರದಿಂದ ವರ್ತಿಸುತ್ತಾರೆ. ಕೈ ತುಂಬ ಸಂಬಳ ಬರುವ ಕೆಲವರು ಅಧಿಕಾರಿಗಳಿಗೆ ಬಡವರ ಮೇಲೆ ಕರುಣೆಯೇ ಇಲ್ಲ. ಸಾಕೋ, ಇನ್ನೂ ಹೇಳ್ಬೇಕೋ?"

"ಅಯ್ಯಾ ಮಣಿ, ಜಗತ್ತಿನ ಇತಿಹಾಸದಲ್ಲಿ ಭ್ರಷ್ಟಚಾರವಿಲ್ಲದ ಕಾಲವಾಗಲೀ, ದೇಶವಾಗಲೀ ಎಂದು ಇರಲಿಲ್ಲ. ಕೆಲವು ಪರದೇಶಗಳಲ್ಲಿ ಇಲ್ಲಿರುವುದಕ್ಕಿಂತ ಹೆಚ್ಚಿನ ಭ್ರಷ್ಟಚಾರವಿಲ್ಲವೇನು? ನಿಮ್ಮ ದುರ್ಗಾದಾಸರ ಕಾಲದಲ್ಲಿ ಭ್ರಷ್ಟಾಚಾರವಿರಲಿಲ್ಲವೇನು? ಜನರೂ, ಅಧಿಕಾರಿಗಳೂ ಭ್ರಷ್ಟರಾಗಿರುವಾಗ, ಮಂತ್ರಿಗಳೇನು ಮಾಡುತ್ತಾರೆ? ಅಪ್ರಮಾಣಿಕತೆ ನಮಗೆ ರಕ್ತಗತವಾಗಿ ಬಂದಿದ್ದು. ಅಧಿಕಾರಿಗಳಿಗೆ ಲಂಚಕೋರತನ ಪರಂಪರೆಯಿಂದ ಬಂದಿದ್ದು. ಯಾವ ಕಾಲದಲ್ಲಿ ರಾಜಕಾರಣಿಗಳೆಲ್ಲರೂ ಸತ್ಯಸಂಧ ರಾಗಿದ್ದರು? ಓಟಿನ ಬೇಟೆಯಲ್ಲಿ ಅರಿಯದ ಜನರನ್ನು, ಅವರಿಗರಿಯದ ರೀತಿಯಲ್ಲಿ, ಒಣ ಭರವಸೆಗಳಿಂದ ಚುನಾವಣೆಯ ಬಲೆಗೆ ಬೀಳಿಸುವುದು ಭ್ರಷ್ಟತನವಲ್ಲವೇನು?"

"ನಂದೀಶ್, ಭ್ರಷ್ಟಚಾರ ಹಿಂದೆಯೂ ಇತ್ತು; ಮುಂದೆಯೂ ಇರುತ್ತದೆ. ಹಿಂದೆ ಲಂಚದ ವ್ಯವಹಾರ ಕದ್ದು ಮುಚ್ಚಿ ನಡೆಯುತ್ತಿತ್ತು. ಇಂದು ಬಹಿರಂಗವಾಗಿ ನಡೆಯುತ್ತಿದೆ. ಹಿಂದೆ ಶೇಕಡಾ ಇಪ್ಪತ್ತೈದು ಜನರು ಲಂಚಕೋರರಾಗಿದ್ದರೆ, ಇಂದು ಎಪ್ಪತ್ತೈದು ಜನರು ಲಂಚಕೋರರಾಗಿದ್ದಾರೆ. ಸರ್ಕಾರದ ಬೊಕ್ಕಸದಿಂದ ಖರ್ಚಾಗುವ ಹಣದಲ್ಲಿ ಅರೆವಾಸಿ ಸಾರ್ವಜನಿಕರ ಪ್ರಯೋಜನಕ್ಕಾಗಿ ಖರ್ಚಾದರೆ, ಅರೆವಾಸಿ ಭ್ರಷ್ಟರ ಕಿಸೆಗೆ ಹೋಗುತ್ತದೆ. ಕೆಲವು ತೆರಿಗೆಗಳಲ್ಲಿ ಅರೆವಾಸಿ ಸರ್ಕಾರದ ಬೊಕ್ಕಸಕ್ಕೆ ಹೋದರೆ, ಅರೆವಾಸಿ ಲಂಚಕೋರರ ಮತ್ತು ಲಾಭಕೋರರ ಬೊಕ್ಕಸಕ್ಕೆ ಸೇರುತ್ತದೆ. ಜನರಿಗೆ ಪೂರ್ಣ ಪ್ರಯೋಜನ ದೊರೆಯಲಿಲ್ಲ; ತೆರಿಗೆ ಕೊಡುವುದು ತಪ್ಪಲಿಲ್ಲ. ಕೆಲವು ಅರೆ

ನಾಗರಿಕರ ದೇಶಗಳಲ್ಲಿ ಭ್ರಷ್ಟಾಚಾರ ಹೆಚ್ಚಿದೆಯೆಂಬ ಕಾರಣದಿಂದ ಇಲ್ಲಿರುವ ಭ್ರಷ್ಟಾಚಾರವನ್ನು ಸಮರ್ಥಿಸುವುದು ಮೂರ್ಖತನ."

"ಈ ಪರಿಸ್ಥಿತಿಗೆ ಇಡೀ ಸಮಾಜವೇ ಹೊಣೆ ; ಮುಖ್ಯವಾಗಿ ಅಧಿಕಾರಿಗಳು ಹೊಣೆ. ಅಧಿಕಾರಿಗಳು ಹಡಗು ನುಂಗಿದರೂ ಜನರು ಬಾಯಿಮುಚ್ಚಿಕೊಂಡಿರುತ್ತಾರೆ. ಮಂತ್ರಿಗಳು ಸಣ್ಣ ತಪ್ಪು ಮಾಡಿದರೂ ಜನರು ಬೊಬ್ಬೆಯಿಡುತ್ತಾರೆ. ಅಧಿಕಾರಿಗಳು ಸರಿಯಾಗಿದ್ದಿದ್ದರೆ ಈ ದೇಶದ ಪರಿಸ್ಥಿತಿಯೇ ಬೇರೆಯಾಗಿರುತ್ತಿತ್ತು. ನಮ್ಮ ಸಮಾಜವನ್ನಾವರಿಸಿರುವ ಹಲವು ವ್ಯಾಧಿಗಳಿಗೆ ಅಧಿಕಾರಿಗಳ ಕರ್ತವ್ಯಲೋಪವೇ ಬಹಳ ಮಟ್ಟಿಗೆ ಕಾರಣ. ಲಕ್ಷಾಂತರ ಜನರೂ, ಸಾವಿರಾರು ಅಧಿಕಾರಿಗಳೂ ಸೇರಿ ಮಾಡಿದ ಪಾಪದ ಹೊಲಸನ್ನು ಕೆಲವರು ಮಂತ್ರಿಗಳು ತೊಳೆಯಲು ಸಾಧ್ಯವೇ?"

"ಮೇಲಿದ್ದವರು ಸರಿಯಾಗಿದ್ದರೆ, ಕೆಳಗಿದ್ದವರು ಸರಿಯಾಗಿರುತ್ತಾರೆ. ಮಂತ್ರಿಗಳು ಆದರ್ಶವಂತರಾಗಿದ್ದರೆ ಅಧಿಕಾರಿಗಳು ಅಂಜಿ ನಡೆಯುತ್ತಾರೆ."

"ನಿನ್ನ ಈ ಆಪಾದನೆಗಳು ಹೊಸವೇನೂ ಅಲ್ಲ. ಅಧಿಕಾರವಿಲ್ಲದವರು ಅಧಿಕಾರವಿದ್ದವರ ಮೇಲೆ ಯಾವಾಗಲೂ ಮಾಡುತ್ತಿರುವ ಸರ್ವೇ ಸಾಮಾನ್ಯ ಆಪಾದನೆಗಳು. ನಿನ್ನ ಗುಂಪು ಅಧಿಕಾರದಲ್ಲಿದ್ದರೆ ನಿನ್ನ ಮಾತಿನಧಾಟಿಯೇ ಬೇರೆಯಾಗಿರುತ್ತಿತ್ತು. ನೀನು ಮೊದಲು ಸುರು ಮಾಡಿದ್ದನ್ನು ನೋಡಿದರೆ ಏನೋ ಗುರುತರವಾದ ಆಪಾದನೆಗಳಿವೆಯೆಂದು ತಿಳಿದಿದ್ದೆ. ಇಷ್ಟೇ ತಾನೇ, ನೀನು ಹೇಳುವುದು.?"

"ನಿಮ್ಮ ದಾಮೋದರನ ಮಗನೂ, ಶಂಭುವಿನ ಭಾವನೂ, ಮಹೋದರನೂ, ಆನಂದನೂ ಪಾಲುಗಾರಿಕೆಯಲ್ಲಿ, 'ಹೈರಾವಣ ಕಂಪೆನಿ' ಎಂಬ ಹೆಸರಿನಿಂದ ಕಂಟ್ರಾಕ್ಟು ಮಾಡುತ್ತಿರುವುದು ನಿನಗೆ ಗೊತ್ತಿಲ್ಲವೇನು? ಈ ಕಂಪನಿಗೆ ಸರ್ಕಾರದವರು ಲಾಭದಾಯಕ ಕಂಟ್ರಾಕ್ಟುಗಳನ್ನು ಕೊಟ್ಟಿಲ್ಲವೇನು? ದಾಮೋದರನ ಮಗನೂ, ಪಟವಾರನೂ 'ಪಟವಾರಸರ್ವಿಸ್' ಎಂಬ ಹೆಸರಿನಲ್ಲಿ ಬಸ್ ಸರ್ವಿಸ್ ನಡೆಸುತ್ತಾ ಇಲ್ಲವೇನು? ದಾಮೋದರನು ತನ್ನ ಅಧಿಕಾರವನ್ನುಯೋಗಿಸಿಕೊಂಡು ಪಟವಾರ ಸರ್ವಿಸಿನವರಿಗೆ ಲಾಭದಾಯಕ ಬಸ್ ಪರ್ಮಿಟ್ಟುಗಳನ್ನು ಕೊಡಿಸಿಲ್ಲವೇನು? ಮಕ್ಕಳ ಆಟಕ್ಕಾಗಿ ಮೀಸಲಾಗಿಟ್ಟಿದ್ದ ಸೈಟನ್ನು ಮಹೋದರನಿಗೆ ಸಿನಿಮಾ ಮಂದಿರ ಕಟ್ಟುವುದಕ್ಕಾಗಿ ಕೊಟ್ಟಿಲ್ಲವೇನು? ರಾಜಕಾರಣಕ್ಕೆಂದು ಶಂಭು ದಾಮೋದರರು ಸರ್ಕಾರದ ಹಂಗಿಗೊಳಗಾಗಿರುವ ಪರ್ಮಿಟ್, ಕಂಟ್ರಾಕ್ಟ್ ಮತ್ತು ಲೈಸನ್ಸ್ ವಾಲಾಗಳಿಂದ ಲಕ್ಷಾಂತರ ರೂಪಾಯಿಗಳನ್ನು ಸಂಗ್ರಹಿಸಿ, ತಮ್ಮ ಸ್ವಂತ ಬೊಕ್ಕಸಕ್ಕೆ ಸೇರಿಸಿಲ್ಲವೇನು? ಶಂಭು ದಾಮೋದರರಿಂದ ಏನಾದರೂ ಕೆಲಸವಾಗಬೇಕಾಗಿದ್ದಲ್ಲಿ, ಅವರ ಲಂಚದ ದಲ್ಲಾಳಿಗಳನ್ನು ಹಿಡಿದರೆ ಮಾತ್ರ ಕೆಲಸವಾಗುತ್ತದೆಯೆಂಬುದು ನಿನಗೆ ಗೊತ್ತಿಲ್ಲವೇನು? ಶಂಭು ದಾಮೋದರರ ಬಂಧು ಬಾಂಧವರೂ, ಬೆಂಬಲಿಗರೂ ಕೊಳ್ಳೆ ಹೊಡೆಯುತ್ತಿರುವುದು ನಿನಗೆ ಗೊತ್ತಾಗಿಲ್ಲವೇನು? ಶಂಭು ದಾಮೋದರರ ಹತ್ತಿರದ ಬಂಧುಗಳು ಮುಂಬರುವ

ಚುನಾವಣೆಗೆ ಕಾಂಗ್ರೆಸ್ ಟಿಕೆಟ್ ಕೊಡಿಸುವುದಾಗಿ ಸಾವಿರಾರು ರೂಪಾಯಿಗಳ ಲಂಚ ಹೊಡೆದಿಲ್ಲವೇನು? ಸಾಕೋ, ಇನ್ನೂ ಹೇಳಬೇಕೋ?"

"ಅಲ್ಲಯ್ಯಾ, ಜನಗಳು ಹೇಳುವ ಕಾಗಿ ಕತೆ, ಗುಬ್ಬಿ ಕತೆಗಳನ್ನು ಕೇಳಿ ನೀನೂ ಆ ಕಥೆಗಳನ್ನು ಹೇಳ್ತೀಯಲ್ಲಯ್ಯ! ಏನ್ ಹೇಳ್ಬೇಕು! ನಮ್ಮ ಜನ ಇಲಿ ಹೋದ್ರೆ ಹುಲೀನೇ ಹೋಯ್ತು ಅಂತಾರೆ. ಅಧಿಕಾರದಲ್ಲಿದ್ದವರ ಮೇಲೆ ಅಪದ್ದ ನುಡಿಯುವುದೆಂದರೆ ಕೆಲವರಿಗೆ ಬಹಳ ಹಿತಕರವಾದ ಕೆಲಸ. ಎಲ್ಲರ ಮೇಲೂ ಏನಾದರೂ ಹೇಳುತ್ತಲೇ ಇರುತ್ತಾರೆ. ನಿನ್ನಂತಹ ವಿದ್ಯಾವಂತರು ಅವನ್ನೆಲ್ಲಾ ನಂಬಬಾರದು. ನೀ ಹೇಳಿದ್ದೆಲ್ಲಾ ನಿಜವಾಗಿದ್ದರೆ ವಿರೋಧ ಪಕ್ಷಗಳು ಇದುವರೆಗೆ ಸುಮ್ಮನೆ ಇರುತ್ತಿದ್ವೇ?"

"ಅಯ್ಯೋ, ನಿನ್ನ ವಿರೋಧ ಪಕ್ಷಗಳೇ! ಸರಿಯಾಗಿ ಇದ್ದಿದ್ದರೆ ಈ ರಾಜ್ಯ ಹೀಗ್ಯಾಕೆ ಇರ್ತಿತ್ತಯ್ಯಾ. ವಿರೋಧ ಪಕ್ಷಗಳಲ್ಲೂ ಒಳ್ಳೆಯವರು ಇದ್ದಾರೆ. ಆದರೆ ಕೆಲವರು ಮಾತ್ರ ಶಂಭು ದಾಮೋದರರಿಗೆ ಯಾವ ರೀತಿಯಲ್ಲೂ ಕಡಿಮೆಯಿಲ್ಲ. ವಿರೋಧ ಪಕ್ಷಗಳ ದೌರ್ಬಲ್ಯವೇ ಶಂಭು ದಾಮೋದರರ ಪ್ರಾಬಲ್ಯಕ್ಕೆ ಪ್ರಬಲ ಕಾರಣ."

"ಏನಯ್ಯಾ ನೀನು ಹೇಳೋದು? ವಿರೋಧ ಪಕ್ಷದ ಹಿಡಿಂಬ, ಸೈಂಧವ, ಸುರೇಂದ್ರ, ಅಮರೇಂದ್ರ ಇವರುಗಳು ಸಾಮಾನ್ಯರೇನಯ್ಯಾ? ನೀನು ಹೇಳಿದ ಕಟ್ಟು ಕತೆಯಲ್ಲಾ ನಿಜವಾಗಿದ್ರೆ, ಅವರು ಸುಮ್ಮನೇ ಇರುತ್ತಿದ್ದರೇನು?"

"ಹೌದು ಹೌದು, ಅವರ ಇತಿಹಾಸ ನನಗೆ ಗೊತ್ತಿದೆ. ಕಳೆದ ಚುನಾವಣೆಯಲ್ಲಿ ನಿಮ್ಮ ಶಂಭು, ತನಗಾಗದ ಕಾಂಗ್ರೆಸ್ ಅಭ್ಯರ್ಥಿ ಜಯತೀರ್ಥನನ್ನು ಸೋಲಿಸುವ ಸಲುವಾಗಿ, ಹಿಡಿಂಬನಿಗೆ ಹತ್ತು ಸಾವಿರ ರೂಪಾಯಿಗಳನ್ನು ಕೊಟ್ಟಿದ್ದ. ಹಿಡಿಂಬನು ಶಂಭುವಿನ ಸಹಾಯದಿಂದ ಚುನಾವಣೆಯಲ್ಲಿ ಕಾಂಗ್ರೆಸ್ ಜಯತೀರ್ಥನನ್ನು ಸೋಲಿಸಿ, ಈಗ ಅಪ್ರತಿಮ ವೀರನಂತೆ ಅಬ್ಬರಿಸುತ್ತಾನೆ. ಬಹಿರಂಗವಾಗಿ ಶಂಭು ದಾಮೋದರರನ್ನು ಕಟುವಾಗಿ ಟೀಕಿಸುತ್ತಾ, ಅಂತರಂಗದಲ್ಲಿ ಅವರ ಕಾಲು ಹಿಡಿಯುತ್ತಾನೆ. ವಿರೋಧ ಪಕ್ಷದ ಸೈಂಧವ, ಸರ್ಕಾರವನ್ನು ನಡುಗಿಸುತ್ತಿರುವನೋ ಎಂಬಂತೆ, ಆರ್ಭಟಿಸುತ್ತಾನೆ. ಅಂತರಂಗದಲ್ಲಿ ತನಗೆ ಬೇಕಾದವರ ಪರವಾಗಿ ಮಂತ್ರಿಗಳ ಮುಂದೆ ಹಲ್ಕಿರಿದು ಕೈ ಜೋಡಿಸುತ್ತಾನೆ. ಇನ್ನೊಂದು ವಿರೋಧ ಪಕ್ಷದ ಸುರೇಂದ್ರ ಶಂಭುವಿನ ಜೊತೆಯಲ್ಲಿ ಸದಾ ಕುಡಿದು ಮತ್ತನಾಗಿರುತ್ತಾನೆ. ಶಂಭುವಿನ ಲಂಚದ ವ್ಯವಹಾರಗಳಿಗೆ ಅವನೊಬ್ಬ ದಲ್ಲಾಳಿ. ಮತ್ತೊಂದು ವಿರೋಧ ಪಕ್ಷದ ಅಮರೇಂದ್ರ ಬಡಬಗ್ಗರ ಹಿತೈಷಿಯಂತೆ ನಟಿಸಿ, ಕೃಷಿಕ ಕಾರ್ಮಿಕರಿಂದ ಚಂದಾ ವಸೂಲು ಮಾಡಿ, ಆ ಹಣದಿಂದ ಕುಡಿದು ತಿಂದು, ಮೆರೆಯುತ್ತಾನೆ. ಅವನು ವಿರೋಧವಾಗಿ ಸರ್ಕಾರವನ್ನು ವಿರೋಧಿಸುತ್ತಾನೆ."

"ಈಗ ದಾರಿಗೆ ಬಂದೆ. ಅಂತೂ ವಿರೋಧ ಪಕ್ಷಗಳಿಗಿಂತ ಕಾಂಗ್ರೆಸ್ಸೇ ಉತ್ತಮ ಅಂದೆಯಲ್ಲ. ಬಹಳ ಸಂತೋಷ. ಇನ್ನೊಂದು ವಿಚಾರ ನಿನಗೆ ಗೊತ್ತಿಲ್ಲವೆಂದು ತೋರುತ್ತದೆ."

"ಅದೇನು?"

"ಮೊನ್ನೆ ನಡೆದ ಮೇಲ್ಮನೆಗಳ ಚುನಾವಣೆಯಲ್ಲಿ, ಲಕ್ಷಾಂತರ ಜನರ ಪ್ರತಿನಿಧಿಗಳೆನಿಸಿಕೊಂಡ, ವಿರೋಧ ಪಕ್ಷಕ್ಕೆ ಸೇರಿದ ಕೆಲವರು, ತಲಾ ಒಂದು ಸಾವಿರ ರೂಪಾಯಿಗಳಂತೆ ಲಂಚ ಹೊಡೆದು, ತಮ್ಮ ಓಟನ್ನು ಮಾರಿದರಂತೆ. ಇದಕ್ಕಿಂತ ದೇಶ ದ್ರೋಹ ಉಂಟೆ?"

"ಅದೇನು ಹೊಸ ವಿಷಯ. ನಮ್ಮ ಪಕ್ಷದ ಕೆಲವರು ಪ್ರತಿನಿಧಿಗಳೂ ಸಹ ಲಂಚಕ್ಕಾಗಿ ತಮ್ಮ ಓಟನ್ನು ಮಾರಿದರಂತೆ, ನೀಚರು ಪ್ರಜಾಪ್ರಭುತ್ವದ ಬದಲು ಲಂಚದ ಪ್ರಭುತ್ವವನ್ನು ಸ್ಥಾಪಿಸುತ್ತಿದ್ದಾರೆ."

"ಮಣೀ, ನೀನು ಬಹಳ ಉತ್ಪ್ರೇಕ್ಷೆ ಮಾಡಿ ಮಾತನಾಡುತ್ತಿದ್ದೀಯ. ಮುಖ್ಯ ಮಂತ್ರಿಗಳ ವಿಚಾರದಲ್ಲಿ ನಿನ್ನ ಭಾವನೆ ತಪ್ಪು. ಅವರಿಗೆ ನಿನ್ನಷ್ಟೇ ಈ ರಾಜ್ಯದ ಅಭ್ಯುದಯದಲ್ಲಿ ಆಸಕ್ತಿಯಿದೆ. ಈಚೆಗೆ ಭ್ರಷ್ಟಾಚಾರದ ನಿರ್ಮೂಲಕ್ಕಾಗಿ ಗಾಂಢೀವನ ಅಧ್ಯಕ್ಷತೆಯಲ್ಲಿ ಒಂದು ಲಂಚ ನಿರೋಧ ಸಮಿತಿಯನ್ನು ನೇಮಿಸಿದ್ದಾರೆ. ಆಡಳಿತದಲ್ಲಿ ದಕ್ಷತೆಯನ್ನು ಹೆಚ್ಚಿಸುವುದಕ್ಕಾಗಿ ಶಂಭುನಾಥರ ಅಧ್ಯಕ್ಷತೆಯಲ್ಲಿ ಒಂದು ಸಲಹಾ ಸಮಿತಿಯನ್ನು ನೇಮಕ ಮಾಡಿದ್ದಾರೆ. ತ್ವರಿತ ಪ್ರಗತಿಗಾಗಿ ಕೆಲವು ಕ್ರ್ಯಾಷ್ ಪ್ರೋಗ್ರಾಂ ಸ್ಯಾಂಕ್ಷನ್ ಮಾಡಿದ್ದಾರೆ."

"ಅವೆಲ್ಲಾ ಜನರ ಕಣ್ಣೊರೆಸುವ ಕ್ರಮಗಳು. ಗಾಂಢೀವ ಲಂಚ ದೇವತೆಯನ್ನು ಆರಾಧಿಸಿ ಆಗರ್ಭ ಶ್ರೀಮಂತನಾದವನು. ಶಂಭು ಲಂಚದ ಅಪರಾವತಾರ. ಅವರಿಬ್ಬರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸುವುದೆಂದರೆ ಕಬ್ಬನ್ನು ನೆಟ್ಟು ನರಿಯನ್ನು ಕಾವಲಿಗಿಟ್ಟಂತೆ. ಕ್ರ್ಯಾಷ್ ಪ್ರೋಗ್ರಾಂ, ಕೆಲವರು ಲಂಚಕೋರ ಅಧಿಕಾರಿಗಳ ಕೈಯಲ್ಲಿ ಕ್ರ್ಯಾಷ್ ಪ್ರೋಗ್ರಾಂ ಆಗಿವೆ."

"ಹಾಗಾದರೆ ಇದುವರೆಗೆ ಈ ರಾಜ್ಯದಲ್ಲಿ ಯಾವ ಪ್ರಗತಿಯೂ ಆಗಿಲ್ಲವೇನು?"

"ಆಗಿಲ್ಲವೆನ್ನುವುದಿಲ್ಲ; ಆಗಿದೆ. ಭ್ರಷ್ಟಾಚಾರವಿಲ್ಲದಿದ್ದರೆ ಇನ್ನೂ ಹೆಚ್ಚಿನ ಪ್ರಗತಿಯಾಗುತ್ತಿತ್ತು. ನಂದೀಶ್, ಕೊನೆಯದಾಗಿ ಒಂದು ಮಾತು ಹೇಳುತ್ತೇನೆ. ಅಧಿಕಾದಲ್ಲಿದ್ದವರ ಎಂಜಲಿಗಾಗಿ ಜನರ ಹಿತವನ್ನು ಮರೆಯುವುದು ಘೋರ ಪಾಪ," ಎಂದು ಮಣಿ ಕಠಿಣವಾಗಿ ನುಡಿದು, ತನ್ನ ಕೊಠಡಿಗೆ ಹೊರಟು ಹೋದನು.

* * * *

# ೧೬. ಮುಂದೇನು ?

ರಾಜ್ಯದಲ್ಲಿ ಕಾಂಗ್ರೆಸ್ಸು ಜನಪ್ರಿಯತೆಯನ್ನು ಕಳೆದುಕೊಂಡಿತ್ತು. ವಿರೋಧ ಪಕ್ಷಗಳು ಜನಪ್ರಿಯತೆಯನ್ನು ಗಳಿಸಿರಲಿಲ್ಲ. ಸಮಾಜ ಘಾತುಕ ಶಕ್ತಿಗಳು ಜನರ ಅತೃಪ್ತಿಯನ್ನುಪಯೋಗಿಸಿಕೊಂಡು, ಅಲ್ಲಲ್ಲಿ ಗುಪ್ತ ಕೂಟಗಳನ್ನು ನಿರ್ಮಿಸಿ, ವಿಧ್ವಂಸಕ ಚಟುವಟಿಕೆಗಳಲ್ಲಿ ತೊಡಗಿದ್ದವು. ಹದಗೆಡುತ್ತಿರುವ ಪರಿಸ್ಥಿತಿಯನ್ನು ಸರಿ ಪಡಿಸದಿದ್ದರೆ ಕೈ ಮಿಂಚಿ ಹೋಗಬಹುದೆಂಬ ಭಯ ಭಾರ್ಗವದಾಸರನ್ನೂ ಅಮರಚಂದರನ್ನೂ ಬಾಧಿಸುತ್ತಿತ್ತು. ಶಂಭು, ದಾಮೋದರರ ವಿರುದ್ಧ ಏನಾದರೂ ಕ್ರಮ ಕೈಗೊಳ್ಳಬೇಕೆಂದು ರಾಜ್ಯದ ಜನರು ಅವರಿಗೆ ಒತ್ತಾಯ ಮಾಡುತ್ತಿದ್ದರು. ಮುಂದೇನು ಮಾಡಬೇಕೆಂದು ಯೋಚಿಸುವ ಸಲುವಾಗಿ, ಭಾರ್ಗವದಾಸರು ಅಮರಚಂದರನ್ನೂ, ಪ್ರತಾಪರಾಜನನ್ನೂ, ಇನ್ನೂ ಕೆಲವರು ಪ್ರಮುಖರನ್ನೂ ತಮ್ಮ ಮನೆಗೆ ಆಹ್ವಾನಿಸಿದ್ದರು. ಜಯಸಿಂಹನೂ ಆಹ್ವಾನಿತನಾಗಿ ಅಲ್ಲಿಗೆ ಬಂದಿದ್ದನು. ಮನೆಗೆ ಬಂದಿದ್ದ ಪ್ರಮುಖರನ್ನು ಕುರಿತು ಭಾರ್ಗವದಾಸರು ಈ ರೀತಿ ನುಡಿದರು.

"ಸ್ನೇಹಿತರೇ, ಅತಿ ಮಹತ್ವದ ಸಮಸ್ಯೆಯ ವಿಚಾರದಲ್ಲಿ ವಿಚಾರ ವಿನಿಮಯ ಮಾಡುವುದಕ್ಕಾಗಿ ನಾವಿಂದು ಸೇರಿದ್ದೇವೆ. ಈ ರಾಜ್ಯದ ರಾಜಕಾರಣವು ಜನಸಾಮಾನ್ಯರ ಕೈತಪ್ಪಿ ಹೋಗಿ, ಲಾಭಕೋರ ವಣಿಕರ ಕೈಗೊಂಬೆಗಳಾಗಿರುವ ಶಂಭು ದಾಮೋದರರ ಕೈ ಸೇರಿ ಹೋಗಿದೆ. ರಾಜಕಾರಣ ವಣಿಕ ವರ್ಗದ ಕೈಸೇರಿದರೆ, ಒಮ್ಮೊಮ್ಮೆ ಅವರ ತಕ್ಕಡಿಯಲ್ಲಿ ಜನಸಾಮಾನ್ಯರ ಹಿತ ಏರುಪೇರಾಗುತ್ತದೆ. ಅದರಲ್ಲೂ ಲಾಭಕೋರ ವಣಿಕರ ಕೈಸೇರಿದರೆ ಅವರು ತಮ್ಮ ಹಿತಕ್ಕಾಗಿ ಜನರ ಹಿತವನ್ನು ಹರಾಜುಮಾಡುತ್ತಾರೆ. ಶಂಭು ದಾಮೋದರರ ಆಳ್ವಿಕೆಯಲ್ಲಿ ಈ ರಾಜ್ಯದ ಜನರು ಕುರಿಗಳಂತಾಗಿದ್ದಾರೆ. ಭ್ರಷ್ಟ ರಾಜಕಾರಣಿಗಳೂ, ಲಂಚಕೋರ ಅಧಿಕಾರಿಗಳೂ, ಲಾಭಕೋರ ವಣಿಕರೂ, ಆ ಕುರಿಗಳ ರಕ್ತವನ್ನು ಹೀರುವ ತೋಳಗಳಂತಾಗಿದ್ದಾರೆ. ಎಷ್ಟು ರಕ್ತವನ್ನು ಹೀರಿದರೂ ಆ ತೋಳಗಳಿಗೆ ತೃಪ್ತಿಯೇ ಇಲ್ಲ. ಇವರ ಹಾವಳಿಯನ್ನು ತಡೆಯಲಾರದೆ ಜನರು ದಿಕ್ಕು ತೋಚದಂತಾಗಿದ್ದಾರೆ.

ಈ ಸನ್ನಿವೇಶವನ್ನು ಉಪಯೋಗಿಕೊಂಡು, ರಾಷ್ಟ್ರಘಾತುಕ ಶಕ್ತಿಗಳು ಅರಾಜಕತೆಯ ಬೀಜವನ್ನು ಬಿತ್ತುತ್ತಿದ್ದಾರೆ. ಅತಿ ತ್ವರೆಯಿಂದ ಅರಾಜಕತೆಯನ್ನು ಮೊಳಕೆಯಲ್ಲೇ ಕಿತ್ತೊಗೆದು, ಜನರ ಮನಸ್ಸಿನಲ್ಲಿ ಶಾಂತಿ, ಸಮಾಧಾನ ಮೂಡುವಂತೆ ಮಾಡಬೇಕಾಗಿದೆ. ಹಾಗಾಗಬೇಕಾದರೆ ಮೊದಲು ಕಾಂಗ್ರೆಸ್ ಪಕ್ಷದ ಶುದ್ಧೀಕರಣ ನಡೆಯಬೇಕು. ರಾಜ್ಯದಲ್ಲಿ

ವಿರೋಧ ಪಕ್ಷಗಳು ಬಲಹೀನವಾಗಿರುವಾಗ, ಆಡಳಿತ ಪಕ್ಷಕ್ಕೆ ಸೇರಿದ ನಾವುಗಳೇ ಆಡಳಿತ ಪಕ್ಷದ ಓರೆಕೋರೆಗಳನ್ನು ಸರಿಪಡಿಸಬೇಕಾಗಿದೆ. ಆ ಬಗ್ಗೆ ಸಲಹೆಯನ್ನು ಪಡೆಯಲು ತಮ್ಮನ್ನು ನಾನಿಂದು ಆಹ್ವಾನಿಸಿದ್ದೇನೆ."

"ನಾನು ಕಾಂಗ್ರೆಸ್ಸನ್ನು ಬಿಟ್ಟವನು. ನನಗೇಕೆ ಕಾಂಗ್ರೆಸ್ ಶುದ್ಧೀಕರಣದ ಗೊಡವೆ ? ಕಾಂಗ್ರೆಸ್ಸನ್ನು ಸರಿಪಡಿಸುವುದು ಯಾರಿಗೂ ಸಾಧ್ಯವಿಲ್ಲ. ಸತ್ಯ, ಅಹಿಂಸೆಗಳ ಕಾಂಗ್ರೆಸ್ ಎಂದೋ ಅಳಿದುಹೋಗಿದೆ. ಅದರ ಅವಶೇಷದಲ್ಲಿ ಇಂದು ಕ್ರಿಮಿಕೀಟಗಳು ಸೇರಿಕೊಂಡಿವೆ. ನಿರ್ಜೀವವಾದುದನ್ನು ಪುನರ್ಜೀವಗೊಳಿಸಲಾಗದು. ತಮಗೆ ದೇಶ ಭಕ್ತಿಯಿದ್ದರೆ, ಜನಹಿತದಲ್ಲಿ ಆಸಕ್ತಿಯಿದ್ದರೆ, ಕಾಂಗ್ರೆಸ್ಸಿಗೆ ರಾಜೀನಾಮೆ ಕೊಟ್ಟು ಹೊರಗೆಬನ್ನಿ," ಎಂದು ಪ್ರತಾಪ್‌ರಾಜ್ ನುಡಿದನು.

"ಪ್ರತಾಪ್, ಅಧಿಕಾರಕ್ಕಾಗಿ ನಾನು ಕಾಂಗ್ರೆಸ್ಸಿಗೆ ಸೇರಿದವನಲ್ಲ. ಮಾತೃ ಭೂಮಿಯ ಬಿಡುಗಡೆಗಾಗಿ ಸೇರಿದ್ದವನು. ನನ್ನ ನರನಾಡಿಗಳೆಲ್ಲವೂ ಕಾಂಗ್ರೆಸ್ಸೇ ಆಗಿದೆ. ಅದನ್ನು ಬಿಡುವುದು ಸಾಧ್ಯವಿಲ್ಲದ ಮಾತು. ಕಾಂಗ್ರೆಸ್ಸು ಶಂಭು ದಾಮೋದರರ ಪಿತ್ರಾರ್ಜಿತ ಆಸ್ತಿಯಲ್ಲ. ಅವರು ಆಕ್ರಮಣಕಾರರು. ಮನೆಯ ಮಾಲೀಕರಾದವರು, ಆಕ್ರಮಣಕಾರರನ್ನು ಓಡಿಸಬೇಕೇ ಹೊರತು ಮನೆಯನ್ನು ಆಕ್ರಮಣಕಾರರಿಗೆ ಒಪ್ಪಿಸಿ, ನೀನು ಓಡಿಹೋದಂತೆ ಓಡಿ ಹೋಗುವುದಕ್ಕಾಗುವುದಿಲ್ಲ"

"ಸ್ವಾಮೀ, ಭಾರ್ಗವದಾಸರೇ, ನಾನು ಓಡಿಹೋಗಲ್ಲ."

"ಮತ್ತೇನು ಮಾಡಿದ್ದೀಯ?"

"ಆಕ್ರಮಣಕಾರರ ಸಮಾಧಿಗಾಗಿ ಸಿದ್ಧತೆಯಲ್ಲಿ ತೊಡಗಿದ್ದೇನೆ."

"ಅದೇನಪ್ಪಾ ಸಿದ್ಧತೆ?"

"ರಾಜ್ಯದ ವಿರೋಧ ಪಕ್ಷಗಳೆಲ್ಲವನ್ನೂ ಸಂಘಟಿಸಿ, ಶಂಭು, ದಾಮೋದರರ, ತಿಥಿ ಮಾಡಬೇಕೆಂದಿರುತ್ತೇನೆ."

"ಎಲ್ಲಿವೆಯಪ್ಪ, ನಿನ್ನ ವಿರೋಧ ಪಕ್ಷಗಳು?"

"ವಿರೋಧ ಪಕ್ಷಗಳಿರುವುದು ತಮಗೆ ಗೊತ್ತಿಲ್ಲವೇನು?"

"ಲೆಕ್ಕಕ್ಕೆ ಇದೆ. ಒಣ ಆರ್ಭಟ ಮಾಡುತ್ತಿವೆ. ಒಂದು ನೀರಿಗೆಳೆದರೆ ಇನ್ನೊಂದು ಏರಿಗೆಳೆಯುತ್ತದೆ. ಈ ರಾಜ್ಯದ ವಿರೋಧ ಪಕ್ಷಗಳನ್ನು ಒಂದೊಂದಾಗಿ ಒರೆಹಚ್ಚಿ ನೋಡು. ಒಂದು ಪಕ್ಷ ವ್ಯಕ್ತಿ ಸ್ವಾತಂತ್ರ್ಯದ ಸೋಗಿನಲ್ಲಿ ಬಡಬಗ್ಗರ ಶೋಷಣೆಯನ್ನು ಸಮರ್ಥಿಸುವ ಪಕ್ಷ. ಇನ್ನೊಂದು ಪಕ್ಷ ಹೆತ್ತ ತಾಯಿಯನ್ನೇ ಮರೆತು, ಶತ್ರು ರಾಷ್ಟ್ರದ ದುರಾಕ್ರಮಣ ನೀತಿಯನ್ನು ಸಮರ್ಥಿಸುವ ಪಕ್ಷ. ಮತ್ತೊಂದು ಪಕ್ಷ ದೇಶ ಭಕ್ತಿಯ ಸೋಗಿನಲ್ಲಿ ಜಾತೀಯತೆಯನ್ನು ಶಾಶ್ವತಗೊಳಿಸುವ ಪಕ್ಷ."

"ಉಳಿದ ಪಕ್ಷಗಳು ಏನಾಗಿವೆ."

"ಉಳಿದ ಪಕ್ಷಗಳ ಧ್ಯೇಯ ಧೋರಣೆಗಳೇನೋ ಸರಿಯಾಗಿವೆ. ಆದರೆ ಅವು ಯಾವ ದೃಷ್ಟಿಯಿಂದಲೂ ಕಾಂಗ್ರೆಸ್ಸಿಗಿಂತ ಉತ್ತಮವಾಗಿಲ್ಲ. ಕಾಂಗ್ರೆಸ್ ಎಷ್ಟೇ ಕೆಟ್ಟು

ಹೋಗಿದ್ದರೂ, ಇಂದೂ ಸಹ ಕಾಂಗ್ರೆಸ್ಸಿನಲ್ಲಿ ಆದರ್ಶವಂತರೂ, ಶೀಲವಂತರೂ ಇದ್ದಾರೆ."

"ವಿರೋಧ ಪಕ್ಷಗಳಲ್ಲಿ ಶೀಲವಂತರೂ, ಆದರ್ಶವಂತರೂ ಇಲ್ಲವೆಂದು ತಮ್ಮ ಅಭಿಪ್ರಾಯವೇನು?"

"ಹಾಗೆಂದು ನಾನು ಹೇಳಲಿಲ್ಲವಲ್ಲ. ವಿರೋಧ ಪಕ್ಷಗಳಲ್ಲೂ ಸಹ ಆದರ್ಶವಂತರೂ, ಶೀಲವಂತರೂ ಇದ್ದಾರೆ. ಆದರೆ ಆ ಪಕ್ಷಗಳಿಗೆ ರೆಕ್ಕೆಪುಕ್ಕಗಳೇ ಬಲಿತಿಲ್ಲ. ಒಂದೊಂದೂ ಒಂದೊಂದು ಹಾದಿಯನ್ನು ಹಿಡಿದಿವೆ. ಅವುಗಳ ಧ್ಯೇಯ ಧೋರಣೆಗಳಲ್ಲಿ ಹೊಂದಾಣಿಕೆಯೇ ಇಲ್ಲ. ಅವನ್ನೆಲ್ಲಾ ಒಂದು ಗೂಡಿಸುವುದು ಹೇಗೆ?"

"ನಿಮ್ಮ ಕಾಂಗ್ರೆಸ್ಸಿನಷ್ಟು ವಿರೋಧ ಪಕ್ಷಗಳು ಕೆಟ್ಟು ಹೋಗಿಲ್ಲ."

"ಅಯ್ಯಾ ಪ್ರತಾಪ್, ವಿರೋಧ ಪಕ್ಷದ ಕೆಲವರಿಗೆ ಸಭೆ ಸಮಾರಂಭಗಳಲ್ಲಿ ಹೇಗೆ ವರ್ತಿಸಬೇಕೆಂಬ ಸೌಜನ್ಯವೂ ಸಹ ಗೊತ್ತಿಲ್ಲ. ಒಮ್ಮೊಮ್ಮೆ ಕೆಲವರು, ಕೈಯ್ಯಲ್ಲಾಗದವನು ಮೈಯಲ್ಲಾ ಪರಚಿಕೊಂಡಂತೆ, ಸಭ್ಯತೆಯ ಎಲ್ಲೆಯನ್ನು ಮೀರಿ, ಬರೀ ಗುಲ್ಲೆಬ್ಬಿಸುತ್ತಾರೆ. ಕಾಂಗ್ರೆಸ್ಸಿನವರು ಕೆಲವರು ಮೂರು ಗ್ಯಾಲನ್ ಕುಡಿದರೆ, ವಿರೋಧ ಪಕ್ಷಗಳಿಗೆ ಸೇರಿದ ಕೆಲವರು ಆರು ಗ್ಯಾಲನ್ ಕುಡಿಯುತ್ತಾರೆ. ಆದ್ದರಿಂದ ಇಂದಿನ ಪರಿಸ್ಥಿತಿಯಲ್ಲಿ ಕಾಂಗ್ರೆಸ್ಸನ್ನು ಶುದ್ಧಿಗೊಳಿಸುವುದೊಂದೇ ನಮಗಿರುವ ಮಾರ್ಗ. ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳನ್ನು ದೇಶದ ಬಹು ಮಂದಿ ಜನರು ಒಪ್ಪಿರುತ್ತಾರೆ. ನೀವೇನು ಹೇಳುವಿರಿ ಅಮರಚಂದ್?"

"ನನಗೆ ದಿಕ್ಕೇ ತೋಚದಂತೆ ಆಗಿಬಿಟ್ಟಿದೆ. ಒಮ್ಮೊಮ್ಮೆ ಕಾಂಗ್ರೆಸ್ ಬಿಡಬೇಕೆಂದೆನಿಸುತ್ತದೆ. ಬಿಡುವುದು ದುಃಖಕರವೆನಿಸುತ್ತದೆ. ಅದರಲ್ಲೇ ಇದ್ದು ಅನುಭವಿಸುವುದು ಇನ್ನೂ ದುಃಖಕರವಾಗಿದೆ. ಕಾಂಗ್ರೆಸ್ಸೇ ನಮ್ಮ ಹತೋಟಿಯಲ್ಲಿಲ್ಲದಿರುವಾಗ, ನಾವು ಅದನ್ನು ದುರಸ್ತು ಮಾಡುವ ಬಗೆ ಹೇಗೆ? ರಾಜ್ಯದ ಕಾಂಗ್ರೆಸ್ ನಮ್ಮ ಅಧಿಪತ್ಯಕ್ಕೊಳಗಾಗುವುದು ಸಾಧ್ಯವೇಯಿಲ್ಲ. ಜನರೂ ಹಾಗೇ ಆಗಿದ್ದಾರೆ. ಜನರು ಆದರ್ಶಕ್ಕಾಗಿ ಒಗ್ಗಟ್ಟಾಗುವ ಕಾಲ ಎಂದೋ ಕಳೆದು ಹೋಗಿದೆ. ಸ್ವಂತ ಹಿತಕ್ಕೆ ಬೇಕಾದರೆ ತಾತ್ಕಾಲಿಕವಾಗಿ ಒಗ್ಗಟಾಗುತ್ತಾರೆ. ಇಂದಿನ ಪರಿಸ್ಥಿತಿಯಲ್ಲಿ ರಾಜಕಾರಣದಿಂದ ನಿವೃತ್ತರಾದರೆ ಮನಸ್ಸಿಗಾದರೂ ನೆಮ್ಮದಿಯಾಗುತ್ತದೆ," ಎಂದು ಅಮರ್‌ಚಂದರು ನುಡಿದರು.

"ಅಮರ್‌ಚಂದ್, ರಾಜಕೀಯದಿಂದ ನಿವೃತ್ತಿ ಹೊಂದುವುದು ಹೇಡಿತನ. ರಾಜಕೀಯದಲ್ಲಿದ್ದು ತೆಪ್ಪಗಿರುವುದು ಪಾಪಕರ. ಇಂದು ನಿವೃತ್ತಿ ಮಾರ್ಗದ ಬದಲು ಪ್ರವೃತ್ತಿ ಮಾರ್ಗವನ್ನವಲಂಬಿಸಬೇಕಾಗಿದೆ."

"ಹಾಗಾದರೆ ತಮ್ಮ ಸೂಚನೆ ಏನು?"

"ನಾನು ಈ ರಾಜ್ಯದ ತತ್ವನಿಷ್ಠರಾದ ಎಲ್ಲಾ ಕಾಂಗ್ರೆಸ್ಸಿಗರನ್ನೂ, ಕಾಂಗ್ರೆಸ್ ಧ್ಯೇಯ ಧೋರಣೆಗಳಲ್ಲಿ ನಂಬಿಕೆ ಇರುವ ಇತರರನ್ನೂ ಒಂದು ಗೂಡಿಸಿ, ಒಂದು ಕೂಟವನ್ನು ಕಟ್ಟಬೇಕೆಂದಿರುತ್ತೇನೆ. ಆ ಕೂಟವೇ 'ಕಾಂಗ್ರೆಸ್' ಎಂದು ಸಾರಬೇಕೆಂದಿರುತ್ತೇನೆ."

ನಿಮ್ಮ ಯೋಜನೆ ಕಾಂಗ್ರೆಸ್ಸಿನ ಶಿಸ್ತಿಗೆ ವಿರೋಧವಲ್ಲವೇ?"

"ನಾವು ನಿಜವಾದ ಕಾಂಗ್ರೆಸ್ಸಿಗರು ; ಶಂಭು ದಾಮೋದರರು ಕಪಟ ಕಾಂಗ್ರೆಸ್ಸಿಗರು. ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳಿಗೆ ಮತ್ತು ನ್ಯಾಯ ನೀತಿಗಳಿಗೆ ವಿರೋಧವಾಗಿ ವರ್ತಿಸಿ, ಕಾಂಗ್ರೆಸ್ಸಿನ ಶಿಸ್ತನ್ನು ಮುರಿಯುತ್ತಿರುವವರು ಅವರು; ನಾವಲ್ಲ."

"ನಾವು ಆರೀತಿ ಮಾಡಿದರೆ ಕಾಂಗ್ರೆಸ್ ಹೈಕಮಾಂಡ್ ಸುಮ್ಮನಿರುತ್ತದೆಯೇ?"

"ಪ್ರಜಾಪ್ರಭುತ್ವದ ತತ್ವಗಳಿಗನುಗುಣವಾಗಿ ಬಹುಮತವಿದ್ದವರಿಗೆ ಹೈಕಮಾಂಡ್ ಮನ್ನಣೆ ನೀಡುತ್ತದೆ. ಈ ರಾಜ್ಯದಲ್ಲಿ ಜನತೆಯ ಮತ್ತು ಬಹುಜನ ಕಾಂಗ್ರೆಸ್ಸಿಗರ ಬೆಂಬಲ ನಮಗಿದೆ ಎಂಬುದನ್ನು ತೋರಿಸಿದರೆ, ಆಗ ಹೈಕಮಾಂಡಿನ ಆಶೀರ್ವಾದ ನಮಗೆ ಲಭಿಸುತ್ತದೆ."

"ತಮ್ಮ ಕಾರ್ಯಾಚರಣೆಯ ವಿಧಾನವೇನೆಂಬುದನ್ನು ದಯವಿಟ್ಟು ತಿಳಿಸುವಿರಾ?"

ನಾನು ಆಗಲೇ ಹೇಳಿದಂತೆ ಕಾಂಗ್ರೆಸ್ಸಿಗರ ಮತ್ತು ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳಲ್ಲಿ ನಂಬಿಕೆ ಇರತಕ್ಕ ಇತರರ ಕೂಟವನ್ನು ರಚಿಸುವುದು. ಅದೇ 'ಕಾಂಗ್ರೆಸ್' ಎಂದು ಸಾರುವುದು. ಶಂಭು ದಾಮೋದರರೂ, ಅವರ ಅನುಯಾಯಿಗಳೂ, ಕಪಟ ಕಾಂಗ್ರೆಸ್ಸಿಗರೆಂದು ಬಹಿರಂಗವಾಗಿ ಘೋಷಿಸುವುದು. ಅವರೊಡನೆ ನಾವು ಸಹಕರಿಸುವು ದಿಲ್ಲವೆಂದು ಹೈಕಮಾಂಡಿಗೆ ತಿಳಿಸುವುದು. ಅವರ ಹೇಯ ಕೃತ್ಯಗಳನ್ನೂ, ಅಕ್ರಮ ನಡೆವಳಿಕೆಗಳನ್ನೂ ಜನತೆಗೆ ತಿಳಿಸುವ ಸಲುವಾಗಿ ಒಂದು ಪ್ರಚಾರ ಚಳುವಳಿಯನ್ನು ಆರಂಭಿಸುವುದು. ಮುಂಬರುವ ಚುನಾವಣೆಯಲ್ಲಿ ನಮ್ಮ ಕೂಟದ ಪರವಾಗಿ ಹುರಿಯಾಳು ಗಳನ್ನು ನಿಲ್ಲಿಸಿ, ಅವರೇ ನಿಜವಾದ ಕಾಂಗ್ರೆಸ್ಸಿಗರೆಂದು ಜನರಿಗೆ ತಿಳಿಸುವುದು. ಈ ಸೂಚನೆಯನ್ನು ನೀವುಗಳು ಒಪ್ಪಿದರೆ, ಜನರ ಮತ್ತು ಜನನಾಯಕರ ಬೆಂಬಲವನ್ನು ಪಡೆಯುವುದಕ್ಕಾಗಿ ಒಂದು ಸಮ್ಮೇಳನವನ್ನು ಕರೆಯೋಣ."

"ಅತೃಪ್ತ ಕಾಂಗ್ರೆಸ್ಸಿಗರಾದ ನೀವುಗಳೇ ಸೇರಿಕೊಂಡು, ವಿರೋಧ ಪಕ್ಷಗಳ ಬೆಂಬಲ ವಿಲ್ಲದೆ, ಆ ದುಷ್ಟರನ್ನು ಉರುಳಿಸುತ್ತೀರೆಂದರೆ ಬರೀ ಕನಸಿನ ಮಾತು. ಅಂತೂ ಇಂತೂ ಕುಂತೀ ಮಕ್ಕಳಿಗೆ ವನವಾಸ. ಶಂಭು ದಾಮೋದರರಿಗೆ ಸಂಪತ್ತು ದೌಲತ್ತು; ನಮಗೆ ಆಪತ್ತು ವಿಪತ್ತು. ನಿಮಗಿಷ್ಟ ಬಂದಂತೆ ಮಾಡಿ" ಎಂದು ಅತೃಪ್ತವಾಣಿಯಿಂದ ಪ್ರತಾಪ್‌ರಾಜ್ ನುಡಿದನು.

"ಅಯ್ಯೋ ಮಹಾರಾಯಾ, ನಿನ್ನನ್ನು ಬಿಟ್ಟು ನಾವೇನು ಮಾಡುವೆವು? ನಮ್ಮ ಧ್ಯೇಯ ಧೋರಣೆಗಳಲ್ಲಿ ನಂಬಿಕೆ ಇರುವವರೆಲ್ಲರೂ ನಮ್ಮ ಕೂಟಕ್ಕೆ ಸೇರಲವಕಾಶವಿದೆ. ಅಷ್ಟೇ ಅಲ್ಲ, ಜಯಸಿಂಹನು ನಮ್ಮ ಕೂಟದ ನಾಯಕ ನಾಗಿರಬೇಕು; ನೀನು ಅದರ ಉಪನಾಯಕನಾಗಿರಬೇಕು." ಎಂದು ಭಾರ್ಗವದಾಸರು ನುಡಿದರು.

ಅದುವರೆಗೆ ಸುಮ್ಮನಿದ್ದ ಜಯಸಿಂಹನು, "ಪೂಜ್ಯ ಭಾರ್ಗವದಾಸರೇ ನಾನೊಬ್ಬ ಸಿಪಾಯಿ. ರಾಜಕಾರಣ ತಾರಾತಿಗಡಿ, ಹಿಂಗಾಟ ಮುಂಗಾಟಗಳು ನನಗೆ ಗೊತ್ತಿಲ್ಲ. ತಮ್ಮ ಪೈಕಿ ಯಾರಾದರೂ, ದಳಪತಿಯಾದರೆ ನಾನು ಕಾಲಾಳಾಗಿರುತ್ತೇನೆ." ಎಂದು ನಮ್ರವಾಗಿ ನುಡಿದನು.

"ಮಗೂ, ಕೆಲವು ಕಾರಣಗಳ ದೆಸೆಯಿಂದ ನೀನೇ ನಮಗೆ ನಾಯಕನಾಗ ಬೇಕಾಗಿದೆ. ಮೊದಲನೆಯದಾಗಿ, ನೀನು ದುರ್ಗಾದಾಸರ ಮಗ. ಎರಡನೆಯದಾಗಿ, ಶ್ರೇಷ್ಠಯೋಧನೆಂದು ಇಡೀ ಭಾರತದಲ್ಲಿ ಹೆಸರುವಾಸಿಯಾಗಿರುವೆ. ಮೂರನೆಯದಾಗಿ ನಾಯಕನಿಗಿರಬೇಕಾದ ಎಲ್ಲಾ ಸದ್ಗುಣಗಳೂ ನಿನ್ನಲ್ಲಿವೆ."

"ಪೂಜ್ಯರೇ, 'ತನ್ನೂರಿಗೆ ರಂಗ, ಪರಊರಿಗೆ ಮಂಗ,' ಎನ್ನುವ ಹಾಗೆ ಯುದ್ಧರಂಗದಲ್ಲಿ ರಂಗನಾಗಿದ್ದ ನಾನು ರಾಜಕೀಯ ರಂಗದಲ್ಲಿ ಮಂಗನಾದರೆ ಗತಿ ಏನು ಸ್ವಾಮಿ?"

"ಜಯಸಿಂಹ, ನೀನು ಅಳುಕಬೇಕಾಗಿಲ್ಲ. ನಮ್ಮೆಲ್ಲರ ಬೆಂಬಲ ನಿನಗಿದೆ. ದುಷ್ಟ ಶಿಕ್ಷಣಕ್ಕಾಗಿ, ಜನತೆಯ ರಕ್ಷಣೆಗಾಗಿ, ನಿನ್ನ ತಂದೆಯ ವೈರಿಗಳ ಪದಚ್ಯುತಿಗಾಗಿ ನೀನು ನಾಯಕನಾಗಲೇ ಬೇಕು."

ಭಾರ್ಗವದಾಸರು ತಂದೆಯ ವೈರಿಗಳ ವಿಚಾರವನ್ನು ಪ್ರಸ್ತಾಪಿಸಿದೊಡನೆ, ಜಯಸಿಂಹನ ಹೃದಯದಲ್ಲಿ ಸುಪ್ತವಾಗಿದ್ದ ಸೇಡಿನ ಕಿಡಿ ಜ್ವಲಿಸಿತು. ಮರುಮಾತಾಡದೆ ನಾಯಕನಾಗಲು ಅವನು ಸಮ್ಮತಿಸಿದನು. ಪ್ರತಾಪರಾಜನೂ ಸಹ ಗೊಣಗಾಡುತ್ತಾ ಉಪನಾಯಕನಾಗಲು ಒಪ್ಪಿಕೊಂಡನು.

* * * *

ಸೂರ್ಯಾಸ್ತಮ ಸಮಯ. ಶಂಭುವೂ, ದಾಮೋದರನೂ ಮುಖ್ಯಮಂತ್ರಿಯ ನಿವಾಸದಲ್ಲಿ ಮುಂದೇನು ಮಾಡಬೇಕೆಂಬ ವಿಚಾರದಲ್ಲಿ ಗುಪ್ತಾಲೋಚನೆಯಲ್ಲಿ ನಿರತರಾಗಿದ್ದರು. ದುರ್ಗಾದಾಸರು ಮುಖ್ಯಮಂತ್ರಿಯಾಗಿದ್ದಾಗ, ಅವರು ಸಣ್ಣ ಮನೆಯಲ್ಲಿ ಸಾಧಾರಣ ವ್ಯಕ್ತಿಯಂತೆ ಆಡಂಬರವಿಲ್ಲದ ಜೀವನ ಸಾಗಿಸುತ್ತಿದರು. ದಾಮೋದರನು ಮುಖ್ಯಮಂತ್ರಿಯಾದೊಡನೆ, ಹಿಂದಿನ ರಾಜರೊಬ್ಬರಿಗೆ ಸೇರಿದ್ದ ಒಂದು ಅರಮನೆಯನ್ನು, ತನ್ನ ವಸತಿಗೃಹವನ್ನಾಗಿ ಮಾಡಿಕೊಂಡಿದ್ದನು.

ಅರಮನೆಯ ಸುತ್ತಲೂ ಹತ್ತು ಚದರ ಮೈಲಿ ವಿಸ್ತೀರ್ಣದ ವಿಶಾಲವಾದ ವನವಿತ್ತು. ಅರಮನೆಯ ಎಡಭಾಗದಲ್ಲಿ ವಿಶಾಲವಾದ ಉದ್ಯಾನವನವೂ, ಮುಂದುಗಡೆ ರಮ್ಯವಾದ ಹೂದೋಟವೂ, ಅರಮನೆಗೆ ಕಳೆ ಕಟ್ಟುವಂತೆ ಮಾಡಿದ್ದವು. ಅರಮನೆಗೆ ಅನತಿ ದೂರದಲ್ಲಿಯೇ ಕ್ರೀಡಾ ಮೈದಾನವೂ, ಜಲಕ್ರೀಡೆಯ ಸರೋವರವೂ, ಹಿಂದುಗಡೆ ವಿಮಾನ ನಿಲುಮನೆಯೂ ಇದ್ದವು. ದಾಮೋದರನು ಮುಖ್ಯಮಂತ್ರಿಯಾದ ಮೇಲೆ ತನ್ನ ಪ್ರವಾಸಕ್ಕಾಗಿ ಸರ್ಕಾರಿ ವೆಚ್ಚದಲ್ಲಿ ಒಂದು ವಿಮಾನವನ್ನು ಕೊಂಡುಕೊಂಡಿದ್ದನು.

ಅರಮನೆಯು ಹಲವು ಸೌಧಗಳಿಂದಲೂ, ಹಜಾರಗಳಿಂದಲೂ ಕೂಡಿದ್ದು, ರಮಣೀಯವಾಗಿಯೂ, ಕಲಾಪೂರ್ಣವಾಗಿಯೂ ಶೋಭಿಸುತ್ತಿತ್ತು. ಆಧುನಿಕ ಸಾಧನ ಸಲಕರಣೆಗಳಿಂದ ಸಜ್ಜುಗೊಳಿಸಲ್ಪಟ್ಟಿತ್ತು. ವಿದ್ಯುತ್‌ಚಾಲಿತ ಯಂತ್ರೋಪಕರಣಗಳು ಸಮಸ್ತ ಮನೆಗೆಲಸಗಳನ್ನು ನಿರ್ವಹಿಸುತ್ತಿದ್ದುವು. ಟೆಲಿವಿಷನ್, ಟೆಲಿ ಪ್ರಿಂಟರ್, ಮುಂತಾದ ಆಧುನಿಕ ವಾರ್ತಾ ಸಾಧನಗಳು ಅರಮನೆಯಲ್ಲಿ ಅಳವಡಿಸಲ್ಪಟ್ಟಿದ್ದುವು.

ದಾಮೋದರನ ಉಪಯೋಗಕ್ಕಾಗಿ ಐದು ಟೆಲಿಫೋನ್‌ಗಳಿದ್ದುವು. ಅವನ ಪತ್ನಿಯ ಉಪಯೋಗಕ್ಕಾಗಿಯೇ ಒಂದು ಟೆಲಿಫೋನ್ ಮೀಸಲಾಗಿತ್ತು.ಮನೆ ತುಂಬ ಪರಿಚಾರಕರ ಹಿಂಡು ಸದಾ ಸೇವೆಗೆ ಸಿದ್ಧವಾಗಿರುತ್ತಿತ್ತು.

ದಾಮೋದರನಿಗಾಗಲೀ, ಅವನ ಪತ್ನಿಗಾಗಲೀ, ಅಂತಹ ಒಂದು ಭವ್ಯವಾದ ಅರಮನೆಯಲ್ಲಿ ವಾಸವಾಗಿರಲು ತಕ್ಕ ಸಂಸ್ಕೃತಿಯಾಗಲೀ, ಸೌಂದರ್ಯೋಪಾಸಕ ದೃಷ್ಟಿಯಾಗಲೀ ಎಳ್ಳಷ್ಟೂ ಇರಲಿಲ್ಲ. ದಾಮೋದರನ ಪತ್ನಿಯು ಬುದ್ಧಿ ಸದ್ಗುಣ ಗಳಿಲ್ಲದಿದ್ದರೂ, ರಾಣಿಯೋಪಾದಿಯಲ್ಲಿ ಆ ಅರಮನೆಯಲ್ಲಿ ಪಾರುಪತ್ಯೆ ನಡೆಯಿಸು ತ್ತಿದ್ದಳು. ಅವಳ ಬೆಡಗು ಬಿನ್ನಾಣಗಳಿಗೆ ಇತಿಮಿತಿಯೇ ಇರುತ್ತಿರಲಿಲ್ಲ. ಸದಾ ಅತ್ಯಾಧುನಿಕ ರೀತಿಯಲ್ಲಿ ಸರ್ವಾಲಂಕಾರ ಭೂಷಿತಳಾಗಿ, ಠೀವಿಯಿಂದ ಓಡಾಡುತ್ತಿದ್ದಳು.

ಆ ದಿನ, ದಾಮೋದರನ ಪತ್ನಿಯು, ಉದ್ಯಾನವನದಲ್ಲಿ ತನ್ನ ಗೆಳತಿಯರಿಗೆ ಸಂತೋಷ ಕೂಟವನ್ನೇರ್ಪಡಿಸಿದ್ದಳು. ಅತಿಥಿಗಳಿಗೆ ಉಪಹಾರವನ್ನು ನೀಡುತ್ತಿದ್ದ, ಪರಿಚಾರಕರ ಮೇಲೆ ಅವಳು ತೋರಿಸುತ್ತಿದ್ದ ದರ್ಪ ಅಸಹ್ಯಕರವಾಗಿತ್ತು. ಅತಿಥಿಯೊಡನೆ ಮಾತನಾಡುತ್ತಿದ್ದಾಗ, ರಾಜ್ಯಭಾರ ತನ್ನ ಕೈಯೊಳಗೇ ಇದೆಯೆಂಬಂತೆ ಅಭಿನಯಿಸುತ್ತಿದ್ದಳು. ತನ್ನ ಗೆಳತಿಯರಿಗೆ ಆಡಳಿತದ ಕಷ್ಟ ಸುಖಗಳನ್ನು ವಿವರಿಸುತ್ತಾ, ಹೇಮಾವತಿಯಂತಹ ವಿಸ್ತಾರವಾದ ರಾಜ್ಯದಲ್ಲಿ ಆಡಳಿತವನ್ನು ನಡೆಸುವುದು ಕಷ್ಟವೆಂದು, ಕೆಲವು ಸಂದರ್ಭಗಳಲ್ಲಿ ತನ್ನ ಸಲಹೆಗಳ ಪರಿಣಾಮವಾಗಿ ಕಠಿಣ ಸಮಸ್ಯೆಗಳು ಬಗೆಹರಿಸಲ್ಪಟ್ಟವೆಂದೂ, ಮುಖ್ಯ ಮಂತ್ರಿಯ ಭೇಟಿಗಾಗಿ ಬರುವ ಜನರನ್ನು ಸಮಾಧಾನಗೊಳಿಸುವುದು ಕಷ್ಟವೆಂದೂ ಮುಂತಾಗಿ ಕೊಚ್ಚಿಕೊಳ್ಳುತ್ತಿದ್ದಳು. ಅವಳ ಜಂಬದ ಮಾತುಗಳನ್ನು ಕೇಳಿದ ಮಹಿಳೆಯರು ಕುಚೋದ್ಯಮಾಡಿ ತಮ್ಮೊಳಗೇ ನಗುತ್ತಿದ್ದರು.

* * * *

ಅರಮನೆಯ ಏಕಾಂತ ಭವನದಲ್ಲಿ ಆಪ್ತಾಲೋಚನೆಗಾಗಿ ಸೇರಿದ್ದ ಶಂಭುವೂ, ದಾಮೋದರನೂ ಕುಶಲ ಪ್ರಶ್ನೆಗಳಾದ ಮೇಲೆ, ಒಂದು ಸುತ್ತು ಮದ್ಯ ಸೇವನೆ ಮಾಡಿ, ರಾಜಕಾರಣದ ವಿಚಾರದಲ್ಲಿ ಮಾತನಾಡತೊಡಗಿದ್ದರು. ಶಂಭು ದಾಮೋದರನನ್ನು ಕುರಿತು.

"ಒಂದು ನ್ಯೂಸ್ ಕೇಳ್ದೇನಯ್ಯಾ ದಾಮೋದರ," ಎಂದು ಪ್ರಶ್ನಿಸಿದನು.

"ಅದೇನು, ಶಂಭು?"

"ಜಯಸಿಂಹನ ಲೀಡರ್ ಶಿಪ್ಪಾಗೆ ಒಂದು ಹೊಸ ಪಾರ್ಟಿ ಹುಟ್ತದಂತೆ."

"ಅಷ್ಟೇ ಅಲ್ಲ, ಅದರ ಜೊತೇಲೇ ನಮ್ಮೇಲೆ ಒಂದು ಚಳುವಳೀನೂ ಮಾಡ್ತಾರಂತೆ."

"ಅಂದೆಂತಾ ಚಳುವಳಿಯಪ್ಪಾ?"

"ಚಳುವಳಿ ಆರಂಭವಾದ ಮೇಲೆ ತಾನೆ ಆದರ ಸ್ವರೂಪ ಗೊತ್ತಾಗೋದು."

"ಆರಂಭ ಆಗೋಕೆ ಬಿಟ್ಟರೆ ತಾನೆ ನಾವು."

"ಶಂಭೂ, ಅಷ್ಟೊಂದು ಲಘುವಾಗಿ ಭಾವಿಸಬೇಡ. ಅತೃಪ್ತ ಜನರೆಲ್ಲಾ ಅವರ ಕಡೆ ಸೇರ್ತಾರೆ."

"ದಾಮೋದರಾ, ನೀನು ಇಷ್ಟೆಲ್ಲಾ ತಲೆ ಕೆಡಿಸಿಕೊಳ್ಳುವ ಅಗತ್ಯವಿಲ್ಲ. ಆ ಹುಡುಗ, ಯುದ್ಧ ಮಾಡಿ, ಒಂದು ಕೈ ಕಳಕೊಂಡಾನೆ. ಈಗ ರಾಜಕಾರಣ ಮಾಡಿ, ಮಾನ ಕಳ್ಕೊಳ್ತಾನೆ. ನಮ್ಮ ಮೇಲೆ ಚಳುವಳಿ ಮಾಡೋದು ಸುಲಭ ಏನಯ್ಯಾ? ನಮ್ಮ ಹತ್ರ ಹಣ ಇದೆ; ಅಧಿಕಾರ ಇದೆ; ಜನ ಇದ್ದಾರೆ."

"ಶಂಭೂ, ಅತಿ ಧೈರ್ಯ ಅತಿ ಅಪಾಯ. ಇದು ಅಲಕ್ಷ್ಯ ಮಾಡುವ ವಿಷಯವಲ್ಲ."

"ದಾಮೋದರಾ, ಅನಾವಶ್ಯಕ ಅಧೈರ್ಯವೂ ಅನಗತ್ಯ."

"ಅಧೈರ್ಯವೂ ಇರಬಾರದು; ಅತಿಧೈರ್ಯವೂ ಇರಬಾರದು.

ಅಲಕ್ಷ್ಯ ಮಾತ್ರ ಎಂದಿಗೂ ಇರಬಾರದು. ಆ ಭಾರ್ಗವದಾಸ, ಪ್ರತಾಪ ರಾಜ, ಅಮರ್‌ಚಂದ ಏನೋ ಗೊಂದಲ ಮಾಡೋಕೆ ಹೊರಟಿದ್ದಾರೆ."

"ಮಾಡ್ಲಿ, ಮೂರೇ ದಿನದಲ್ಲಿ ಅವರ ಚಳುವಳೀನ ಚಟ್ಲಿ ಮಾಡ್ದೆ ಇದ್ರೆ, ನಾನು ಶಂಭೂನಾಥನೇ ಅಲ್ಲ."

"ಚಳುವಳಿ ಜೊತೆಗೇ ಚುನಾವಣೆಯೂ ಬಂತಲ್ಲಯ್ಯ."

"ಚುನಾವಣೆಯೇನು ಮಹಾ? ಹೋದ ಸಾರಿ ನಮ್ಮ ಕೈಯ್ಯಾಗೆ ಅಧಿಕಾರನೂ ಇರಲಿಲ್ಲ; ಸಾಕಾದಷ್ಟು ಹಣವೂ ಇರಲಿಲ್ಲ. ಸಾಲದ್ದಕ್ಕೆ ಎಲೆಕ್ಷನ್ ಕಮೀಟೀಲಿ ಆ ದಾಸ ಕಿತಾಪತಿ ಮಾಡ್ತಾನೇ ಇದ್ದ. ಆದರೂ ಜಯಭೇರಿ ಹೊಡ್ದೇ ಬಿಟ್ವಿ. ಈ ಸಾರಿ ನಮ್ಮ ಕೈಯ್ಯಾಗೆ ಸರ್ಕಾರಾನೂ ಇದೆ; ಎಲೆಕ್ಷನ್ ಫಂಡೂ ಇದೆ; ಎಲೆಕ್ಷನ್ ಕಮಿಟೀನೂ ಇದೆ. ಇನ್ನ್ಯಾತಕ್ಕಯ್ಯಾ ಭಯ?"

"ಎಲೆಕ್ಷನ್ ಫಂಡು ಎಷ್ಟಾಗಿದೆ ಈಗ?"

"ಸುಮಾರು ಒಂದು ಕೋಟಿ ಮುಟ್ಟಿದೆ."

"ಅಷ್ಟೇನೆ, ನಿನ್ನ ಬಂಡವಾಳ?"

"ಇನ್ನೂ ಬರಬೇಕಾದ್ದು ಇದೆ. ಪಿ. ಡಬ್ಲೂ. ಡಿ, ಸೇಲ್ಸ್ ಟ್ಯಾಕ್ಸ್, ಎಕ್ಸೈಸ್ ಮಂತ್ರಿಗಳು ಒಂದೊಂದು ಡಿಸ್ಟ್ರಿಕ್ಟಿಗೆ ಐದೈದು ಲಕ್ಷ ವಸೂಲ್ಮಾಡ್ಬೇಕು ಅಂತ, ಅವರ ಇಲಾಖೆಯ ಆಫೀಸರಿಗೆ ತಾಕೀತು ಮಾಡಿದ್ದರೂ, ಇನ್ನೂ ಕೆಲವರು ಆಫೀಸರು ಕೊಟ್ಟಿಲ್ಲ."

"ಸಾಕಾಗೋದಿಲ್ಲಯ್ಯಾ, ಲೋಕಲ್ ಕಂಟ್ರಾಕ್ಟರ್‌ಗಳನ್ನು, ಪ್ರಾಜೆಕ್ಟ್ ಕಂಟ್ರಾಕ್ಟರ್‌ಗಳನ್ನು ಟ್ಯಾಕಲ್ ಮಾಡಬೇಕಲ್ಲಯ್ಯಾ."

"ಲೋಕಲ್ ಕಂಟ್ರಾಕ್ಟರುಗಳನ್ನು ಹೋದ ವಾರ ಕರ್ಸಿದ್ದೆ. ಅವರ ಪೈಕಿ ಕೆಲವರು, ನಿನಗೆ ಡೈರೆಕ್ಟಾಗಿ ಹಣ ಕೊಟ್ಟೀವಿ ಅಂತ ಹೇಳಿದರು.

ಅವರು , ಹೇಳಿದ ಪ್ರಕಾರ ಅವರು ನಿನಗೆ ಐದು ಲಕ್ಷ ಕೊಟ್ಟಿರಬಹುದು."

"ನೆನಪಿಲ್ಲ. ಎಲ್ಲೋ ಒಂದು ಕಡೆ ನೋಟು ಮಾಡಿ ಇಟ್ಟಿದ್ದೆ."

ಅವರಿಬ್ಬರೂ ಮೇಲ್ಕಂಡಂತೆ ಸಂಭಾಷಣೆ ನಡೆಯಿಸುತ್ತಿರುವಾಗ, ಜಲೋದರನು ಏಕಾಏಕಿ ಅವರಿದ್ದ ಕೊಠಡಿಗೆ ನುಗ್ಗಿ ಬಂದನು. ರಾಜ್ಯದ ಹಮ್ಮೀರರೆನಿಸಿಕೊಂಡಿದ್ದ ಹೆಮ್ಮೀರ, ಕೆಮ್ಮೀರ, ಜಲೋದರ, ಮಹೋದರ, ಗಾಂಢೀವ ಮುಂತಾದವರಿಗೆ ಮಂತ್ರಿಗಳ ಅಥವಾ ಮುಖ್ಯಮಂತ್ರಿಗಳ ನಿವಾಸಗಳಿಗೆ ಅಥವಾ ಆಫೀಸುಗಳಿಗೆ ಹೋಗಲು, ಪಹರೆಯವರ ಪ್ರತಿಬಂಧಕ ಯಾವಾಗಲೂ ಇರಲಿಲ್ಲ. ಅವರು ದ್ವಾರಪಾಲಕರನ್ನು ದುಟಗಾಯಿಸಿ ಯಾವಾಗಬೇಕಾದರೂ ಮಂತ್ರಿಗಳನ್ನೂ, ಮುಖ್ಯಮಂತ್ರಿಗಳನ್ನು ನೋಡ ಬಹುದಾಗಿತ್ತು.

"ಏನು ಮಿಸ್ಟರ್ ಜಲೋದರ, ಎಲ್ಲಾ ಕ್ಷೇಮ ತಾನೇ?" ಏನು ದಯಮಾಡಿಸಿ ದಿರಿ?" ಎಂದು ದಾಮೋದರ ಪ್ರಶ್ನಿಸಿದ.

"ಏನಿಲ್ಲ ಸಾರ್, ತಮ್ಮನ್ನು ನೋಡದೆ ಬಹಳ ದಿನ ಆಗಿತ್ತು, ನೋಡ್ಬೇಕು ಅಂತ ಮನಸ್ಸಾತು. ಶಂಭೂನಾಥ ಸಾಹೇಬರೂ ಇಲ್ಲೇ ಸಿಕ್ಕಿದ್ದು ಬಹಳಾ ಸಂತೋಷ. ನಿನ್ನೆ, ಆ ಬ್ಯಾಂಕ್ ಓಪನಿಂಗ್ ಸೆರೆಮನೀಗೆ ನಾನೂ ಬಂದಿದ್ದೆ ಸಾರ್. ತಮ್ಮತ್ರ ಮಾತಾಡೋಕೆ ಆಗಿಲ್ಲ. ನಾ ಬಾಹ್ಳಾ ದೂರದಾಗಿದ್ದೆ. ತಮ್ಮ ಭಾಷಣ ಬಹಳಾ ಚೆನ್ನಾಗಿತ್ತು ಸರ್. ಜನ ಬಹಳ ಮೆಚ್ಚದ್ರು ಸಾರ್. ತಮ್ಮ ಹಾಗೆ ಭಾಷಣ ಮಾಡೋರು ನಮ್ಮ ಸ್ಟೇಟಾಗೆ ಯಾರೂ ಇಲ್ಲ ಸಾರ್"

"ಥ್ಯಾಂಕ್ಯೂ, ಫಾರ್ ದಿ ಕಾಂಪ್ಲಿಮೆಂಟ್. ಮಿಸ್ಟರ್ ಜಲೋದರ, ಒಂದು ಹೊಸ ನ್ಯೂಸ್ ಕೇಳಿದ್ರೇನು?"

"ಅದೇನು ನ್ಯೂಸ್ ಸಾರ್?"

"ಒಂದು ಹೊಸ ಪಾರ್ಟಿ ಮಾಡ್ತಾರಂತೆ. ನಮ್ಮೇಲೆ ಚಳವಳಿ ಮಾಡ್ತಾರಂತೆ."

"ಅದು ಯಾರ್ ಸಾರ್ ಗಂಡು, ಚಳುವಳಿ ಮಾಡೋರು?"

"ಅವ್ರೇ ಇದ್ದಾರಲ್ಲ, ಹಳೇ ಹೆಗ್ಗಣಗಳು–ಪ್ರತಾಪರಾಜ, ಭಾರ್ಗವದಾಸ ವಗೈರೆ."

"ನಾವೆಲ್ಲಾ ಬದುಕಿದ್ದೀವಲ್ಲಾ? ನಾವಿರಾಗ ನಿಮಗ್ಯಾಕೆ ಸಾರ್ ಚಿಂತೆ?"

"ನಿಮ್ಮ ತಾಲ್ಲೂಕಿನ ಜನ ಹೇಗೆ ಇದ್ದಾರೆ"?

"ನಾ ಹೇಳ್ದಾಗೆ ನಮ್ಮ ಜನ."

"ನೀವೆಲ್ಲಾ ಇರಾಗ ನಂಗೇನು ಚಿಂತೆ?"

"ತಾವಿಬ್ರೂ ಏನೋ ಮಾತಾಡ್ತಾ ಇದ್ರಿ, ನಾ ಬಂದು ತೊಂದ್ರೆ ಆಯ್ತೋ ಏನೋ? ಕ್ಷಮಿಸಬೇಕು ಸಾರ್. ಒಂದು ಸಣ್ಣ ವಿಷಯ ಸಾರ್."

"ಅದೇನ್ ಮಿಸ್ಟರ್ ಜಲೋದರ? ಹೇಳಿ, ಸಂಕೋಚ ಯಾಕೆ.?"

"ನಮ್ ತಾಲ್ಲೂಕಿನ ಆ ದಲಿಂಧರ್ ಇದ್ದಾರಲ್ಲಾ ಸಾರ್, ಕಂಟ್ರಾಕ್ಟ್ರು. ಅವರ ಟೆಂಡರ್ ರಿಕಾರ್ಡು ಚೀಫ್ ಇಂಜಿನಿಯರ್ ಸಾಹೇಬರ ಹತ್ರ ಇದೆ. ತಾವು ಒಂದ್ಮಾತ್ ಹೇಳ್ದ್ರೆ ಉಪಕಾರ ಆಗ್ತಿತ್ತು. ಹೋದ ಸಾರಿ, ದಲೀಂಧರ್ ತಮ್ಮ ಎಲೆಕ್ಷನ್ನೀಗೆ ಇಪ್ಪತ್ತು

ಸಾವಿರ ಕೊಟ್ಟಿದ್ರು. ತಮಗೆ ನೆನಪಿದೆಯೋ ಇಲ್ಲೋ. ಈ ಟೆಂಡರ್ ಮಂಜೂರಾದ್ರೆ ಈ ಸರೀನೂ ಇಪ್ಪತ್ತು ಸಾವಿರ ಕೊಟ್ಟಾರು."

"ಅದೇನು ದೊಡ್ಡ ವಿಷಯ ಬಿಡಿ. ಇವತ್ತು ಸಂಜೆ ಚೀಫ್ ಇಂಜಿನಿಯರ್ ಇಲ್ಲಿಗೆ ಬರ್‍ತಾರೆ. ಅವರಿಗೆ ಹೇಳಿ ಮಾಡ್ಸತ್ತೀನಿ"

"ಮುಖ್ಯಮಂತ್ರಿಯ ಆಶ್ವಾಸನೆಯಿಂದ ತೃಪ್ತಿಗೊಂಡ ಜಲೋದರ ಶಂಭು ದಾಮೋದರ ಅಪ್ಪಣೆ ಪಡೆದು ಹೊರಡುತ್ತಿರುವಷ್ಟರಲ್ಲಿ, ಕೆಮ್ಮೊರನು ಕೊಠಡಿಯೊಳಗೆ ನುಗ್ಗಿದನು. ತನ್ನ ಭಕ್ತ ಕೆಮ್ಮೊರನನ್ನು ಕಂಡು ಸಂತಸಗೊಂಡ ದಾಮೋದರನು ಪ್ರೀತ್ಯಾದರಗಳಿಂದ ಅವನನ್ನು ಬರಮಾಡಿಕೊಂಡು, ತನ್ನ ಪಕ್ಕದಲ್ಲೇ ಕುಳ್ಳಿರಿಸಿ, "ಏನು ಬಂದಿರಿ ಕೆಮ್ಮೊರ, ಚೆನ್ನಾಗಿದ್ದೀರಾ?" ಎಂದು ವಾತ್ಸಲ್ಯ ಪೂರ್ವಕವಾಗಿ ಕೇಳಿದನು.

"ಏನಿಲ್ಲಾರಿ. ಒಂದು ಸಣ್ಣ ಕೆಲ್ಸಾ. ಆ ನಮ್ಮೂರು ಬಸ್ ಪ್ರೊಪ್ರೈಟರ್, ಮೇಗನಾಥ್ ನಿಮಗೆ ಗೊತ್ತಲ್ಲ? ಅವರ ಮ್ಯಾಲೆ ನಿಮ್ ಪೋಲಿಸ್ನೋರು ಒಂದು ಸುಳ್ಳು ಕೇಸ್ ಹಾಕ್ಯಾರೆ. ಅವರು ನಂಗೆ ಬಹಳಾ ಬೇಕಾದವರು. ಆ ಕೇಸು ವಿತ್ ಡ್ರಾ ಮಾಡ್ಬೇಕು."

"ಮಿಸ್ಟರ್ ಕೆಮ್ಮೊರ, ಕೇಸ್ ವಿತ್ ಡ್ರಾ ಮಾಡ್ಬೇಕಾದ್ರೆ ಬಹಳ ಶಾಸ್ತ್ರ ಆಗ್ಬೇಕಪ್ಪಾ. ಪೋಲಿಸ್ ರಿಪೋರ್ಟ್ ತರಸ್ಬೇಕು. ಲಾ ಡಿಪಾರ್ಟ್‌ಮೆಂಟ್ ಒಪೀನಿಯನ್ ಬರಬೇಕು."

"ಏನ್ರೀ, ಚೀಫ್ ಮಿನಿಸ್ಟ್ರಾಗಿ ಇಂತ ಒಂದು ಸಣ್ಣ ವಿಚಾರಕ್ಕೆ ಆ ರಿಪೋರ್ಟು ಅಂತ, ಕಣ್ಣೊರಸೂ ಮಾತು ಯಾರಿಗೋ ಹೇಳ್ದಾಗೆ ನಂಗೆ ಹೇಳ್ತಿರಲ್ರೀ? ಚೀಫ್ ಮಿನಿಸ್ಟ್ರು ಮನಸ್ಸು ಮಾಡದ್ರೆ ಯಾವ ಕೆಲ್ಸಾ ಆಗೋದಿಲ್ಲ?"

"ಮಾಡೋಣಪ್ಪಾ, ಮಾಡೋಣ, ಮೇಗನಾಥ ಒಂದು ಅರ್ಜಿ ಕೊಡ್ಲಿ. ನೋಡೋಣ."

"ಏನ್ ನೋಡ್ಬೇಕ್ರಿ? ತಗೊಳ್ಳಿ ಇಲ್ಲೇ ಇದೆ. ಅವನರ್ಜಿ ಈಗ್ಲೆ ಆರ್ಡರ್ ಮಾಡಿ."

"ಕೊಟ್ಟು ಹೋಗಿಯಪ್ಪ. ಆಮೇಲೆ ರಿಪೋರ್ಟ್ ತರಸ್ತೀನಿ"

"ಸುರು ಮಾಡ್ದಲ್ಲಪ್ಪಾ, ವರ್ಸೆನಾ, ಮುಖ್ಯಮಂತ್ರಪ್ಪ. ನಿಂಗೆ ಬೇಕಾದಾಗ ನಾ ಹಗ್ಲೂ ರಾತ್ರೆ ದುಡೀಬೇಕು. ನೀ ಹೇಳ್ದಂತೆ ಕೇಳ್ಕೊಂಡು ಬಿದ್ದಿರ್ಬೇಕು. ನಂದೇನಾದ್ರೂ ಒಂದು ಚೂರು ಪಾರು ಕೆಲ್ಸಾ ಮಾಡ್ಬೇಕು ಅಂದ್ರೆ ಜಾರಿಕಿ ಮಾತಾಡ್ತಿಯಪ್ಪಾ!"

"ಕೆಮ್ಮೊರ, ನಿನ್ನನ್ನು ನಾನು ಯಾವಾಗ್ಲೂ ರಕ್ಷಣೆ ಮಾಡ್ತಾನೇ ಇದ್ದೀನಿ. ನಿಮ್ಮ ಮೇಲೆ ವಾರಕ್ಕೆ ಮೂರು ಕಂಪ್ಲೇಟ್ ಬರ್‍ತದೆ. ನೀವು ಒಂದು ಮರ್ಡರ್ ಮಾಡ್ಸೀರಿ ಅಂತ, ಹೋದವಾರ ಒಂದು ಅರ್ಜಿ ಬಂದಿದೆ. ಆ ಅರ್ಜಿನ ಎನ್‌ಕ್ವೈರಿಗೆ ಹಾಕದ್ರೆ ಏನಾಗ್ತದೆ ಗೊತ್ತೇನು?"

"ನನ್ ಮ್ಯಾಲೆ ಅರ್ಜಿಯಾಕ್ ಬರ್‍ತದೆ, ಗೊತ್ತೇನು? ನಾ ನಿಮ್ಮ ಗುಂಪಿಗೆ ಸೇರ್‍ದವ ಅಂತ, ಪ್ರತಾಪನ ಜನ ಸುಳ್ಳು ಸುಳ್ಳೇ ಅರ್ಜಿ ಬರೀತಾರೆ. ನಿಮ್ಮ ಗುಂಪು ಬಿಟ್ರೆ, ಆ ಮ್ಯಾಲೆ ಅರ್ಜಿನೂ ಇಲ್ಲ; ಸರ್ಜಿನೂ ಇಲ್ಲ. ನಿಮ್ಮ ಗುಂಪು ಬಿಟ್ಟುಬಿಡು ಅಂತಿಯೇನು?"

"ಸಿಟ್ಟು ಮಾಡ್ಬೇಡ್ರೀ, ಕೆಮ್ಮೊರ ಸಾಹೇಬ್ರೇ ಒಂದು ವಾರದೊಳ್ಗೆ ರಿಪೋರ್ಟ್ ತರ್ಸಿ ಆರ್ಡರ್ ಮಾಡ್ತೀನಿ"

"ಜಾಗ್ರತೆ ಮಾಡಪ್ಪಾ. ಪುಣ್ಯಾತ್ಮಾ, ಅವ ನನ್ನ ಸ್ನೇಹಿತ. ನಾ ಬತ್ತೀನಿ"

"ಮಿಸ್ಟರ್ ಕೆಮ್ಮೊರ, ಒಂದ್ಮಾತು. ಆ ಭಾರ್ಗವದಾಸ, ಪ್ರತಾಪವಗ್ಯೆರೆ ಸೇರ್ಕೊಡು, ಒಂದು ಪಾರ್ಟಿ ಕಟ್ಟಿ, ನಮ್ಮೇಲೆ ಏನೋ ಚಳವಳಿ ಹೂಡ್ತಾರಂತೆ."

"ಅದು ಯಾರ್ರೀ? ಅವರು........... ಚಳುವಳಿ ಮಾಡೋರು... ನಾ ಇರಾಗ, ಭೂಪತಿರಂಗ. ನಮ್ಮ ಕಡೆ ಯಾರವ ಬರ್ತಾನೆ? ನೋಡ್ತೀನಿ."

"ಸದ್ಯ ಇದೇ ಊರಾಗೆ ಒಂದು ಕಾನ್‌ಫರೆನ್ಸ್ ಕರೀತಾರಂತೆ."

"ನೀವೇನ್ ಶಿಖಂಡಿಗಳೇನ್ರಿ? ನೂರ ನಲವತ್ತು ನಾಲ್ಕನೇ ಸೆಕ್ಷೆನ್ ಜಾರಿ ಮಾಡಿ ಚಡಿ ಏಟ್ ಜಡ್ದರೆ ಚಳವಳೀನೂ ಇಲ್ಲ; ಗಿಳವಳೀನೂ ಇಲ್ಲ."

"ಹಾಗೆಲ್ಲಾ ಮಾಡೋಕಾಗೋದಿಲ್ರಿ. ಪ್ರೆಸ್ಸಿನೋರು ಸುಮ್ನೆ ಇರ್ತಾರೇನು? ನಿಮ್ಮ ಕಡೆ ಜನ ಹ್ಯಾಗಿದ್ದಾರೆ ?"

"ನಿಮ್ಮ ಕಡೆ ನಾ ಇದ್ದೀನಿ. ನಿಮಗ್ಯಾಕೆ ಯೋಚನೆ?"

* * * *

## ೧೭. ಸಾರ್ವಭೌಮರಿಗೆ ದೂರು

ಹೇಮಾವತಿ ನಗರದ ಹೊರವಲಯದಲ್ಲಿ, ವಿಶಾಲ ಮೈದಾನ ಒಂದರಲ್ಲಿ, ಭಾರೀ ಜನಸಂದಣಿ ಸೇರಿತ್ತು. ಅಲ್ಲೊಂದು ರಾಜಕೀಯ ಸಮ್ಮೇಳನ ಸಮಾವೇಶ ಗೊಂಡಿತ್ತು. ದುರ್ಗಾದಾಸರ ಮಗ ಜಯಸಿಂಹನು ಸಮ್ಮೇಳನದ ಅಧ್ಯಕ್ಷತೆ ವಹಿಸಿದ್ದನು. ದೇಶಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರ, ರಾಜ್ಯದಲ್ಲಿ ಎಂದೂ ಅಷ್ಟೊಂದು ಜನಸಮೂಹ ಒಂದೆಡೆ ಸೇರಿರಲಿಲ್ಲ. ರಾಜ್ಯದ ನಾನಾ ಕಡೆಗಳಿಂದ ಕಾಂಗ್ರೆಸ್ ಪ್ರಮುಖರೂ, ಕಾಂಗ್ರೆಸ್ ಕಾರ್ಯಕರ್ತರೂ, ಕಾಂಗ್ರೆಸ್ಸಿನ ಹಿತೈಷಿಗಳೂ, ಇತರರೂ ಸಮ್ಮೇಳನಕ್ಕೆ ಆಗಮಿಸಿದ್ದರು. ಸಮ್ಮೇಳನವನ್ನು ಕುರಿತು ಭಾರ್ಗವದಾಸರು ಮಾತನಾಡುತ್ತಿದ್ದರು. ಅವರ ಭಾಷಣ ಈ ರೀತಿ ಇತ್ತು.

"ದೇಶಪ್ರೇಮಿಗಳೇ, ಈ ರಾಜ್ಯದ ರಾಜಕೀಯ ಭವಿಷ್ಯವನ್ನು ನಿರ್ಧರಿಸುವ ಸಲುವಾಗಿ ನಾವಿಲ್ಲಿ ಸೇರಿದ್ದೇವೆ. ನಮ್ಮಲ್ಲಿ ಕೆಲವರು ಗಾಂಧೀಜಿಯವರ ಕಾಲದಲ್ಲಿ ಕಾಂಗ್ರೆಸ್ಸಿಗೆ ಸೇರಿದವರು. ಅಂದು ನಮಗೆ ಶಾಸಕರಾಗಬೇಕೆಂಬ ಆಸೆ ಇರಲಿಲ್ಲ; ಮಂತ್ರಿಗಳಾಗಬೇಕೆಂಬ ಆಕಾಂಕ್ಷೆ ಇರಲಿಲ್ಲ; ಹಣಗಳಿಸಬೇಕೆಂಬ ದುರಾಶೆ ಇರಲಿಲ್ಲ. ಮಾತೃಭೂಮಿಯ ಬಿಡುಗಡೆಗಾಗಿ ಅಂದು ನಾವು ಕಾಂಗ್ರೆಸ್ಸಿಗೆ ಸೇರಿದ್ದೆವು. ಸ್ವರಾಜ್ಯ ಲಭಿಸಿದ ಮೇಲೆ ಕಾಂಗ್ರೆಸ್ ಸಂಸ್ಥೆ ನಾನಾ ಮುಖವಾಗಿ ರಾಷ್ಟ್ರದ ಅಭ್ಯುದಯವನ್ನು ಸಾಧಿಸಿದೆ. ರಾಷ್ಟ್ರದಲ್ಲಿ ಹಿಂದೆಂದೂ ನಡೆಯದಿದ್ದ ಆರ್ಥಿಕ ಪ್ರಗತಿ ಜರಗಿದೆ. ಕಾಂಗ್ರೆಸ್ಸಿನಿಂದಲೇ ಈ ದೇಶದಲ್ಲಿ ಪ್ರಜಾಪ್ರಭುತ್ವ ಉಳಿಯಲು ಸಾಧ್ಯವೆಂಬ ಭಾವನೆ ಇರುವವರ ಪೈಕಿ ನಾನೊಬ್ಬ.

"ಆದರೆ ಈ ರಾಜ್ಯದಲ್ಲಿ ಇಂದೇನಾಗಿದೆ? ದೇವತೆಗಳಿಂದ ನಿರ್ಮಾಣವಾಗಿದ್ದ ದೇವಮಂದಿರವನ್ನು ದೆವ್ವಗಳು ಆಕ್ರಮಿಸಿಕೊಂಡಂತೆ, ಸತ್ಯಸಂಧ ದೇಶಪ್ರೇಮಿಗಳ ತ್ಯಾಗ, ಬಲಿದಾನಗಳಿಂದ ಕಟ್ಟಿದ್ದ ಕಾಂಗ್ರೆಸ್ ಸಂಸ್ಥೆಯನ್ನು ಶಂಭು ದಾಮೋದರರು ಆಕ್ರಮ ರೀತಿ ನೀತಿಗಳಿಂದ ವಶಪಡಿಸಿಕೊಂಡು, ತಮ್ಮ ತಾಳಕ್ಕೆ ಸರಿಯಾಗಿ ಕುಣಿಯುವ ಸಮಯ ಸಾಧಕರನ್ನೂ, ಸ್ವಾರ್ಥ ಸಾಧಕರನ್ನು ತಮ್ಮ ಮೇಳಕ್ಕೆ ಸೇರಿಸಿಕೊಂಡು, ತಮ್ಮ ಅನಿಷ್ಟಕೂಟಕ್ಕೆ 'ಕಾಂಗ್ರೆಸ್' ಎಂಬ ಅಭಿಧಾನವಿಟ್ಟಿದ್ದಾರೆ. ಶಂಭು, ದಾಮೋದರರ ದರ್ಬಾರಿನಲಿ ನಿನ್ನೆ ಕಾಂಗ್ರೆಸ್ಸನ್ನು ಹಳಿಯುತ್ತಿದ್ದವರು ಇಂದು ಕಾಂಗ್ರೆಸ್ ಧುರೀಣರಾಗಿದ್ದಾರೆ.

"ಶಂಭು ದಾಮೋದರರ ಆಡಳಿತ ವೈಖರಿ ವರ್ಣನಾತೀತವಾದುದು. ಅವರಿಗಾಗಿ ಅವರ ಬಂಧು ಬಾಂಧವರಿಗಾಗಿ ಅವರ ಬೆಂಬಲಿಗರಿಗಾಗಿ ಆಡಳಿತ ನಡೆಯುತ್ತಿರುವಂತೆ ತೋರುತ್ತದೆ. ಸಮಾಜವಾದದ ಸೋಗಿನಲ್ಲಿ ಕೆಲವರಿಗೆ ಮಾತ್ರ ಸಂತರ್ಪಣೆ ನಡೆಯುತ್ತಾ

ಇದೆ. ತಾವು ಸಮೃದ್ಧಿಯ ತುಪ್ಪವನ್ನು ತಿಂದು, ಜನಸಾಮಾನ್ಯರ ಮೂಗಿಗೆ ಸಮಾಜವಾದದ ತುಪ್ಪವನ್ನು ಸವರಿದ್ದಾರೆ. ಬಡಬಗ್ಗರ ಉದ್ಧಾರದಲ್ಲೇ ಮುಕ್ತಾಯವಾಗುತ್ತಿದೆ. ರಾಜ್ಯದ ರಾಜಕಾರಣ ಮೂತ್ರದ ಗುಂಡಿಯಲ್ಲಿ ಮೀನು ಹಿಡಿಯುವಂತಾಗಿದೆ. ಶಂಭುದಾಮೋದರರಿಗೆ ಆಪ್ತರಾದ ಕೆಲವರು ಅಧಿಕಾರಿಗಳ ದುರಹಂಕಾರದ ದಬ್ಬಾಳಿಕೆಯಂತೂ ಹೇಳ ತೀರದು. ಈ ರಾಜ್ಯವನ್ನು ಆಳಲು ಭಗವಂತನು ತಮ್ಮನ್ನು ಉದ್ದೇಶಪೂರ್ವಕವಾಗಿಯೇ ಸೃಷ್ಟಿಸಿ ಕಳುಹಿಸಿದ್ದಾನೆಂದು ಆ ಅಧಿಕಾರಿಗಳು ಭಾವಿಸಿರುವಂತೆ ತೋರುತ್ತದೆ.

"ಶಂಭು ದಾಮೋದರರಿಗೆ ಶ್ರೀಮಂತರ ನೋಟೂ ಬೇಕು; ಬಡವರ ಓಟೂ ಬೇಕು. ಕಾಂಗ್ರೆಸ್ ವರಿಷ್ಠರ ಮತ್ತು ಜನರ ಕಣ್ಣೊರೆಸುವ ಸಲುವಾಗಿ, ಬಡಬಗ್ಗರ ಉದ್ಧಾರಕ್ಕೆಂದು ಅವರು ಕೆಲವು ಯೋಜನೆಗಳನ್ನು ಕೈ ಗೊಂಡಿದ್ದಾರೆ. ಆದರೆ ಅವನ್ನು ಅನುಷ್ಠಾನಕ್ಕೆ ತರುವ ನಿಷ್ಠೆಯಾಗಲೀ, ಇಷ್ಟವಾಗಲೀ ಅವರಿಗೂ ಇಲ್ಲ; ಅವರ ಅಧಿಕಾರಿಗಳಿಗೂ ಇಲ್ಲ. ಕೆಲವು ಸುಧಾರಣಾ ಕಾನೂನುಗಳು ಶಂಭು ದಾಮೋದರರ ಕೈಯಲ್ಲಿ ಓಟು ಕೀಳುವ ಸಾಧನಗಳಾಗಿವೆ; ಲಂಚಕೋರ ಅಧಿಕಾರಿಗಳ ಕೈಯಲ್ಲಿ ಲಂಚ ಕೀಳುವ ಅಸ್ತ್ರಗಳಾಗಿವೆ. ಅವರ ರಾಜ್ಯಭಾರದಿಂದ ಖತಿಗೊಂಡ ಜನರು ಹಿಂಸಾಕೃತ್ಯದಲ್ಲಿ ತೊಡಗುವ ಸೂಚನೆ ಕಂಡುಬರುತ್ತಾ ಇದೆ. ಜನತೆಯ ಅತೃಪ್ತಿಯಿಂದ ಉಂಟಾದ ಅರಾಜಕತೆಯ ಕಿಚ್ಚು ಅಲ್ಲಲ್ಲಿ ಹೊಗೆಯಾಡುತ್ತಿದೆ.

"ಶತ್ರು ರಾಷ್ಟ್ರದ ಆಕ್ರಮಣದ ಭೀತಿ ಇನ್ನೂ ತಪ್ಪಿಲ್ಲ. ಜನರಲ್ಲಿ ಶಾಂತಿ ಸಮಾಧಾನಗಳನ್ನು ಮೂಡಿಸುವ ಸಲುವಾಗಿ, ಅರಾಜಕತೆಯ ಕಿಚ್ಚನ್ನು ಆರಿಸುವ ಸಲುವಾಗಿ, ಪ್ರಜಾಪ್ರಭುತ್ವವನ್ನು ಉಳಿಸುವ ಸಲುವಾಗಿ, ಶತ್ರುರಾಷ್ಟ್ರವೆನ್ನೆದುರಿಸಲು ಶಕ್ತಿ ಸಾಮಾರ್ಥ್ಯಗಳನ್ನು ಪಡೆಯುವ ಸಲುವಾಗಿ, ರಾಜ್ಯದ ರಾಜಕಾರಣವನ್ನೂ ಆಡಳಿತವನ್ನೂ ಅತಿ ಜಾಗ್ರತೆ ಸರಿಪಡಿಸಬೇಕಾಗಿದೆ. ರಾಜ್ಯದ ಕಾಂಗ್ರೆಸ್ಸಿಗರೆಲ್ಲರೂ ಒಂದಾಗಿ, ಶಂಭು ದಾಮೋದರರ ವಿರುದ್ಧ ದಂಗೆಯೇಳುವುದೊಂದೇ ಉಳಿದಿರುವ ದಾರಿಯಾಗಿದೆ. ಕಾಂಗ್ರೆಸ್ಸಿನವರ ಮತ್ತು ಕಾಂಗ್ರೆಸ್ ಹಿತೈಷಿಗಳ ಒಂದು ಕೂಟವನ್ನು ರಚಿಸಿ, ಶಂಭು ದಾಮೋದರರನ್ನು ಪದಚ್ಯುತಿಗೊಳಿಸಲು ಕ್ರಮ ಕೈಗೊಳ್ಳಬೇಕೆಂದಿರುತ್ತೇವೆ. ನಮ್ಮ ಪ್ರಯತ್ನಕ್ಕೆ ಸಂಪೂರ್ಣ ಸಹಕಾರ ಬೆಂಬಲಗಳನ್ನು ನೀಡಬೇಕೆಂದು ಪ್ರಾರ್ಥಿಸುತ್ತೇನೆ. ಈಗ ಅಮರಚಂದರು ನಮ್ಮ ಕಾರ್ಯ ವಿಧಾನದ ಸ್ವರೂಪವನ್ನು ವಿವರಿಸುತ್ತಾರೆ.

ಅಮರಚಂದರ ಭಾಷಣ ಈ ರೀತಿ ಇತ್ತು ;

"ತಾವು ಇದುವರೆಗೆ ಪೂಜ್ಯ ಭಾರ್ಗವದಾಸರ ಭಾಷಣಗಳನ್ನು ಕೇಳಿದ್ದೀರಿ. ಈ ರಾಜ್ಯದ ರಾಜ್ಯಭಾರ ಅಸಂಸ್ಕೃತ ಅಲ್ಪ ಜನರ ಕೈ ಸೇರಿ ಹೋಗಿದೆ. ಅವರ ಮುಷ್ಟಿಯಿಂದ ಈ ರಾಜ್ಯವನ್ನೂ, ಕಾಂಗ್ರೆಸ್ಸನ್ನೂ ಪಾರುಮಾಡಬೇಕಾಗಿದೆ. ನಮಗೆ ಅಧಿಕಾರದ ಲಾಲಸೆಯೂ ಇಲ್ಲ; ಶಂಭು ದಾಮೋದರರ ಮೇಲೆ ದ್ವೇಷವೂ ಇಲ್ಲ. ನಾವೇನೂ ಆಂದೋಳನವನ್ನು ಮಾಡಲು ಹೊರಟಿಲ್ಲ. ಘರ್ಷಣೆ, ಗೊಂದಲವಿಲ್ಲದೆ, ಅಹಿಂಸಾತ್ಮಕ

ರೀತಿ ನೀತಿಗಳಿಂದ ಶಂಭು ದಾಮೋದರರ ಪಿಡುಗು ತೊಲಗುವಂತೆ ಮಾಡುವುದೇ ನಮ್ಮ ಉದ್ದೇಶವಾಗಿದೆ. ನಾನು ವಿವರಿಸುವ ಕೆಲವೇ ವಿಧಾನಗಳನ್ನು ಜನರು ಅನುಸರಿಸಿದರೆ, ಅವರ ಪಿಡುಗು ತೊಲಗಿ, ಜನರಿಗೆ ಸುಖ ಶಾಂತಿಗಳು ಲಭಿಸುತ್ತವೆ.

"ನಾವಿಂದು ಶಂಭು ದಾಮೋದರರ ವಿರುದ್ಧ ಒಂದು ಕೂಟವನ್ನು ರಚಿಸಲು ಇಲ್ಲಿ ಸೇರಿದ್ದೇವೆ. ಕಾಂಗ್ರೆಸ್ಸಿನ ಧ್ಯೇಯ ಧೋರಣೆಗಳಲ್ಲಿ ಮತ್ತು ಸ್ವಚ್ಛ ಆಡಳಿತದಲ್ಲಿ ನಂಬಿಕೆಯುಳ್ಳವರೆಲ್ಲರೂ ಈ ಕೂಟಕ್ಕೆ ಸೇರಬೇಕೆಂದು ವಿನಂತಿ ಮಾಡಿಕೊಳ್ಳುತ್ತೇನೆ. ಜನರು ಇಂದಿನಿಂದ ಶಂಭು ದಾಮೋದರರಿಗೆ ಗೌರವ ಸಲ್ಲಿಸುವುದನ್ನು ನಿಲ್ಲಿಸಬೇಕು. ಅವರು ಗೌರವಾರ್ಥವಾಗಿ ನಡೆಯುವ ಸಭೆ ಸಮಾರಂಭಗಳನ್ನು ಬಹಿಷ್ಕರಿಸಬೇಕು. ಅವರು ಕಪಟ ಕಾಂಗ್ರೆಸ್ಸಿಗರೆಂದು ಸಾರಬೇಕು. ಅವರೆಸಗುತ್ತಿರುವ ಭ್ರಷ್ಟಾಚಾರಗಳನ್ನು ಬಯಲಿಗೆಳೆಯಬೇಕು. ಈ ಬಗ್ಗೆ ಒಂದು ಪ್ರಚಾರ ಚಳವಳಿಯನ್ನು ಕೈಗೊಳ್ಳಲಿದ್ದೇವೆ. ಇದಕ್ಕೆ ತಮ್ಮೆಲ್ಲರ ಬೆಂಬಲ ಅತ್ಯಾವಶ್ಯಕ. "ಮುಂಬರುವ ಮಹಾ ಚುನಾವಣೆಯಲ್ಲಿ ನಮ್ಮ ಕೂಟದ ಪರವಾಗಿ ಅಭ್ಯರ್ಥಿಗಳನ್ನು ನಿಲ್ಲಿಸಲು ಇಂದು ತೀರ್ಮಾನವನ್ನು ಕೈಗೊಳ್ಳಲಿದ್ದೇವೆ. ಆ ಅಭ್ಯರ್ಥಿಗಳೇ ನಿಜವಾದ ಕಾಂಗ್ರೆಸ್ಸಿಗರು. ಅವರಿಗೇ ಮಹಾ ಜನರು ತಮ್ಮ ಮತಗಳನ್ನು ನೀಡಬೇಕು. ಓಟು ಒಂದು ಪವಿತ್ರವಾದ ಅಸ್ತ್ರ. ಅದನ್ನು ರಾಷ್ಟ್ರದ ಉನ್ನತಿಗಾಗಿ ಮತ್ತು ಜನತೆಯ ಒಳಿತಿಗಾಗಿ ಉಪಯೋಗಿಸಬೇಕೇ ಹೊರತು, ಜಾತಿಗಾಗಿ, ದುಡ್ಡಿಗಾಗಿ, ಹೆಂಡಕ್ಕಾಗಿ, ದಾಕ್ಷಿಣ್ಯಕ್ಕಾಗಿ ಉಪಯೋಗಿಸತಕ್ಕದ್ದಲ್ಲ. ಜಾತಿಗಾಗಿ ಓಟು ಕೊಡುವವರು ಅಲ್ಪರು; ದಾಕ್ಷಿಣ್ಯಕ್ಕಾಗಿ ಓಟುಕೊಡುವವರು ಅಧಮರು; ಸ್ವಾರ್ಥಸಾಧನೆಗಾಗಿ ಓಟು ಕೊಡುವವರು ನೀಚರು; ಹಣ ಹೆಂಡಗಳಿಗಾಗಿ ಓಟು ಮಾರುವವರು ದೇಶದ್ರೋಹಿ ಪಾಪಿಗಳು. ಜನತೆಗೆ ಸ್ವಚ್ಛ ಆಡಳಿತ ಬೇಕಾಗಿದ್ದರೆ, ತಾವು ಕೊಟ್ಟ ತೆರಿಗೆಗೆ ತಕ್ಕ ಪ್ರತಿಫಲ ದೊರೆಯಬೇಕಾಗಿದ್ದರೆ, ಮುಂಬರುವ ಚುನಾವಣೆಯಲ್ಲಿ ಉತ್ತಮರನ್ನು ಆರಿಸಬೇಕು, ಲಂಚಕೋರರನ್ನೂ, ಲಾಭಕೋರರನ್ನೂ ನಿರ್ದಾಕ್ಷಿಣ್ಯವಾಗಿ ಸೋಲಿಸಬೇಕು."

ಅಮರಚಂದರ ಭಾಷಣ ಮಗಿದೊಡನೆ, ಶಂಭುವಿನ ಶಿಷ್ಯನೊಬ್ಬನು ಸಭೆಯಲ್ಲಿ ಎದ್ದು ನಿಂತು, ತನಗೂ ಭಾಷಣ ಮಾಡುವ ಅವಕಾಶ ಕೊಡಬೇಕೆಂದು ಅಧ್ಯಕ್ಷತೆ ವಹಿಸಿದ್ದ ಜಯಸಿಂಹನನ್ನು ಪ್ರಾರ್ಥಿಸಿದನು. ಜಯಸಿಂಹನು ಅವನ ಪ್ರಾರ್ಥನೆಯನ್ನು ಮನ್ನಿಸಿ, ಅವನಿಗೆ ಮಾತನಾಡಲು ಅನುಮತಿ ನೀಡಿದನು. ಅವನ ಭಾಷಣ ಈ ರೀತಿ ಇತ್ತು;

"ಸಭಿಕರೇ, ಭಾರ್ಗವದಾಸರ ಮತ್ತು ಅಮರಚಂದರು ದೀರ್ಘ ಭಾಷಣಗಳನ್ನು ತಾವು ಕೇಳಿದ್ದೀರಿ. ಈ ಮಹನೀಯರು ಪ್ರಬಲವಾದ ಒಂದು ಆಂದೋಲನವನ್ನು ಹೂಡುವ ಸನ್ನಾಹದಲ್ಲಿ ತೊಡಗಿರುವಂತೆ ಅವರ ಮಾತುಗಳಿಂದಲೇ ವ್ಯಕ್ತವಾಗುತ್ತದೆ. ಇವರಿಬ್ಬರೂ ಮುಖ್ಯಮಂತ್ರಿಗಳ ಮೇಲೂ, ಶಂಭುನಾಥರ ಮೇಲೂ ಹಲವು ಆಪಾದನೆಗಳನ್ನು ಹೊರೆಸಿದ್ದಾರೆ. ಭ್ರಷ್ಟಾಚಾರವು ಈಗಿನ ಮುಖ್ಯಮಂತ್ರಿಗಳ ಕಾಲದಲ್ಲಿ

ಹೊಸದಾಗಿ ಈ ರಾಜ್ಯಕ್ಕೆ ಆಗಮಿಸಲಿಲ್ಲ. ಭ್ರಷ್ಟಾಚಾರ, ಗುಂಪು ರಾಜಕಾರಣ, ಸ್ವಜನ ಪಕ್ಷಪಾತ, ಇವುಗಳು ಹಿಂದಿನಿಂದಲೂ ಬೆಳೆದು ಬಂದ ಪಿಡುಗುಗಳಾಗಿವೆ. ದುರ್ಗಾದಾಸರ ಆಳ್ವಿಕೆಯಲ್ಲಿ ಅವುಗಳಿರಲಿಲ್ಲವೇನು?"

"ಕಾಂಗ್ರೆಸ್ಸಿನ ನಡೆವಳಿಕೆಗಳು ಪ್ರಜಾಪ್ರಭುತ್ವಕ್ಕನುಗುಣವಾಗಿ ಬಹುಮತವನ್ನವಲಂಭಿಸಿ, ಬಹಿರಂಗವಾಗಿ ನಡೆಯುತ್ತದೆ. ಈ ಮಹನೀಯರು ಬಹುಮತವನ್ನು ಗಳಿಸಿ, ಕಾಂಗ್ರೆಸ್ ಸಂಸ್ಥೆಯನ್ನು ವಶಪಡಿಸಿಕೊಳ್ಳಲು ಯಾರೂ ಅಡ್ಡಿಪಡಿಸಲಿಲ್ಲ. ಅದನ್ನು ಬಿಟ್ಟು, ಈ ಮಾರ್ಗ ಹಿಡಿದಿರುವುದು ವಿಷಾದಕರ. ಅಮರಚಂದರೂ, ಪ್ರತಾಪರಾಜರೂ ಅಧಿಕಾರ ಕೈ ತಪ್ಪಿದ ಸಂಕಟದಿಂದಲೂ, ಜಾತಿ ದ್ವೇಷದಿಂದಲೂ, ಅರಳುಮರುಳು ಭಾರ್ಗವದಾಸರನ್ನೂ, ಅರಿಯದ ಜಯಸಿಂಹನನ್ನೂ, ಮುಂದಿಟ್ಟುಕೊಂಡು ಈ ಚಳವಳಿಯನ್ನು ಪ್ರಾರಂಭಿಸಿದ್ದಾರೆ. ದಾಮೋದರರೂ, ಶಂಭುನಾಥರೂ ದಿಟ್ಟತನದ ಆಡಳಿತವನ್ನು ನಡೆಸುತ್ತಿದ್ದಾರೆ. ಅವರಿಬ್ಬರ ಸೇವೆ ಈ ರಾಜ್ಯಕ್ಕೆ ಇನ್ನೂ ಬಹಳ ಕಾಲ ಅಗತ್ಯವಿದೆ. ದೇಶಕ್ಕೆ ಶತ್ರುರಾಷ್ಟ್ರದ ಭಯ ಇನ್ನೂ ತಪ್ಪಿಲ್ಲ. ಈ ಕಾಲದಲ್ಲಿ ಈ ಮಹನೀಯರು ಹೊಟ್ಟೆ ಕಿಚ್ಚಿನಿಂದಲೂ, ಜಾತಿ ದ್ವೇಷದಿಂದಲೂ, ಗೊಂದಲವೆಬ್ಬಿಸುತ್ತಿರುವುದು ರಾಷ್ಟ್ರದ್ರೋಹ. ಇವರ ಚಳವಳಿಗೆ ಮಹಾಜನರು ಬೆಂಬಲ ನೀಡಬಾರದೆಂದು ಪ್ರಾರ್ಥಿಸುತ್ತೇನೆ."

ಅವನ ಮಾತುಗಳನ್ನು ಕೇಳಿದ ಪ್ರತಾಪರಾಜನು ಕೋಪದಿಂದ ಕೆರಳಿ, ಕೆಂಪಡರಿದ ಕಣ್ಣುಗಳನ್ನು ಅರಳಿಸುತ್ತಾ, ವೇದಿಕೆಯ ಮೇಲೇರಿದನು. ಅವನು ವೇದಿಕೆಯ ಮೇಲೇರಿಬರುತ್ತಿದ್ದಂತೆಯೇ ಜನ ಸಮೂಹ ಹರ್ಷೋದ್ಗಾರ ಮಾಡಿತು. ಅವನ ಮಾತು ಈ ರೀತಿ ಇತ್ತು:

"ಬಂಧುಗಳೇ, ಈಗತಾನೆ ಮಾತನಾಡಿದ ಮಹನೀಯರು ಯಾವ ಬಣದವರೆಂಬುದೂ, ಯಾವ ಜಾತಿಯವರೆಂಬುದೂ ಅವರ ಮಾತಿನಿಂದಲೇ ತಮಗೆ ತಿಳಿದಿದೆ. ಈ ಮಹನೀಯರು ನನ್ನ ಮೇಲೂ, ಅಮರಚಂದರ ಮೇಲೂ ಅಸಹ್ಯಕರವಾದ ಆಪಾದನೆಗಳನ್ನು ಮಾಡಿದ್ದಾರೆ. ಈ ರಾಜ್ಯದ ಜನರು ನಮ್ಮನ್ನು ಎರಡು ದಶಕದಿಂದಲೂ ಬಲ್ಲವರಾಗಿದ್ದಾರೆ. ಹಲವು ಸಂದರ್ಭಗಳಲ್ಲಿ ಅವರು ನಮ್ಮಿಬ್ಬರನ್ನೂ ಒರೆ ಹಚ್ಚಿ ನೋಡಿದ್ದಾರೆ. ನಮಗೆ ಅಧಿಕಾರ ದಾಹವೂ ಅಲ್ಲ; ಶಂಭು ದಾಮೋದರರ ಜಾತಿಯ ಮೇಲೆ ದ್ವೇಷವೂ ಇಲ್ಲ; ನಮಗೆ ಅಧಿಕಾರ ಬೇಡವೆಂದು ತಮ್ಮ ಸಮ್ಮುಖದಲ್ಲಿ ಇಂದೇ ಪ್ರತಿಜ್ಞೆ ಮಾಡುತ್ತೇವೆ.

"ಈ ರಾಜ್ಯವನ್ನು ಶಂಭು ದಾಮೋದರರ ಜಾತಿಯವರೇ ಆಚಂದ್ರಾರ್ಕವಾಗಿ ಆಳಲಿ. ನಮ್ಮ ಅಭ್ಯಂತರವೇನೂ ಇಲ್ಲ. ಆದರೆ ಆಳುವವರು ಸತ್ಯಸಂಧರಾಗಿ, ನಿಷ್ಪಕ್ಷಪಾತ ಮನೋಭಾವದಿಂದಿರಬೇಕು. ಜಾತ್ಯಾಭಿಮಾನದಿಂದ ರಾಜಕಾರಣದಲ್ಲಿ ಲಂಚಕೋರರಿಗೆ ಬೆಂಬಲ ನೀಡುವುದು ದೇಶದ್ರೋಹವೆಂದು ನಮ್ಮ ಸ್ನೇಹಿತರಿಗೆ ಹೇಳಲಿಚ್ಛಿಸುತ್ತೇನೆ. ಶಂಭು ದಾಮೋದರರ ಸೇವೆ ಇನ್ನೂ ರಾಜ್ಯಕ್ಕೆ ಬಹಳಕಾಲ

ಅಗತ್ಯವಂತೆ! ಪಾಪ! ಅವರ ಸೇವೆಯ ಸವಿಯನ್ನುಂಡು ಸೊರಗಿರುವ ಈ ರಾಜ್ಯದ ಜನರು 'ನಿಮ್ಮ ಸೇವೆ ಸಾಕಪ್ಪಾ' ಎನ್ನುತ್ತಿದ್ದಾರೆ. ಆದರೆ ಈ ಸೇವಾ ಧುರೀಣರು ಬಿಡಬೇಕಲ್ಲ. ವಾಮ ಮಾರ್ಗದಿಂದ ಅಧಿಕಾರಕ್ಕೆ ಬಂದು ತಮ್ಮ ಸೇವೆಯನ್ನು ಒತ್ತಾಯ ಪೂರ್ವಕವಾಗಿ ಜನತೆಯ ಮೇಲೆ ಹೇರುತ್ತಾರೆ. ಜಾತೀಯತೆಯ ಪಿತ್ತನೆತ್ತಿಗೇರಿರುವ ಪಿಶಾಚಿಗಳು ತಮ್ಮನ್ನು ವಿರೋಧಿಸುತ್ತಿರುವವರೆಲ್ಲರನ್ನೂ ಜಾತಿವಾದಿಗಳೆಂದು ಕರೆಯುತ್ತಾರೆ.

"ನಾವು ಕಾಂಗ್ರೆಸ್ ಸಂಸ್ಥೆಯನ್ನೇಕೆ ವಶಪಡಿಸಿಕೊಳ್ಳಬಾರದೆಂದು ಈ ಮಿತ್ರರು ಸವಾಲು ಹಾಕಿದ್ದಾರೆ. ಇವರ ಮುಖಂಡರು, ಲಂಚದಿಂದಲೂ ಮೋಸದಿಂದಲೂ, ಅಕ್ರಮವಾಗಿ ಕಾಂಗ್ರೆಸ್ ಸಂಸ್ಥೆಯನ್ನು ಹೊರತುಪಡಿಸಿಕೊಂಡಿರುವಾಗ, ನಾವು ನೇರ ಮಾರ್ಗದಲ್ಲಿ ಅದನ್ನು ವಶಪಡಿಸಿಕೊಳ್ಳುವುದಾದರೂ ಹೇಗೆ? ಪ್ರಜಾಕಂಟಕರಾದ ಶಂಭು ದಾಮೋದರ ಹೇಯ ಕೃತ್ಯಗಳನ್ನು ಒಂದೊಂದಾಗಿ ಸ್ಮರಿಸಿಕೊಂಡಾಗ, ಕ್ರೋಧಪರವಶವಾಗಿ ನನ್ನ ರಕ್ತ ಕುದಿಯುತ್ತದೆ. ನಿಮ್ಮ ರಕ್ತ ಕುದಿಯುವು ದಿಲ್ಲವೇಕೆ? ನಿಮಗೆ ಆತ್ಮ ಗೌರವವಿಲ್ಲವೇ? ಆತ್ಮ ಸಾಕ್ಷಿ ಇಲ್ಲವೇ? ದೇಶಪ್ರೇಮ ವಿಲ್ಲವೇ? ಪೌರುಷವಿಲ್ಲವೇ? ಹೇಳಿ.... ಹೇಳಿ ಜನತೆಯ ಹಿತಕ್ಕೆ ವಿರೋಧವಾಗಿ ವರ್ತಿಸುವವರು ರಾಷ್ಟ್ರದ್ರೋಹಿಗಳು. ಆ ರಾಷ್ಟ್ರದ್ರೋಹಿಗಳ ಎಂಜಲಿನ ಆಸೆಗಾಗಿ ಅವರ ಗುಲಾಮರಾಗಿ ಬಾಳುವವರಿಗೆ ಧಿಕ್ಕಾರ. ಅವರಿಗೆ ಹೆದರಿ ಬಾಳುವ ಹೆಣ್ಣಿಗರಿಗೆ ತಿರಸ್ಕಾರ. ಷಂಡರಂತೆ ಹೆದರಿ ಬಾಳುವುದಕ್ಕಿಂತ ಆತ್ಮಹತ್ಯೆಯಿಂದ ಸಾಯುವುದು ಮೇಲು. ಭೂಭಾರವಾದರೂ ಕಡಿಮೆಯಾಗುತ್ತದೆ."

"ಪ್ರತಾಪರಾಜನ ಪೌರುಷದ ಭಾಷಣದಿಂದ ಆವೇಶಗೊಂಡ ಸಭಿಕರು ಪ್ರಚಂಡ ಕರತಾಡನ ಮಾಡಿದರು. ಅವನ ಭಾಷಣವಾದ ನಂತರ ಸಮ್ಮೇಳನವು ಹಲವು ನಿರ್ಣಯಗಳನ್ನು ಅಂಗೀಕರಿಸಿತು. ಆ ನಂತರ ಅಧ್ಯಕ್ಷತೆ ವಹಿಸಿದ್ದ ಜಯಸಿಂಹನು ಅಧ್ಯಕ್ಷ ಭಾಷಣಕ್ಕೆ ಎದ್ದು ನಿಂತನು. ಅವನ ಅಂಗಾಂಗಳೆಲ್ಲವೂ ಯೋಧನೆಂಬುದನ್ನು ಸಾರುತ್ತಿದ್ದುವು. ಅವನ ಆಕರ್ಷಕ ಸುಂದರ ಮುಖಭಾವ ಅವನೊಬ್ಬ ಸುಸಂಸ್ಕೃತ ವ್ಯಕ್ತಿ ಎಂಬುದನ್ನು ತೋರಿಸುತ್ತಿತ್ತು. ಅವರ ದಿಟ್ಟ ನಿಲುವು ಅವನೊಬ್ಬ ಮಹಾನಾಯಕ ನೆಂಬುದನ್ನು ಸೂಚಿಸುತ್ತಿತ್ತು. ಅವನೆದ್ದು ನಿಂತೊಡನೆ ದೀರ್ಘ ಹರ್ಷೋದ್ಗಾರಗಳಾದವು. ಅವನ ಭಾಷಣವನ್ನು ಸಭೆ ಏಕಾಗ್ರ ಚಿತ್ತದಿಂದ ನಿಶ್ಶಬ್ದವಾಗಿ ಆಲೈಸುತ್ತಿತ್ತು. ಅವನ ಪುಟ್ಟ ಭಾಷಣ ಈ ರೀತಿ ಇತ್ತು:

"ಬಂಧು ಭಗಿನಿಯರೇ, ತಾವು ನನ್ನ ಮೇಲೆ ಅಭಿಮಾನವಿಟ್ಟು ನನಗೆ ನಾಯಕ ಪಟ್ಟವನ್ನು ಕಟ್ಟಿದ್ದೀರಿ. ತಮ್ಮ ಅಭಿಮಾನಕ್ಕಾಗಿ ನಾನು ಋಣಿಯಾಗಿದ್ದೇನೆ. ನಾನೊಬ್ಬ ಯೋಧ. ಯೋಧನಂತೆ ತಮ್ಮ ಆದೇಶವನ್ನು ಕಾರ್ಯಗತ ಮಾಡುತ್ತೇನೆ. ನನಗೆ ರಾಜಕಾರಣ ಹೊಸದು. ಆದರೆ ತಮ್ಮ ಆಶೀರ್ವಾದದಿಂದ ತಾವು ನನಗೊಪ್ಪಿಸಿದ ಕಾರ್ಯದಲ್ಲಿ ವಿಜಯಿಯಾಗುತ್ತೇನೆಂಬ ಭರವಸೆ ನನಗಿದೆ. ಪ್ರಜಾಪ್ರಭುತ್ವದಲ್ಲಿ ಪ್ರಜೆಗಳೇ ಸಾರ್ವಭೌಮರು. ಆಡಳಿತಗಾರರ ವಿರುದ್ಧ, ಸಾರ್ವಭೌಮರಾದ ಪ್ರಜೆಗಳಿಗಲ್ಲದೆ, ಇನ್ಯಾರಿಗೆ

ದೂರು ಹೇಳಲು ಸಾಧ್ಯ? ಶಂಭು ದಾಮೋದರರ ವಿರುದ್ಧ ನಾವು ಇಂದು ಈ ರಾಜ್ಯದ ಪ್ರಜೆಗಳಿಗೆ ದೂರನ್ನು ಸಲ್ಲಿಸಿದ್ದೇವೆ. ಆ ದೂರನ್ನು ಪರಿಶೀಲಿಸಿ, ಸೂಕ್ತ ಕ್ರಮ ಕೈಗೊಳ್ಳುವುದು ಪ್ರಜೆಗಳಿಗೆ ಸೇರಿದ ಕೆಲಸವಾಗಿದೆ.

"ನಾವು ಈ ದಿವಸ ಸ್ಥಾಪಿಸಿರುವ ಕೂಟಕ್ಕೆ ತಮ್ಮ ಬೆಂಬಲ ನೀಡಬೇಕಾಗಿ ಪ್ರಾರ್ಥಿಸುತ್ತೇನೆ. ನಮ್ಮ ಪೂಜ್ಯ ತಂದೆಯವರ ಸವಿ ನೆನಪಿಗಾಗಿ, ಈ ರಾಜ್ಯದ ಮೇಲ್ಮೆಗಾಗಿ, ಜನಸಾಮಾನ್ಯರ ರಕ್ಷಣೆಗಾಗಿ, ಪ್ರಜಾಪ್ರಭುತ್ವವನ್ನು ಉಳಿಸುವುದಕ್ಕಾಗಿ, ನಾವು ಕೈಗೊಳ್ಳುವ ಎಲ್ಲಾ ಕಾರ್ಯಕ್ರಮಗಳಿಗೂ ಮಹಾಜನರು ಬೆಂಬಲ ನೀಡಬೇಕಾಗಿ ಪ್ರಾರ್ಥಿಸುತ್ತೇನೆ. ನಮ್ಮ ಕಡೆಯವರಿಗೆ ಒಂದು ಮಾತು. ವೇದಾಂತ ಹೇಳುವವರು ವೇದಾಂತಿಗಳಂತೆ ವರ್ತಿಸಬೇಕು. ಶಂಭು ದಾಮೋದರರನ್ನು ಜರಿಯುವವರೂ, ಅವರನ್ನು ಪದಚ್ಯುತಿಗೊಳಿಸಲು ಹೊರಟಿರುವವರೂ, ಅವರಿಗಿಂತ ಉತ್ತಮರಾಗಿ, ಆದರ್ಶವಾದಿಗಳಾಗಿರಬೇಕು. ಯಾವ ಸಂದರ್ಭದಲ್ಲೂ ಹಿಂಸಾತ್ಮಕ ಕೃತ್ಯಕ್ಕೆ ಕೈ ಹಾಕಬಾರದು. ಸಾರ್ವಜನಿಕ ಆಸ್ತಿ ಪಾಸ್ತಿಗಳನ್ನು ನಾಶಪಡಿಸಬಾರದು."

ಜಯಸಿಂಹನು ಮಾತುಗಳನ್ನು ನಿಲ್ಲಿಸುವಷ್ಟರಲ್ಲಿಯೇ "ಜಯಸಿಂಹನಿಗೆ ಜಯವಾಗಲಿ" ಎಂಬುದಾಗಿ ಗಗನಮಂಡಲ ಮೊಳಗುವಂತೆ ಜಯಕಾರವಾಯಿತು.

* * * *

# ೧೮. ಮಹಾಜನರ ಮಹಾಶಕ್ತಿಗೆ ಜಯ

ಸಾರ್ವತ್ರಿಕ ಚುನಾವಣೆ ಸಮೀಪಿಸುತ್ತಿತ್ತು. ಶಂಭು ದಾಮೋದರರ ಕೈ ಗೊಂಬೆಯಾಗಿದ್ದ ರಾಜ್ಯದ ಕಾಂಗ್ರೆಸ್ ಚುನಾವಣಾ ಸಮಿತಿಯು ಅವರ ಅಣತಿಯಂತೆ ಕಾಂಗ್ರೆಸ್ ಅಭ್ಯರ್ಥಿಗಳನ್ನು ಆರಿಸಿದ್ದಿತು. ಆ ಅಭ್ಯರ್ಥಿಗಳು ಶಂಭು ದಾಮೋದರರ ನಾಯಕತ್ವದಲ್ಲಿ ಚುನಾವಣ ರಂಗಕ್ಕೆ ಇಳಿದಿದ್ದರು. ಜಯಸಿಂಹನ ನಾಯಕತ್ವದಲ್ಲಿ ಪ್ರತಿ ಕಾಂಗ್ರೆಸ್ ವಿರೋಧ ಕೂಟವು ತನ್ನ ಪರವಾಗಿ ಪ್ರತಿಯೊಂದು ಚುನಾವಣಾ ಕ್ಷೇತ್ರದಲ್ಲೂ ಪ್ರತಿಸ್ಪರ್ಧಿಗಳನ್ನು ನಿಲ್ಲಿಸಿದ್ದಿತು. ಚುನಾವಣೆಯ ಪ್ರಚಾರ ಬಹಳ ಬಿರುಸಾಗಿ ನಡೆದಿತ್ತು. ಶಂಭು ದಾಮೋದರರೂ, ಅವರ ಬೆಂಬಲಿಗರೂ ಅವರ ಪ್ರತಿಸ್ಪರ್ಧಿಗಳನ್ನು ಕೋಟಾ ಕಾಂಗ್ರೆಸ್ಸಿನವರೆಂದು ಕರೆಯುತ್ತಿದ್ದರು. ಜಯಸಿಂಹನೂ ಅವನ ಕಡೆಯವರೂ ಶಂಭು ದಾಮೋದರರನ್ನೂ, ಅವರ ಕಡೆಯ ಅಭ್ಯರ್ಥಿಗಳನ್ನೂ ಕಪಟ ಕಾಂಗ್ರೆಸ್ಸಿಗರೆಂದು ಕರೆಯುತ್ತಿದ್ದರು.

ಏನೂ ಅರಿಯದ ಅಜ್ಞಾನಿಗಳಿಗೆ ಯಾರು ಕೋಟಾ ಯಾರು ಸಾಚಾ ಎಂಬುದನ್ನು ತಿಳಿಯುವುದೇ ಕಷ್ಟವಾಗಿತ್ತು. ಸರ್ಕಾರ ತಮ್ಮ ಅಧೀನದಲ್ಲಿರುವುದರಿಂದ ತಾವೇ ಪಕ್ಷಕ್ಕೆ ಸೇರಿದವರೆಂದೂ, ತಾವೇ ನಿಜವಾದ ಕಾಂಗ್ರೆಸ್ಸಿಗರೆಂದೂ ಶಂಭು ದಾಮೋದರರು ಸಾರುತ್ತಿದ್ದರು. ಆಡಳಿತ ಪಕ್ಷವನ್ನು ಬಿಟ್ಟು ಬೇರೆಯವರಿಗೆ ಓಟು ಕೊಟ್ಟರೆ ಮುಂದೆ ಒದಗಬಹುದಾದ ಪರಿಣಾಮವನ್ನೆದುರಿಸಬೇಕೆಂದು, ಅವರು ಜನರಲ್ಲಿ ಭಯವನ್ನು ಹುಟ್ಟಿಸುತ್ತಿದ್ದರು. ಓಟನ್ನು ಗಳಿಸಲು ಹಿಂದಿನ ಚುನಾವಣೆಯಲ್ಲಿ ಅನುಸರಿಸಿದ್ದ ವಿಧಾನಗಳನ್ನೇ ಅನುಸರಿಸುತ್ತಿದ್ದರು. ಚುನಾವಣಾ ಪ್ರಚಾರಕ್ಕಾಗಿ ಶಂಭು ದಾಮೋದರರು ಒಂದು ವಿಮಾನವನ್ನು ಕೊಂಡುಕೊಂಡಿದ್ದರು. ಅವರ ಪ್ರಚಾರ ಕಾರ್ಯ ಟೆಲಿವಿಜನ್ ಮೂಲಕ ನಡೆದಿತ್ತು. ಜಯಸಿಂಹನು ತನ್ನ ತಂದೆಯ ಚುನಾವಣಾ ಕ್ಷೇತ್ರವಾದ ನಿಂಬೂರಿನಿಂದ ಸ್ಪರ್ಧಿಸಿದ್ದನು. ಶಂಭು ದಾಮೋದರರು ಅವರ ಹಿಂದಿನ ಕ್ಷೇತ್ರಗಳಿಂದ ಸ್ಪರ್ಧಿಸಿದ್ದರು.

ವಿರೋಧ ಕೂಟದವರು, ತಮ್ಮ ಚುನಾವಣಾ ಪ್ರಚಾರದ ಜೊತೆಗೆ ಶಂಭು ದಾಮೋದರರ ವಿರುದ್ಧ, ಒಂದು ಪ್ರಚಾರ ಚಳವಳಿಯನ್ನು ಕೈ ಗೊಂಡಿದ್ದರು. ಆ ಚಳವಳಿಯ ಅಂಗವಾಗಿ ಮೊಟ್ಟ ಮೊದಲನೆಯ ಸಭೆಯು ನಿಂಬೂರಿನಲ್ಲಿ ಸೇರಿತ್ತು. ಜಯಸಿಂಹನೇ ಆ ಸಭೆಯ ಅಧ್ಯಕ್ಷನಾಗಿದ್ದನು. ಆ ಸಭೆ ಸೇರದಂತೆ ಮಾಡಬೇಕೆಂದು ಶಂಭುವೂ, ಶಾಮಸುಂದರನೂ ಮಸಲತ್ತು ನಡೆಯಿಸಿ ಯಾವುದೋ ಒಂದು ಕುಂಟು ನೆಪದಿಂದ ನಿಷೇಧಾಜ್ಞೆಯನ್ನು ಹೊರಡಿಸಿದರು. ಜನರು ಆ ನಿಷೇಧಾಜ್ಞೆಯನ್ನು ಉಲ್ಲಂಘಿಸಿ

ಸಭೆಯನ್ನು ನಡೆಯಿಸಿದರು. ಜನರ ಮೇಲೆ ಪೋಲಿಸಿನವರೂ, ಶಂಭುವಿನ ಭಕ್ತರೂ ಧಾಳಿಯನ್ನು ಮಾಡಲು ಯತ್ನಿಸಿದರು. ಆದರೆ ಅಸಂಖ್ಯಾತ ಜನಸ್ತೋಮದ ಮುಂದೆ ಅವರ ಆಟ ಏನೂ ನಡೆಯಲಿಲ್ಲ.

ಮರುದಿನ ನಿಂಬೂರಿನಲ್ಲಿ ಶಂಭುವಿನ ಮನೆಯ ಸಮೀಪ ಚಳವಳಿಗಾರರು ಒಂದು ಬಹಿರಂಗ ಸಭೆಯನ್ನು ಏರ್ಪಡಿಸಿದ್ದರು. ಶಂಭು ಆ ದಿನ ಮನೆಯಲ್ಲೇ ಇದ್ದನು. ತನ್ನ ಗಲ್ಲಿಗೆ ತಾನೇ ರಾಜ ಎನ್ನುವಂತೆ, ತನ್ನ ಅಧಿಕಾರದ ಆಡಂಬರವನ್ನು ಪ್ರದರ್ಶಿಸುತ್ತಾ, ಶಂಭು ಸಭೆ ನಡೆಯುವ ಸ್ಥಳಕ್ಕೆ ಹೋಗಿ, ಚಳುವಳಿಗಾರರೊಡನೆ ಸೇರಬಾರದೆಂದು ಜನರಿಗೆ ಉಪದೇಶಮಾಡತೊಡಗಿದನು. ಅವನ ಮಾತುಗಳು ಆರಂಭವಾದದ್ದೊಡನೆ ನಾಲ್ಕೈದು ಕಡೆಗಳಿಂದ ಸಗಣಿಯ ಮುದ್ದೆಗಳು ಅವನ ಮೇಲೆ ಬೀಳಲಾರಂಭಿಸಿದುವು. ಹೆಚ್ಚು ಕಾಲ ಅಲ್ಲಿದ್ದರೆ ಅಪಾಯ ಬರುವುದೆಂದರಿತ, ಶಂಭು ಮಾತುಗಳನ್ನು ಅಲ್ಲಿಗೇ ನಿಲ್ಲಿಸಿ, ಪೋಲೀಸ್ ಪಹರೆಯಲ್ಲಿ ಮನೆ ಸೇರಿ ಆ ದಿನವೇ, ರಾಜಧಾನಿಗೆ ಪ್ರಯಾಣ ಬೆಳೆಸಿದನು.

ಶಂಭು ದಾಮೋದರರ ಐದು ವರ್ಷಗಳ ದಬ್ಬಾಳಿಕೆಯ ದುರಾಡಳಿತದಿಂದ ನೊಂದು, ಬೆಂದು, ಬೇಸತ್ತ ಜನರು ಬಹು ಸಂಖ್ಯೆಯಲ್ಲಿ ವಿರೋಧ ಕೂಟದ ಪ್ರಚಾರ ಸಭೆಗಳಲ್ಲಿ ಭಾಗವಹಿಸುತ್ತಿದ್ದರು. ಆ ಪಾಪಿಗಳು ತೊಲಗಿದರೆ ಸಾಕೆಂದು ಹಾರೈಸುತ್ತಿದ್ದರು. ಅವರ ಕಿರುಕುಳಗಳಿಂದ ಕಷ್ಟಕ್ಕೀಡಾದವರು, ಅವರ ಹಿಂಸೆಯಿಂದ ದುಃಖಕ್ಕೀಡಾದವರು, ಅವರ ಭ್ರಷ್ಟಾಚಾರದಿಂದ ಕೆರಳಿದವರು, ಅವರ ಸ್ವಜನ ಪಕ್ಷಪಾತದಿಂದ ಅಸಮಾಧಾನಗೊಂಡವರು, ಜಯಸಿಂಹನ ಅನುವರ್ತಿಗಳಾಗಿ ವಿರೋಧಕೂಟದ ಸದಸ್ಯರಾದರು. ಜಯಸಿಂಹನೂ ಭಾರ್ಗವದಾಸರೂ, ಅಮರಚಂದರೂ, ಪ್ರತಾಪ ರಾಜನೂ ಹೋದೆಡೆಗಳಲ್ಲೆಲ್ಲಾ ವಿಜೃಂಭಣೆಯ ಮತ್ತು ಮಮತೆಯ ಸ್ವಾಗತ ಲಭಿಸುತ್ತಿತ್ತು. ಜನರ ಉತ್ಸಾಹ ಉದ್ರೇಕಗಳನ್ನು ತಹಬದಿಯಲ್ಲಿಡುವುದೇ ಅವರಿಗೆ ಒಂದು ಕಷ್ಟಕರವಾದ ಸಮಸ್ಯೆಯಾಗಿತ್ತು.

ಅಧಿಕಾರದ ಅಮಲಿನಲ್ಲಿದ್ದ ಶಂಭು ದಾಮೋದರರು ವಿರೋಧ ಕೂಟವು ಜನಪ್ರಿಯತೆಯನ್ನು ಗಳಿಸುವುದೆಂದು ಕನಸಿನಲ್ಲಿಯೂ ತಿಳಿದಿರಲಿಲ್ಲ. ಅವರು ತಮ್ಮ ಅಧಿಕಾರಿಗಳ ಮತ್ತು ಬೆಂಬಲಿಗರ ಸಹಾಯದಿಂದ ವಿರೋಧ ಕೂಟವನ್ನು ತಲೆ ಎತ್ತದಂತೆ ಮಾಡಬಹುದೆಂದು ಭಾವಿಸಿದ್ದರು. ಅವರು ಅದನ್ನು ಹತ್ತಿಕ್ಕಲು ಕಾರ್ಯಕ್ರಮ ಗಳನ್ನು ಯೋಚಿಸುತ್ತಿರುವುದರೊಳಗಾಗಿ, ಅದು ಅವರ ಹತೋಟಿಗೆ ಮೀರಿದ ಪ್ರಯಾಣ ದಲ್ಲಿ ಬೆಳೆದಿತ್ತು. ಶಂಭು ದಾಮೋದರರು, ಕೆಮ್ಮೀರ ಮುಂತಾದವರ ಶಕ್ತಿ ಸಾಮರ್ಥ್ಯಗಳಲ್ಲಿ ವಿಶೇಷ ನಂಬಿಕೆಯನ್ನಿಟ್ಟಿದ್ದರು. ಪ್ರತಿ ಕಾಂಗ್ರೆಸ್ ಸ್ಥಾಪನೆಯಾದ ಮೇಲೆ, ಹೆಮ್ಮೀರ ಮುಂತಾದವರು ಆರ್ಭಟವೆಲ್ಲವೂ, ಟೊಳ್ಳೆಂದು ಅವರಿಗೆ ಅರ್ಥವಾಯಿತು. ಹೆಮ್ಮೀರ, ಕೆಮ್ಮೀರ, ಜಲೋದರ, ಗಾಂಢೀವ ಇವರುಗಳು, ಅವರವರ ಜಿಲ್ಲೆಗಳಲ್ಲಿ, ವಿರೋಧ ಕೂಟದ ವಿರುದ್ಧ ತಮ್ಮ ಬಾಲವನ್ನು ಬಿಚ್ಚಲು ಪ್ರಯತ್ನಿಸಿ, ಜನತೆಯ ಅವಹೇಳನಕ್ಕೆ ಗುರಿಯಾದರು.

ಹೆಮ್ಮೊರನು ಪದ್ಮಗಿರಿ ಜಿಲ್ಲೆಯಲ್ಲಿ ತನ್ನ ಕಡೆಯ ಪುಂಡು ಪೋಕರಿಗಳನ್ನೆಲ್ಲಾ ಸೇರಿಸಿ, ಚಳವಳಿಗಾರರ ವಿರುದ್ಧ ಒಂದು ಸೈನ್ಯವನ್ನೇ ನಿರ್ಮಾಣ ಮಾಡಿದನು. ಒಂದು ದಿನ ಆ ಪುಂಡರು ಆಯುಧ ಸಮೇತರಾಗಿ ಪದ್ಮಗಿರಿ ನಗರದಲ್ಲಿ ವಿರೋಧ ಕೂಟದವರು ನಡೆಯಿಸುತ್ತಿದ್ದ ಪ್ರಚಾರ ಸಭೆಗೆ ನುಗ್ಗಿದರು. ಜಯಸಿಂಪನು ಸೈನಿಕನಾದ್ದರಿಂದ ತನ್ನ ಹಿಂಬಾಲಕರಿಗೆ ವಿರೋಧ ಗುಂಪಿನವರು ನಡೆಯಿಸಬಹು ದಾದ ಹಿಂಸಾತ್ಮಕ ಧಾಳಿಗಳನ್ನು ಯಾವ ರೀತಿ ಎದುರಿಸಬೇಕೆಂಬುದನ್ನು ಮೊದಲೇ ತಿಳಿಸಿದ್ದನು. ಅವನ ಹಿಂಬಾಲಕರು, ಸಭೆಗೆ ನುಗ್ಗಿದ ಹೆಮ್ಮೊರನ ಸೈನ್ಯವನ್ನು ಸುತ್ತುಗಟ್ಟಿ, ಪ್ರತಿ ಹಿಂಸೆಗೆ ಕೈಹಾಕದೆ, ಅವರ ಆಯುಧಗಳನ್ನು ವಶಪಡಿಸಿಕೊಂಡು, ಅವರೆಲ್ಲರಿಗೂ ಅರ್ಧಕ್ಷೌರ ಮಾಡಿಸಿ, ಪದ್ಮಗಿರಿ ನಗರದಲ್ಲಿ ಮೆರವಣಿಗೆ ಮಾಡಿಸಿದರು.

ಸರ್ಕಾರದ ಕೃಪಾಕಟಾಕ್ಷದಿಂದ ಹಲವು ವರ್ಷಗಳಿಂದ ಮೆರೆಯುತ್ತಿದ್ದ, ಹೆಮ್ಮೊರನು ತಾನು ಪದ್ಮಗಿರಿಯ ನವಾಬನೆಂದು ಭಾವಿಸಿದ್ದನು. ಅವನ ಹಿಂಬಾಲಕರಿಗೆ ಸಂಭವಿಸಿದ ಗತಿಯಿಂದ ಅವನು ನಡುಗಿಹೋದನು. ಕೆಲವು ದಿನಗಳ ನಂತರ, ಅವನು ಪದ್ಮಗಿರಿ ನಗರದ ಬೀದಿಗಳಲ್ಲಿ ಓಡಾಡುವುದೇ ಕಷ್ಟವಾಯಿತು. ಅವನನ್ನು ನೋಡಿದೊಡನೆ ಹುಡುಗರು "ಡೊಳ್ಳು ಹೊಟ್ಟೆಯ ಹೆಮ್ಮೊರ, ಲಂಚದ ಮೂರ್ತಿ ಹೆಮ್ಮೊರ, ಎಲ್ಲಾ ಬಿಟ್ಟವ ಹೆಮ್ಮೊರ," ಎಂಬುದಾಗಿ ಕೇಕೆ ಹಾಕುತ್ತಿದ್ದರು. ಹುಡುಗರ ಲೇವಡಿಯನ್ನು ತಾಳಲಾರದೆ ಅವನು ತಲೆಮರೆಸಿಕೊಂಡು ಓಡಾಡುತ್ತಿದ್ದನು.

ಕೆಮ್ಮೊರನು ಗೂಂಢಾಗಿರಿಯಲ್ಲಿ ನಿಸ್ಸೀಮನೆಂದು ಹೆಸರು ಪಡೆದವನು. ಜನರು ಅವನನ್ನು ಕಂಡು ನಡುಗುತ್ತಿದ್ದರು. ವಿರೋಧ ಕೂಟವು ಪ್ರವರ್ಧಮಾನಕ್ಕೆ ಬಂದ ಮೇಲೆ ಜನರಿಗೆ ಅವನ ಮೇಲಿದ್ದ ಹೆದರಿಕೆ ಮಾಯಾವಾಗುತ್ತಾ ಬಂದಿತ್ತು. ಕೆಮ್ಮೊರನು ನಾನಾ ವಿಧವಾಗಿ ಜನರಿಗೆ ಹಿಂಸೆ ಕೊಟ್ಟಿದ್ದನು. ಅವನು ಮಾಡಿದ್ದ ಅನ್ಯಾಯ, ಅಕೃತ್ಯಗಳಿಗೆ ಮಿತಿಯೇ ಇರಲಿಲ್ಲ. ಜನರು ಅವನನ್ನು ಜೀವಸಹಿತ ಸುಡುವುದಕ್ಕೂ ಸಿದ್ಧರಾಗಿದ್ದರು. ಆದರೆ ಅವರು ಜಯಸಿಂಹನ ಕಟ್ಟಾಜ್ಞೆಯನ್ನು; ಮೀರುವಂತಿರಲಿಲ್ಲ. ಯಾವ ಸಂದರ್ಭದಲ್ಲೂ ಹಿಂಸಾಕೃತ್ಯಕ್ಕೆ ಕೈ ಹಾಕಬಾರದೆಂದು, ಜಯಸಿಂಹನು ತನ್ನ ಹಿಂಬಾಲಕರಿಗೆ ಆಜ್ಞೆ ಮಾಡಿದ್ದನು.

ಕೆಮ್ಮೊರನು ಒಂದು ದಿನ ರಾತ್ರಿ ತನ್ನ ಕಡೆಯ ಕೇಡಿಗಳೊಂದಿಗೆ ತನ್ನ ತಾಲ್ಲೂಕಿನ ವಿರೋಧ ಕೂಟದ ಮುಖಂಡರೊಬ್ಬರ ಮನೆಗೆ ಹೋಗಿ ಮುತ್ತಿಗೆ ಹಾಕಿದನು. ಆ ಮುಖಂಡನ ಮನೆಗೆ ಮನೆಗೆ ಬೆಂಕಿ ಹಚ್ಚಿ ಅವನನ್ನೂ, ಅವನ ಮನೆಯವರನ್ನೂ ಜೀವಸಹಿತ ಸುಡಬೇಕೆಂದು ಕೆಮ್ಮೊರನು ಸಂಚು ನಡೆಸಿದ್ದನು. ಜಯಸಿಂಹನ ಹಿಂಬಾಲಕರಿಗೆ ಆ ಸಂಚಿನ ಸುಳಿವು ಮೊದಲೇ ತಿಳಿದಿತ್ತು. ಕೆಮ್ಮೊರನು ವಿರೋಧ ಕೂಟದ ಮುಖಂಡನ ಮನೆಗೆ ಮುತ್ತಿಗೆ ಹಾಕಿದೊಡನೆ, ಜಯಸಿಂಹನ ಹಿಂಬಾಲಕರು ಅವನ ಮತ್ತು ಅವನ ಕಡೆಯ ಕೇಡಿಗಳನ್ನು ಸುತ್ತುಗಟ್ಟಿದರು. ಏಕಾಏಕಿ ತಮ್ಮ ಮೇಲೆರಗಿದ ಜನಸಮೂಹವನ್ನು ನೋಡಿದ ಕೆಮ್ಮೊರನೂ, ಅವನ ಹಿಂಬಾಲಕರೂ ಗಾಬರಿಗೊಂಡು

ಶರಣಾಗತರಾದರು. ಜಯಸಿಂಹನ ಹಿಂಬಾಲಕರು ಕೇಡಿಗಳನ್ನು ಹೊಡೆದೋಡಿಸಿ, ಕೆಮ್ಮೀರನನ್ನು ಸೆರೆಹಿಡಿದರು. ಮರುದಿನ ಅವನನ್ನು ಅವನೂರಿಗೆ ಎಳೆದೊಯ್ದು ಎಲ್ಲರೆದುರು ಪಾದರಕ್ಷೆಯ ಪೂಜೆಯನ್ನು ಮಾಡಿ, ಕತ್ತೆಯ ಮೇಲೆ ಮೆರವಣಿಗೆ ಮಾಡಿಸಿದರು. ಮನುಷ್ಯರನ್ನು ಜೀವ ಸಹಿತ ಸುಡಬೇಕೆಂದಿದ್ದ ಆ ರಕ್ಕಸನಿಗೆ ಅವರು ವಿಧಿಸಿದ್ದ ಶಿಕ್ಷೆ ಕ್ರೂರವಾದುದೇನೂ ಆಗಿರಲಿಲ್ಲ.

ಜಲೋದರನು ತನ್ನ ತಾಲ್ಲೂಕಿನಲ್ಲಿ ಜನರು ವಿರೋಧಕೂಟಕ್ಕೆ ಸೇರದಂತೆ ತಡೆಗಟ್ಟಲು ಅಲ್ಪಸ್ವಲ್ಪ ಕುತಂತ್ರ ನಡೆಯಿಸಿದನು. ಅವನ ಕುತಂತ್ರವನ್ನರಿತ ಅವನೂರಿನ ಯುವಕ ಅವನನ್ನು ಹಿಡಿದುಕೊಂಡು, ಅವನ ಕೈಗೆ ಪ್ಲಕಾರ್ಡ್ ಒಂದನ್ನು ಕೊಟ್ಟು "ಶಂಭು ದಾಮೋದರರಿಗೆ ಧಿಕ್ಕಾರ" ಎಂಬುದಾಗಿ ಬೀದಿ ಬೀದಿಗಳಲ್ಲಿ ಅವನು ಕೂಗುವಂತೆ ಮಾಡಿದರು. ರಾಜಧಾನಿಯಲ್ಲಿ ಪಟವಾರನೂ, ಮಹೋದರನೂ, ಗಾಂಢೀವನೂ ಮಸಲತ್ತು ಮಾಡಿ, ಚಳವಳಿಗಾರರ ಮೇಲೆ ಗೂಂಡಾಗಳನ್ನು ಛೂ ಬಿಡಲು ಪ್ರಯತ್ನಿಸಿದರು. ಆದರೆ ಅವರ ಆಟ ರಾಜಧಾನಿಯಲ್ಲಿ ನಡೆಯಲಿಲ್ಲ. ಸೂಕ್ಷ್ಮಮತಿಯಾದ ದಾಮೋದರನು ಬಹಿರಂಗವಾಗಿ ಘರ್ಷಣೆಗೆ ಇಳಿಯದೆ, ಗುಪ್ತವಾಗಿ ಪ್ರತಿ ಕಾಂಗ್ರೆಸ್ಸಿನ ಮೂಲೋತ್ಪಾಟನೆಗೆ ಸರ್ವ ಪ್ರಯತ್ನವನ್ನೂ ಮಾಡುತ್ತಿದ್ದನು.

ದಾಮೋದರನೂ, ಶಂಭುವೂ ತಮಗಾಪ್ತರಾದ ಅಧಿಕಾರಿಗಳೊಡನೆ ಸಮಾಲೋಚಿಸಿ, ಬಲಪ್ರಯೋಗ ಮಾಡದಿದ್ದರೆ ವಿರೋಧಕೂಟವನ್ನು ಬಗ್ಗಿಸಲಾಗುವು ದಿಲ್ಲವೆಂಬ ತೀರ್ಮಾನಕ್ಕೆ ಬಂದು, ರಾಜ್ಯದ ಹಲವು ಕಡೆಗಳಲ್ಲಿ ಚಳವಳಿಗಾರರು ನಡೆಯಿಸುತ್ತಿದ್ದ ಪ್ರಚಾರ ಸಭೆಗಳನ್ನು ಚದುರಿಸಲು ಲಾಠಿ ಪ್ರಹಾರ ಮಾಡಿಸಿದರು. ಕೆಲವು ಕಡೆಗಳಲ್ಲಿ ಗುಂಡು ಹಾರಿಸಿದರು. ಗುಂಡಿನೇಟಿನಿಂದ ರಾಜ್ಯದ ಹಲವು ಕಡೆಗಳಲ್ಲಿ ಕೆಲವರು ಸತ್ತರು. ರಾಷ್ಟ್ರ ರಕ್ಷಣಾ ಕಾನೂನಿನ ವಿಧಿಗಳ ಪ್ರಕಾರ ರಾಜ್ಯದ ಆದ್ಯಂತ ಹಲವರನ್ನು ಬಂಧಿಸಲಾಯಿತು. ಹಲವರ ಮೇಲೆ ಮೊಕದ್ದಮೆಗಳನ್ನು ಹೂಡಿಸಲಾಯಿತು. ಆದರೆ ವಿರೋಧಕೂಟವು ದಿನೇ ದಿನೇ ಪ್ರಬಲವಾಗತೊಡಗಿತು.

ಶಂಭು ದಾಮೋದರರು ನಡೆಯಿಸಿದ್ದ ಹೇಯ ಕೃತ್ಯಗಳ ವಿವರಗಳನ್ನೊಳ ಗೊಂಡ ಕಿರುಹೊತ್ತಿಗೆಗಳು ರಾಜ್ಯದ ಎಲ್ಲಾ ಕಡೆಗಳಲ್ಲಿಯೂ ತೂರಾಡುತ್ತಿದ್ದುವು. ಶಂಭು ದಾಮೋದರರು ಹೋದಕಡೆಗಳಲ್ಲೆಲ್ಲಾ ಅವರಿಗೆ ಕಪ್ಪು ಭಾವುಟಗಳ ಸ್ವಾಗತ ಕಾದಿರುತ್ತಿತ್ತು. ಬರಬರುತ್ತಾ ಅವರುಗಳು ಬಹಿರಂಗವಾಗಿ ತಿರುಗುವುದೂ ಕೂಡ ಕಷ್ಟವಾಯಿತು. ಅವರಿಬ್ಬರ ಮನೆಗಳ ಸುತ್ತ ಶಸ್ತ್ರಸಜ್ಜಿತ ಪೋಲಿಸರ ಕಾವಲಿತ್ತು. ಸರ್ಕಾರದ ಬಲಪ್ರಯೋಗ ಹೆಚ್ಚಾದಂತೆಲ್ಲಾ ಜನರ ಧೈರ್ಯೋತ್ಸಾಹಗಳೂ ಹೆಚ್ಚಾಗುತ್ತಿದ್ದುವು.

ಕೇವಲ ಕೆಲವು ತಿಂಗಳುಗಳೊಳಗಾಗಿ ಜಯಸಿಂಹನು ರಾಜ್ಯದ ನೆಚ್ಚಿನ ನಾಯಕನಾದನು. ಜನರು ಸ್ವಯಂಪ್ರೇರಿತರಾಗಿ ಅವನಿಗೆ ಧನಸಹಾಯ ಮಾಡು ತ್ತಿದ್ದರು. ಶಂಭು ದಾಮೋದರರಿಗೆ ಕಂಟ್ರಾಕ್ಟರುಗಳು ಮತ್ತು ದಲ್ಲಾಳಿಗಳ ಸ್ವಾರ್ಥಪ್ರೇರಿತ ಬೆಂಬಲ ದೊರಕಿದ್ದರೆ, ಜಯಸಿಂಹನಿಗೆ ಜನರ ನಿಸ್ವಾರ್ಥ ಬೆಂಬಲ ದೊರಕಿತ್ತು.

ಅವನು ಹೋದೆಡೆಗಳಲ್ಲೆಲ್ಲಾ ಜನರು ತಂಡೋಪತಂಡವಾಗಿ ಅವನ ಬಳಿಗೆ ಬಂದು ಗೌರವ ಸಲ್ಲಿಸುತ್ತಿದ್ದರು.

ಶಂಭು ದಾಮೋದರರ ಪ್ರಭಾವ ಪ್ರಾಬಲ್ಯಗಳು, ಅವರಿಗೆ ಗೊತ್ತಾಗದ ರೀತಿಯಲ್ಲಿ ಕಡಿಮೆಯಾಗುತ್ತಿದ್ದುವು. ಹೇಮಾವತಿ ರಾಜ್ಯದ ಸರ್ವಾಧಿಕಾರಿಗಳಂತೆ ಐದು ವರ್ಷಗಳ ಕಾಲ ಮೆರೆದಿದ್ದ ಅವರ ಶಕ್ತಿ ಏಕಾಏಕಿ ಕುಂದುತ್ತಿರುವುದನ್ನು ನೋಡಿ ಜನರು ಆಶ್ಚರ್ಯಪಡುತ್ತಿದ್ದರು. ಅವರ ಕೈಯಲ್ಲಿ ಅಧಿಕಾರವು ಇತ್ತು; ಹಣವೂ ಇತ್ತು. ರಾಜ್ಯದ ಆಗರ್ಭ ಶ್ರೀಮಂತರೆನಿಸಿಕೊಂಡಿದ್ದ ಮಹೋದರ ಮುಂತಾದವರು ಬೆಂಬಲವೂ ಇತ್ತು. ಅಲ್ಲದೆ ವಿವಿಧ ಜಿಲ್ಲೆಗಳಲ್ಲಿ ತುಂಡು ಪಾಳೆಯಗಾರರಂತಿದ್ದ ಹೆಮ್ಮಾರ ಮುಂತಾದವರ ಸಹಾಯವೂ ಇತ್ತು. ಆದರೆ ಮಹಾಜನರ ಮಹಾಶಕ್ತಿಯ ಮುಂದೆ ಇವುಗಳು ಯಾವ ಪ್ರಯೋಜನಕ್ಕೂ ಬರಲಿಲ್ಲ.

ಹೆಮ್ಮಾರ, ಕೆಮ್ಮಾರ, ಜಲೋದರ ಮುಂತಾದ ಪುಢಾರಿಗಳು ಶಂಭು ದಾಮೋದರನ ಉಚ್ಛಿಷ್ಟಾನ್ನ ತಿಂದು ಸರ್ಕಾರದ ಆಶ್ರಯದಲ್ಲಿ ಕೊಬ್ಬಿದವರು. ಸರ್ಕಾರವೇ ತತ್ತರಿಸುತ್ತಿದ್ದಾಗ ಈ ಹೆಗ್ಗಣಗಳನ್ನು ಕೇಳುವವರಾರು? ಅಧಿಕಾರವಿದ್ದಾಗ ಅಥವಾ ಅಧಿಕಾರದಲ್ಲಿದ್ದವರ ಆಶ್ರಯವಿದ್ದಾಗ ಕೆಲವರು ಗಣ್ಯವ್ಯಕ್ತಿಗಳಾಗುತ್ತಾರೆ. ಅಧಿಕಾರದ ಊರೆಗೋಲಿನ ಆಶ್ರಯ ತಪ್ಪಿದಾಗ ಅವರ ನೈಜ ಶಕ್ತಿ ಬಯಲಿಗೆ ಬರುತ್ತದೆ. ಹೆಮ್ಮಾರ ಮುಂತಾದವರ ನೈಜ ಶಕ್ತಿ ಬಯಲಿಗೆ ಬರುವ ಸೂಚನೆ ಸ್ಪಷ್ಟವಾಗಿ ಕಾಣುತ್ತಿತ್ತು.

ಇತ್ತ ಚುನಾವಣಾ ರಂಗದಲ್ಲಿ ಉದ್ರಿಕ್ತ ವಾತಾವರಣ ಉದ್ಭವಿಸಿತ್ತು. ವಿರೋಧದ ಬಿಸಿ ತಟ್ಟಿದ್ದ ಶಂಭು ದಾಮೋದರರು ಚುನಾವಣೆಯಲ್ಲಿ ಏನಾದರೂ ಮಾಡಿ, ಹೇಗಾದರೂ ಮಾಡಿ ಗೆಲ್ಲಬೇಕೆಂದು ಸರ್ವಸಾಹಸ ಮಾಡುತ್ತಿದ್ದರು. ಚುನಾವಣೆಯಲ್ಲಿ ತಮ್ಮ ಕಡೆಯವರು ಬಹು ಸಂಖ್ಯೆಯಲ್ಲಿ ಗೆದ್ದು ಬಂದರೆ, ರಾಜ್ಯದಲ್ಲಿ ಬಹುಮತ ತಮ್ಮ ಕಡೆಗಿದೆ ಎಂಬ ನೆಪದಿಂದ, ವಿರೋಧಕೂಟವನ್ನು ಗುಂಡು, ಲಾಠಿಗಳಿಂದ ಸದೆ ಬಡಿಯಬಹುದೆಂದು ಅವರು ಯೋಚಿಸುತ್ತಿದ್ದರು. ರಾಜ್ಯದ ಎಲ್ಲಾ ಚುನಾವಣಾ ಕ್ಷೇತ್ರಗಳಲ್ಲೂ ಹಣ ಹೆಂಡಗಳ ಧಾರೆ ಹರಿಯುತ್ತಿತ್ತು. ಶಂಭು, ದಾಮೋದರರು ವಿಮಾನದಲ್ಲಿ ಎಲ್ಲಾ ಚುನಾವಣಾ ಕ್ಷೇತ್ರಗಳಿಗೂ ಆಗಾಗ ಹೋಗಿ ತಮ್ಮ ಅನುವರ್ತಿಗಳಿಗೆ ಸೂಕ್ತ ಸಲಹೆಗಳನ್ನೂ, ಸ್ಫೂರ್ತಿಗಳನ್ನೂ ನೀಡುತ್ತಿದ್ದರು. ಪ್ರಚಾರ ದರ್ಶನದ (ಟೆಲಿವಿಜನ್) ಮೂಲಕ ಪ್ರಚಾರ ಭಾಷಣಗಳನ್ನು ಮಾಡುತ್ತಿದ್ದರು.

ಮುಂಬರುವ ಐದು ವರ್ಷಗಳಲ್ಲಿ ರಾಜ್ಯದಲ್ಲಿ ಹೆಚ್ಚಿನ ಆರ್ಥಿಕ ಪ್ರಗತಿಯನ್ನು ಸಾಧಿಸುವುದಾಗಿಯೂ, ಬಡಬಗ್ಗರ ಸ್ಥಿತಿಗತಿಗಳನ್ನು ಸುಧಾರಿಸುವುದಾಗಿಯೂ ಶಂಭು ದಾಮೋದರರು ರಾಜ್ಯದ ಜನರಿಗೆ ಒಣ ಭರವಸೆಗಳನ್ನು ನೀಡುತ್ತಿದ್ದರು. ಆದರೆ ಹಿಂದಿನ ಐದು ವರ್ಷಗಳಲ್ಲಿ ಆಗಿದ್ದ ಅನ್ಯಾಯ ಅಕ್ರಮಗಳ ಕಹಿ ನೆನಪುಗಳನ್ನು ಜನರು ಸುಲಭವಾಗಿ ಮರೆಯುವಂತಿರಲಿಲ್ಲ. ಆದ್ದರಿಂದ ಜನರನ್ನು ಸುಲಭವಾಗಿ ಮರುಳುಮಾಡುವುದು ಸಾಧ್ಯವಿರಲಿಲ್ಲ. ಅವರ ಒಣ ಭರವಸೆಗಳಿಗೆ ಪ್ರತಿಯಾಗಿ

ಮತದಾರರೂ ಕೂಡ ಒಣ ಭರವಸೆಯ ಮಾತುಗಳನ್ನಾಡುತ್ತಿದ್ದರು. ಶಂಭು ದಾಮೋದರರಾಗಲಿ, ಅವರ ಬೆಂಬಲಿತರಾಗಲಿ ಮತ ಯಾಚಿಸಲು ಬಂದಾಗ ಜನರು ಬುದ್ಧಿವಂತಿಕೆಯಿಂದ, "ಸರ್ಕಾರ ಬಿಟ್ಟು ಬಾಳೋದು ಹ್ಯಾಗೆ? ನಮ್ಮೋಟು ಸರ್ಕಾರಕ್ಕೇ," ಎಂದು ಹೇಳಿ ಜಾರಿಕೊಳ್ಳುತ್ತಿದ್ದರು.

ಶಂಭು ದಾಮೋದರರಿಗೆ ಚುನಾವಣೆಯ ಸೋಲು ಗೆಲುವುಗಳು ಅಳಿವು ಉಳಿವಿನ ಪ್ರಶ್ನೆಯಾಗಿತ್ತು. ಇದ್ದ ಬದ್ದವರ ಕಾಲುಗಳನ್ನು ಹಿಡಿಯುತ್ತಿದ್ದರು. ತಮ್ಮನ್ನು ಕೈ ಬಿಡಬಾರದೆಂದು ಅತಿ ವಿನಯದಿಂದ ಮತದಾರರಲ್ಲಿ ಮೊರೆಯಿಡುತ್ತಿದ್ದರು. ಮತದಾರರು ವಿರೋಧವಾಗಿದ್ದಾರೆಂದು ಸ್ಪಷ್ಟವಾಗಿ ಕಂಡ ಕಡೆಗಳಲ್ಲಿ ಭಯೋತ್ಪಾದನೆಯನ್ನೂ, ಬಲಾತ್ಕಾರವನ್ನೂ ಪ್ರಯೋಗಿಸುತ್ತಿದ್ದರು. ಹುಂಬನಾದ ಶಂಭು ದಾಮೋದರನ ಒಣ ಭರವಸೆಗಳಿಂದ ತೃಪ್ತನಾಗಿ ತನ್ನ ಗುಂಪಿನವರಿಗೆ ಜಯ ಸಿದ್ಧವೆಂದು ಭಾವಿಸಿದ್ದ. ಆದರೆ ದಾಮೋದರನು ನೈಜ ಸ್ಥಿತಿಯನ್ನು ಗ್ರಹಿಸಿದ್ದನು. ಚುನಾವಣೆ ಸಮೀಪಿಸುತ್ತಿರುವಾಗ ಅವರಿಬ್ಬರೂ ಹತಾಶರಾಗಿ, ವೈರಿಗಳ ಕೈಯಲ್ಲಿ ಸಿಕ್ಕಿ ಸಾಯುವ ಪ್ರಾಣಿಗಳು ಜೀವದ ಹಂಗು ತೊರೆದು ಹೋರಾಡುವಂತೆ, ಅವರು ನಾನಾವಿಧವಾದ ಅಸ್ತ್ರಗಳನ್ನು ಉಪಯೋಗಿಸುತ್ತಿದ್ದರು.

ಚುನಾವಣೆ ನಡೆಯಿತು. ಶಂಭು ದಾಮೋದರರು ಠೇವಣಿಯನ್ನು ಕಳೆದುಕೊಂಡು ಅಪಮಾನಕರವಾದ ರೀತಿಯಲ್ಲಿ ಪರಾಜಿತರಾದರು. ಜಯಸಿಂಹನು ಪ್ರಚಂಡ ಬಹುಮತಗಳಿಸಿ ಜಯಶಾಲಿಯಾದನು. ಪ್ರತಿ ಕಾಂಗ್ರೆಸ್ಸಿನ ಸ್ಪರ್ಧಿಗಳು ಬಹು ಸಂಖ್ಯೆಯಲ್ಲಿ ಚುನಾಯಿತರಾಗಿದ್ದರು. ಜನರ ಆನಂದ, ಉತ್ಸಾಹಗಳಿಗೆ ಪಾರವೇ ಇರಲಿಲ್ಲ. ರಾಜ್ಯದಲ್ಲಿ ಎಲ್ಲಿ ನೋಡಿದರೂ ವಿಜಯೋತ್ಸವದ ವಾತಾವರಣವಿತ್ತು. ಚುನಾವಣೆ ಮುಗಿದ ಮೇಲೆ ಜಯಶೀಲನಾದ ಜಯಸಿಂಹನಿಗೆ ನಿಂಬೂರಿನಲ್ಲಿ ಮತ್ತು ರಾಜಧಾನಿಯಲ್ಲಿ ದೊರಕಿದ್ದ ಸಂಭ್ರಮದ ಸ್ವಾಗತಗಳು ಚರಿತ್ರಾರ್ಹವಾಗಿದ್ದವು. ಹಿಂದೆ ಯಾವ ನಾಯಕನಿಗೂ ಅಂತಹ ಅದ್ಭುತ ಸ್ವಾಗತ ಸಿಕ್ಕಿರಲಿಲ್ಲ. ಜಯಸಿಂಹನು ರಾಜ್ಯದ ಏಕೈಕ ನಾಯಕನಾಗಿದ್ದನು. ಆದರೂ ಆತನು ಹೆಮ್ಮೆ ಪಡದೆ, ಜಯದಿಂದ ಮೈಮರೆಯದೆ, ಎಲ್ಲರೊಂದಿಗೂ ವಿನಯ, ನಮ್ರತೆಗಳಿಂದ ವರ್ತಿಸುತ್ತಿದನು.

ಚುನಾವಣೆಯ ಫಲಿತಾಂಶ ಹೊರಬಿದ್ದ ಹದಿನೈದು ದಿನಗಳ ತರುವಾಯ ವಿರೋಧಕೂಟದ ಜಯಸಿಂಹನು ಪ್ರತಿಸ್ಪರ್ಧಿ ಇಲ್ಲದೆ ಶಾಸನಸಭೆಯ ನಾಯಕನಾಗಿ ಮುಖ್ಯಮಂತ್ರಿಯಾದನು.

ಹೇಮಾವತಿ ರಾಜ್ಯದ ಜನರ ಆನಂದಕ್ಕೆ ಪಾರವೇ ಇರಲಿಲ್ಲ. ದುರ್ಗಾದಾಸರ ಹಿಂಬಾಲಕರು ಪುಳಕಿತರಾದರು. ನಿರ್ಮಲಾದೇವಿಯವರು ಆನಂದ ಭಾಷ್ಪವನ್ನು ಸುರಿಸಿದರು. ಜಯಸಿಂಹನು ಅಧಿಕಾರವನ್ನು ಸ್ವೀಕರಿಸಿದ ದಿನ ರಾಜ್ಯದ ಎಲ್ಲಾ ಕಡೆಗಳಲ್ಲೂ ವಿಜಯೋತ್ಸವವು ವಿಜೃಂಭಣೆಯಿಂದ ನಡೆಯಲ್ಪಟ್ಟಿತು. ಶಂಭು ದಾಮೋದರರು ಅಧಿಕಾರ ಸ್ವೀಕರಿಸಿದಾಗ ಅವರ ಭಕ್ತ ವೃಂದದವರೂ, ಅಧಿಕಾರದಲ್ಲಿ ಇದ್ದವರನ್ನು ಆರಾಧಿಸುವ

ಆಸಕ್ತಹಿತ ಜನರೂ ಸೇರಿ ವಿಜಯೋತ್ಸವವನ್ನು ನೆರವೇರಿಸಿದ್ದರು. ಜಯಸಿಂಹನ ವಿಜಯೋತ್ಸವವನ್ನು ಜನಸಾಮಾನ್ಯರು ಹೃತ್ಪೂರ್ವಕವಾಗಿ ಪ್ರೇಮದಿಂದ ನೆರವೇರಿಸಿದರು.

ಅದುವರೆಗೆ ರಾಜಕೀಯರಂಗದಲ್ಲಿ ಎಂದೂ ಇರದ ನಿವೃತ್ತ ಯೋಧನೊಬ್ಬನು ರಾಜ್ಯದ ಮುಖ್ಯಮಂತ್ರಿಯಾದುದು ರಾಜ್ಯದ ಹೊರಗಡೆಯವರಿಗೂ, ದೆಹಲಿಯ ಕಾಂಗ್ರೆಸ್ ವರಿಷ್ಠರಿಗೂ ಆಶ್ಚರ್ಯವನ್ನು ಉಂಟುಮಾಡಿತು. ಶಂಭು ದಾಮೋದರರು ಅತ್ಯಂತ ಬಲಶಾಲಿಗಳೆಂದೂ, ಅವರು ತಮ್ಮ ಎದುರಾಳಿಗಳನ್ನೆಲ್ಲಾ ಮೂಲೆಗೆ ಕೂರಿಸಿ ಸರ್ವಾಧಿಕಾರಿಗಳಂತೆ ರಾಜ್ಯಭಾರ ನಡೆಸುತ್ತಿದ್ದರೆಂದೂ, ಅವರು ಇನ್ನೂ ಬಹಳ ಕಾಲ ನಿರಾತಂಕವಾಗಿ ಆಳಬಹುದೆಂದೂ ಭಾರತದಲ್ಲೆಲ್ಲಾ ಪ್ರತೀತಿ ಇತ್ತು. ಆದ್ದರಿಂದ ಈ ಅನಿರೀಕ್ಷಿತ ಬದಲಾವಣೆಯು ಅನೇಕರನ್ನು ಚಕಿತಗೊಳಿಸಿತ್ತು. ರಾಷ್ಟ್ರಾಧ್ಯಕ್ಷರಿಂದ ಪ್ರಶಸ್ತಿ ಪಡೆದ ನಿವೃತ್ತ ಸೇನಾಧಿಕಾರಿಯೊಬ್ಬನು ಚುನಾವಣೆಯಲ್ಲಿ ಗೆದ್ದು ಬಂದು, ಒಂದು ರಾಜ್ಯದ ಮುಖ್ಯಮಂತ್ರಿಯಾದುದು ಇಡೀ ರಾಷ್ಟ್ರದಲ್ಲೇ ಒಂದು ವಿಶೇಷ ಸುದ್ದಿಯಾಗಿತ್ತು. ಕೇಂದ್ರ ಕಾಂಗ್ರೆಸ್ಸಿನ ವರಿಷ್ಠರಿಗೆ ಜಯಸಿಂಹನು ಮುಖ್ಯಮಂತ್ರಿಯಾದುದು ಸಂತೋಷವನ್ನುಂಟುಮಾಡಿತು. ಆ ಸಂತೋಷಕ್ಕೆ ಕಾರಣವು ಇದ್ದುವು. ಅವರಿಗೆ ಜಯಸಿಂಹನು ದುರ್ಗಾದಾಸರ ಮಗನೆಂಬುದು ತಿಳಿದಿತ್ತು. ಅವನು ರಣರಂಗದಲ್ಲಿ ಅದ್ವಿತೀಯ ಪರಾಕ್ರಮ ತೋರಿದ ವಿಚಾರವೂ ತಿಳಿದಿತ್ತು. ಶಂಭು ದಾಮೋದರರ ದುರಾಡಳಿತದ ವಿಚಾರ ಅವರ ಕಿವಿಗೆ ಆಗಾಗ ಬೀಳುತ್ತಿತ್ತು. ಆದರೆ ರಾಜ್ಯದ ಶಾಸನಸಭೆಯಲ್ಲಿ ಅವರಿಗೆ ಬಹುಮತವಿದ್ದುದರಿಂದ ಅವರ ಮೇಲೆ ಯಾವ ಕ್ರಮವನ್ನೂ ಕೈಗೊಳ್ಳಲಾಗಿರಲಿಲ್ಲ. ಆದ್ದರಿಂದ ಈ ಅನಿರೀಕ್ಷಿತ ಬದಲಾವಣೆಯು ಕೇಂದ್ರದ ವರಿಷ್ಠರಿಗೆ ಸಂತಸವನ್ನುಂಟುಮಾಡಿತು.

* * * *

# ೧೯. ಪಾಪಿಗಳಿಗೆ ತಕ್ಕ ಪ್ರಾಯಶ್ಚಿತ್ತ

ಅಧಿಕಾರವನ್ನು ಕಳೆದುಕೊಂಡು ಶಂಭು ದಾಮೋದರರೂ, ಅವರ ದುಷ್ಟ ಹಿಂಬಾಲಕರೂ ಹಲ್ಲುಕಿತ್ತ ಹಾವಿನಂತಾಗಿದ್ದರು. ಕೇವಲ ಒಂದು ತಿಂಗಳ ಹಿಂದೆ ಅವರಿಬ್ಬರೂ ಅಟ್ಟಹಾಸದಿಂದ ರಾಜರಂತೆ ಮೆರೆಯುತ್ತಿದ್ದರು. ಅವರ ಮಾತು ವೇದವಾಕ್ಯವಾಗಿತ್ತು. ಅವರನ್ನು ವಿರೋಧಿಸಿದವರು ಬಾಳುವುದೇ ಕಷ್ಟವಾಗಿತ್ತು. ಅವರನ್ನು ಕಂಡು ಜನರು ನಡುಗುತ್ತಿದ್ದರು. ಅಧಿಕಾರ ತಪ್ಪಿದ ಮೇಲೆ ಜನರನ್ನು ಕಂಡು ಅವರು ನಡುಗುತ್ತಿದ್ದರು. ಯಾವ ಗಳಿಗೆಯಲ್ಲಿ ಜನರು ತಮ್ಮ ಮೇಲೆ ಬೀಳುವರೋ ಎಂಬ ಭಯ ಸದಾ ಅವರನ್ನು ಬಾಧಿಸುತ್ತಿತ್ತು.

ದುಷ್ಟದಂಡಿನ ದಳವಾಯಿಗಳಂತಿದ್ದ ಹೆಮ್ಮಾರ, ಕೆಮ್ಮಾರ, ಜಲೋದರ, ಗಾಂಢೀವ ಮುಂತಾದವರು ಸರ್ಕಾರದ ಆಶ್ರಯದಲ್ಲಿ ಕಟ್ಟಿರುವೆಗಳಂತೆ ಬೆಳೆದು, ತಮಗಾಗದವರನ್ನು ಕಡಿಯುತ್ತಿದ್ದರು. ಸರ್ಕಾರದ ಆಶ್ರಯ ತಪ್ಪಿದ ಮೇಲೆ ಅವರು ಮೊದ್ದು ಜಂತುಗಳಾದ ಗೊದ್ದಗಳಂತಾದರು. ಅವರು ಶಂಭು ದಾಮೋದರರ ಆಶ್ರಯದಲ್ಲಿ ಪ್ರಾಂತಗಳನ್ನಾಳುವ ಸತ್ರಪಜೆಗಳಂತೆ ಅವರವರ ಜಿಲ್ಲೆಗಳಲ್ಲಿ ವರ್ತಿಸುತ್ತಿದ್ದರು. ಸರ್ಕಾರ ಬದಲಾವಣೆಯಾದ ನಂತರ ಜನರು ಅವರನ್ನು ಮೂದಲಿಸತೊಡಗಿದರು. ಅವರಿಂದ ಹಿಂಸಿಸಲ್ಪಟ್ಟವರೂ, ಅವಮಾನಿತರಾದವರೂ ಅವರ ಮೇಲೆ ಸೇಡು ತೀರಿಸಿಕೊಳ್ಳಲು ಸೂಕ್ತ ಸಮಯಕ್ಕಾಗಿ ಕಾಯುತ್ತಿದ್ದರು.

ಪದಚ್ಯುತರಾದ ಬಳಿಕ ಶಂಭು ದಾಮೋದರರೂ, ಇತರ ಮಂತ್ರಿಗಳೂ ಸರ್ಕಾರಿ ಮಹಲುಗಳನ್ನೂ ಬಿಟ್ಟು ತಮ್ಮ ತಮ್ಮ ನಿವಾಸಗಳಿಗೆ ತೆರಳಬೇಕಾಗಿ ಬಂತು. ಆ ಮಹಲುಗಳನ್ನೂ, ಅಲ್ಲಿದ್ದ ವೈಭವ ಸೌಲಭ್ಯಗಳನ್ನು ಬಿಟ್ಟು ಹೊರಡುವಾಗ ಕೆಲವು ಮಂತ್ರಿಗಳಿಗಾದ ದುಃಖ ಹೇಳತೀರದು. ಮಂತ್ರಿಗಳ ಮಡದಿಯರು ಗೋಳು ವರ್ಣನಾತೀತವಾಗಿತ್ತು. ದಾಮೋದರನ ಮಡದಿಯಂತೂ ಅರಮನೆಯನ್ನು ಬಿಟ್ಟು ಹೊರಡುವಾಗ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಶಂಭು ದಾಮೋದರರೂ, ಕೆಲವರು ಸಚಿವರೂ ತಮ್ಮ ಜೀವಮಾನಪರ್ಯಂತ ಸುಖವಾಗಿ ಜೀವಿಸಲು ಸಾಕಾಗುವಷ್ಟು ಕಳ್ಳ ಹಣವನ್ನು ಕೂಡಿಹಾಕಿದ್ದರು. ಆದರೆ ಅಧಿಕಾರದ ವೈಭವವನ್ನು ಕಳೆದುಕೊಂಡ ಅವರು ವೈಧವ್ಯದಿಂದ ನರಳುವ ನಾರೀಮಣಿಗಳಂತಾಗಿದ್ದರು.

ದೊಡ್ಡ ದೊಡ್ಡ ಸರ್ಕಾರಿ ಕಾರುಗಳಲ್ಲಿ ಆಡಂಬರದಿಂದ ತಿರುಗಾಡುತ್ತಿದ್ದ ಕೆಲವರು ಮಂತ್ರಿಗಳಿಗೆ ಸಣ್ಣ ಸಣ್ಣ ಕಾರುಗಳಲ್ಲಿ ತಿರುಗುವುದೇ ಕಷ್ಟವಾಗಿತ್ತು. ವಿಮಾನದಲ್ಲೇ ಹಾರಾಡುತ್ತಿದ್ದ ಶಂಭು ದಾಮೋದರರಿಗೆ ದೊಡ್ಡ ಕಾರುಗಳಲ್ಲಿ ಓಡಾಡುವುದೂ ಸಹ

ಬೇಸರವಾಗಿತ್ತು. ಅವರ ಹಿಂದಿನ ಐದು ವರ್ಷಗಳ ದೌಲತ್ತು ಎಂದೋ ಕನಸಿನಲ್ಲಿ ಕಂಡ ವೈಭವದಂತಿತ್ತು. ಒಮ್ಮೆಂದೊಮ್ಮೆ ಎಲ್ಲವೂ ಶೂನ್ಯವಾಗಿತ್ತು. ಪ್ರತಿದಿನವೂ ನೂರಾರು ಸಾರಿ ಬಗ್ಗಿ ನಮಸ್ಕರಿಸುತ್ತಿದ್ದ ಪರಿಚಾರಕ ವೃಂದ ಇಲ್ಲವಾಗಿತ್ತು. ನಯವಿನಯ, ಭಯ ಭಕ್ತಿಗಳನ್ನು ಪ್ರದರ್ಶಿಸುವ ಅಧಿಕಾರಿಗಳು ಮಾಯವಾಗಿದ್ದರು. ವಿವಿಧ ರೀತಿಗಳಲ್ಲಿ ಹೊಗಳಿ, ಹಾರತುರಾಯಿಗಳನ್ನರ್ಪಿಸಿ, ಅನುಗ್ರಹಗಳಿಗಾಗಿ ಪ್ರತಿದಿನವೂ ಸುಳಿಯುತ್ತಿದ್ದ ಜನರು ದೂರವಾಗಿದ್ದರು. ಮಾಮೂಲಿ ಸರಬರಾಜು ನಿಂತು ಹೋಯಿತು.

ದಾಮೋದರನು ಮುಖ್ಯಮಂತ್ರಿಯಾದ ತರುವಾಯ ಒಂದೆರಡು ತಿಂಗಳು ಮಾತ್ರ ಹಾಲನ್ನು ಕೊಂಡುಕೊಳ್ಳುತ್ತಿದ್ದನು. ಆ ನಂತರ ರಾಜಧಾನಿಯ ಕಂಟ್ರಾಕ್ಟರ್ ಒಬ್ಬನು ಅವನಿಗೆ ಪ್ರತಿದಿನವೂ ಉಚಿತವಾಗಿ ಹಾಲನ್ನು ಸರಬರಾಜು ಮಾಡುತ್ತಿದ್ದನು. ಆ ಉಚಿತ ಸರಬರಾಜಿಗೆ ಪ್ರತಿಫಲವಾಗಿ ಆ ಕಾಂಟ್ರಾಕ್ಟರು ದಾಮೋದರನಿಂದ ಹಲವು ಸವಲತ್ತುಗಳನ್ನು ಪಡೆದಿದ್ದನು. ದಾಮೋದರನು ಅಧಿಕಾರದಿಂದಿಳಿದ ಮರುದಿನ ಹಾಲಿನ ಸರಬರಾಜು ನಿಂತು ಹೋಯಿತು. ಬೆಳಿಗ್ಗೆ ದಾಮೋದರನ ಹೆಂಡತಿ ಕಾಫಿಗೆ ಹಾಲಿಲ್ಲದೆ ಸಿಡಿಮಿಡಿಗೊಂಡು, ಸೇವಕನೊಬ್ಬನಿಂದ ಆ ಕಂಟ್ರಾಕ್ಟರಿಗೆ ಫೋನ್ ಮಾಡಿಸಿದಳು. "ನಾನು ಹಾಲು ಸಪ್ಲೈ ಮಾಡುತ್ತಿದ್ದುದು ಮುಖ್ಯಮಂತ್ರಿಗಳಿಗೆ; ದಾಮೋದರರಿಗಲ್ಲ. ಇದನ್ನು ಅಮ್ಮನವರಿಗೆ ತಿಳಿಸು," ಎಂದು ಕಂಟ್ರಾಕ್ಟರು ಆ ಸೇವಕನಿಗೆ ಉತ್ತರ ಕೊಟ್ಟನು. ಆ ಉತ್ತರದಿಂದ ಅಮ್ಮನವರು ತಬ್ಬಿಬ್ಬಾದರು.

* * * *

ಜಯಸಿಂಹನು ರಾಜ್ಯದಲ್ಲಿ ಸಮರ್ಥ ಸರ್ಕಾರವನ್ನು ಸ್ಥಾಪಿಸಿದ್ದನು. ಅವನ ಮಂತ್ರಿಗಳೆಲ್ಲರೂ ದಕ್ಷರೂ, ಸತ್ಯವಂತರೂ ಆಗಿದ್ದರು. ಜಯಸಿಂಹನು ಸೈನ್ಯದಲ್ಲಿ ಪಡೆದ ಅನುಭವದಿಂದ ಬಹುಬೇಗ ಆಡಳಿತದಲ್ಲಿ ಶಿಸ್ತು, ದಕ್ಷತೆಗಳನ್ನು ಅನುಷ್ಠಾನಕ್ಕೆ ತಂದಿದ್ದನು. ಅವನನ್ನು ಕಂಡರೆ ಲಾಭಕೋರ ವಣಿಕರೂ, ಭ್ರಷ್ಟ ರಾಜಕಾರಣಿಗಳೂ ಹೆದರಿ ಹೀಕರಿಸುತ್ತಿದ್ದರು. ಲಂಚಕೋರ ಅಧಿಕಾರಿಗಳು ಭಯದಿಂದ ಭೀಕರಿಸುತ್ತಿದ್ದರು. ಜಯಸಿಂಹನ ನಿಷ್ಪಕ್ಷಪಾತವಾದ ದಕ್ಷ ಆಡಳಿತದಿಂದ ಜನರ ಮನಸ್ಸಿನಲ್ಲಿ ತೃಪ್ತಿ ಸಂತೋಷಗಳು ಮೂಡಿದ್ದವು.

ಶಂಭು ದಾಮೋದರರು ರಾಜಕಾರಣದ ಮತ್ತು ಆಡಳಿತದ ಹೆಸರಿನಲ್ಲಿ ಐದು ವರ್ಷಗಳ ಕಾಲ ನಡೆಸಿದ್ದ ದೌರ್ಜನ್ಯವನ್ನು ಜನರು ಮರೆಯುವಂತಿರಲಿಲ್ಲ. ಹಲವು ಹೇಯ ಕೃತ್ಯಗಳನ್ನು ಮಾಡಿ, ಹಲವರನ್ನು ಹಿಂಸೆಗೆ ಗುರಿಪಡಿಸಿ, ಹಲವು ವಿಧಾನಗಳಲ್ಲಿ ರಾಜ್ಯದ ಬೊಕ್ಕಸವನ್ನು ಲೂಟಿಮಾಡಿದ್ದ ಆ ಭ್ರಷ್ಟರನ್ನು ಶಿಕ್ಷಿಸದೆ ಸುಮ್ಮನೆ ಬಿಡುವುದು ನ್ಯಾಯವಲ್ಲವೆಂದು ಬಹುಜನರು ಭಾವಿಸುತ್ತಿದ್ದರು. ಶಂಭು ದಾಮೋದರರ ಮತ್ತು ಅವರ ಅನುವರ್ತಿಗಳ ಅಕ್ರಮ ವ್ಯವಹಾರಗಳ ಬಗ್ಗೆ ತನಿಖೆ ಆಗಬೇಕೆಂದು ಸಾರ್ವಜನಿಕ ವೇದಿಕೆಗಳಲ್ಲೂ ಶಾಸನ ಸಭೆಯಲ್ಲೂ ಪದೇ ಪದೇ ಒತ್ತಾಯ ಬರುತ್ತಿತ್ತು.

ಸಾರ್ವಜನಿಕ ಅಭಿಪ್ರಾಯವನ್ನು ಮನ್ನಿಸಿ, ಶಂಭು ದಾಮೋದರರೂ, ಅವರ ಅನುವರ್ತಿಗಳಾಗಿದ್ದ ಭ್ರಷ್ಟ ರಾಜಕಾರಣಿಗಳೂ, ಲಂಚಕೋರ ಅಧಿಕಾರಿಗಳೂ ನಡೆಯಿಸಿದ್ದ ಕಾನೂನುಬಾಹಿರ ವ್ಯವಹಾರಗಳ ಸಂಬಂಧ ತನಿಖೆಯನ್ನು ನಡೆಯಿಸುವುದಕ್ಕಾಗಿ, ಜಯಸಿಂಹನು ಒಂದು ವಿಚಾರಣಾ ಮಂಡಳಿಯನ್ನು ನೇಮಕ ಮಾಡಿದನು.

ಪದಚ್ಯುತರಾದ ಶಂಭು ದಾಮೋದರರು, ಮೂಲೆಗೆ ಸೇರಿದ್ದರೂ ಮುಂದೇನು ಮಾಡಬೇಕೆಂಬ ವಿಚಾರದಲ್ಲಿ ಸದಾ ಮಸಲತ್ತು ನಡೆಸುತ್ತಿದ್ದರು. ಜಯಸಿಂಹನು ಆಡಳಿತವನ್ನು ನಿರ್ವಹಿಸಲಾರದೆ ತಾನಾಗಿಯೇ ಅಧಿಕಾರವನ್ನು ಬಿಡಬಹುದೆಂಬ ಹಗಲುಗನಸನ್ನು ಕೆಲಕಾಲ ಅವರು ಕಾಣುತ್ತಿದ್ದರು. ಆದರೆ ಜಯಸಿಂಹನು ದಕ್ಷತೆಯಿಂದ ರಾಜ್ಯಭಾರಮಾಡುತ್ತಾ ದುರ್ಗಾದಾಸರಿಗಿಂತ ಜನಪ್ರಿಯನಾಗಿದ್ದನು. ಅವನು ಮುಖ್ಯಮಂತ್ರಿಯಾಗಿ ಆರು ತಿಂಗಳುಗಳಾಗಿದ್ದುವು. ಅವನ ಆಡಳಿತ ಸುಸೂತ್ರವಾಗಿ ಸಾಗುತ್ತಿತ್ತು.

* * * *

ವಿಚಾರಣಾ ಮಂಡಳಿಯು ಮೂರು ತಿಂಗಳ ಕಾಲ ಶ್ರಮಪಟ್ಟು, ಸಾಕ್ಷಿಸಾಹಿತ್ಯಗಳನ್ನು ಸಂಗ್ರಹಿಸಿ ಸರ್ಕಾರಕ್ಕೆ ದೀರ್ಘವಾದ ವರದಿಯನ್ನು ಸಲ್ಲಿಸಿತ್ತು. ಶಂಭು ದಾಮೋದರರು ತಮ್ಮ ಅಧಿಕಾರವಧಿಯಲ್ಲಿ ಅಧಿಕಾರ ದುರುಪಯೋಗ ಮಾಡಿ, ಅಕ್ರಮ ಸಂಪಾದನೆ ಮಾಡಿದ್ದ ಪ್ರಕರಣಗಳನ್ನೂ, ತಮ್ಮವರ ಪ್ರಯೋಜನಕ್ಕಾಗಿ ಅವರು ರೀತಿ ನಿಯಮಗಳನ್ನು ಉಲ್ಲಂಘಿಸಿದ ಪ್ರಸಂಗಗಳನ್ನೂ,. ತಮಗಾಗದವರನ್ನು ತುಳಿಯಲು ಅನುಸರಿಸಿದ್ದ ಅಕ್ರಮ ವಿಧಾನಗಳನ್ನೂ ಆ ವರದಿಯಲ್ಲಿ ವಿವರವಾಗಿ ಉಲ್ಲೇಖಿಸಲಾಗಿತ್ತು. ಹೆಮ್ಮಾರ, ಕೆಮ್ಮಾರ, ಜಲೋದರ, ಗಾಂಢೀವ ಇವರುಗಳು ಮಾಡಿದ್ದ ಹಲವು ಕಾನೂನುಬಾಹಿರ ಕಾರುಬಾರುಗಳನ್ನು ವಿಚಾರಣಾ ಮಂಡಳಿಯು ಬಯಲಿಗೆಳೆದಿತ್ತು.

ಚೀಫ್ ಇಂಜಿನಿಯರ್ ಆನಂದ, ಡೆಪ್ಯೂಟಿ ಕಮಿಷನರ್ ಶಾಮಸುಂದರ ಮುಂತಾದ ಲಂಚಕೋರ ಅಧಿಕಾರಿಗಳ ಹಲವು ಲಂಚದ ವ್ಯವಹಾರಗಳನ್ನು ಮಂಡಳಿಯು ಪತ್ತೆ ಹಚ್ಚಿದ್ದಿತು. ಅಲ್ಲದೆ ಐದು ವರ್ಷಗಳ ಹಿಂದೆ ನಡೆದಿದ್ದ ಸೋಮಶೇಖರನ ಕೊಲೆಗೆ ಶಂಭುವೇ ಕಾರಣನೆಂದು ವಿಚಾರಣಾ ಮಂಡಳಿಯವರು ಅಭಿಪ್ರಾಯಪಟ್ಟಿದ್ದರು. ಶಂಭು ದಾಮೋದರರನ್ನೂ, ಅವರ ಅನುವರ್ತಿಗಳಾದ ಭ್ರಷ್ಟ ರಾಜಕಾರಣಿಗಳನ್ನೂ, ಅಧಿಕಾರಿಗಳನ್ನೂ ವಿಶೇಷ ನ್ಯಾಯಧೀಶರ ಮುಂದೆ ವಿಚಾರಣೆಗೆ ಗುರಿಪಡಿಸಬೇಕೆಂದು ವಿಚಾರಣಾಮಂಡಳಿಯವರು ತಮ್ಮ ವರದಿಯಲ್ಲಿ ಸಲಹೆ ಮಾಡಿದ್ದರು.

ಶಂಭು, ದಾಮೋದರರೂ, ಅವರ ಅನುವರ್ತಿಗಳೂ ಸೋಲಿನ ಪರಾಭವ ದಿಂದಲೂ, ಪದಚ್ಯುತಿ ಪರಿತಾಪದಿಂದಲೂ, ಜನರ ತಿರಸ್ಕಾರದಿಂದಲೂ ಮೊದಲೇ ಉಡುಗಿಹೋಗಿದ್ದರು. ವಿಚಾರಣಾ ಮಂಡಳಿಯು ಸರ್ಕಾರಕ್ಕೆ ವರದಿಯನ್ನು ಸಲ್ಲಿಸಿದ ವಿಚಾರ ತಿಳಿದ ಮೇಲಂತೂ ಅವರು ನಡುಗಿ ಹೋಗಿದ್ದರು. ಸಮಾಚಾರ ತಿಳಿದೊಡನೆ ಅನಿಷ್ಟಕೂಟದ ಅವಸರದ ಸಭೆಯನ್ನು ದಾಮೋದರನ ಮನೆಯಲ್ಲಿ ಸೇರಿಸಿದ್ದರು.

ಸಭೆಯಲ್ಲಿ ದಾಮೋದರ, ಶಂಭು, ಕೆಮ್ಮಿರ, ಹೆಮ್ಮಿರ, ಗಾಂಢೀವ, ಜಲೋದರ ಇವರುಗಳು ಮಾತ್ರ ಹಾಜರಿದ್ದರು. ಅಧಿಕಾರವನ್ನು ಕಳೆದುಕೊಂಡ ದುಃಖವನ್ನು ಮರೆಯುವುದಕ್ಕಾಗಿ ಈಚೆಗೆ ಆ ದುಷ್ಟ ಶಿಖಾಮಣಿಗಳು ಯಥೇಚ್ಛವಾಗಿ ಕುಡಿಯುತ್ತಿದ್ದರು. ಆ ದಿನ ಕೆಮ್ಮಿರನೂ, ಜಲೋದರನೂ ಕುಡಿದು ಮತ್ತರಾಗಿ ಮಾತನಾಡುವ ಸ್ಥಿತಿಯಲ್ಲೇ ಇರಲಿಲ್ಲ.

"ಎನ್‌ಕ್ವೈರಿ ಕಮಿಷನ್ ನಮ್ಮನ್ನು ಪ್ರಾಸಿಕ್ಯೂಟ್ ಮಾಡ್ಬೇಕೂ ಅಂತ ಸರ್ಕಾರಕ್ಕೆ ರಿಪೋರ್ಟ್ ಕಳಿಸಿದೆಯಂತೆ. ನಿಂಗೇನಾದ್ರು ಹೆಚ್ಚಿಗೆ ಸುದ್ದಿ ಗೊತ್ತಾಗಿದೆಯೇನು, ದಾಮೋದರಾ," ಎಂದು ಶಂಭು ಕೇಳಿದನು.

"ನಂಗೇನೂ ಹೆಚ್ಚಿಗೆ ವಿಚಾರ ಗೊತ್ತಾಗಿಲ್ಲ. ಡೆಪ್ಯೂಟಿ ಸೆಕ್ರೆಟರಿ ಶಾಮಸುಂದರಗೆ ಫೋನ್ ಮಾಡಿದ್ದೆ. ಅವನೂ ಸಿಕ್ಕಿಲ್ಲ. ನನಗೆ ಬಹಳಾ ಬೇಜಾರು ಶಂಭೂ. ನಿದ್ದೇನೆ ಬರೂದಿಲ್ಲ."

"ದಾಮೋದರಾ, ಇಷ್ಟಕ್ಕೇ ಹಿಂಗಾದರೆ ಹ್ಯಾಂಗೋ ಪುಣ್ಯಾತ್ಮ! ಏನಾದರೂ ಹುನಾರ್ ಹುಡುಕಬೇಕು. ನಾ ಅವತ್ತೆ ಹೇಳ್ದೆ. ಎನ್‌ಕ್ವೈರಿ ಕಮಿಷನ್ ಮೆಂಬರ್‌ಗಳಿಗೆ ಒಂದೊಂದು ಲಕ್ಷಕೊಡಾನಾ ಅಂತ ನೀ ಕೇಳ್ಲಿಲ್ಲ."

"ನೀ ಎರಡು ಲಕ್ಷಕೊಟ್ಟಿದ್ರೂ ಅವರು ಮುಟ್ತಾ ಇರಲಿಲ್ಲ. ಅಂಗೈ ತೋರಿಸಿ ಅವಲಕ್ಷಣ ಆಗಬಾರದು ಅಂತ, ನಾ ಬ್ಯಾಡಾ ಅಂತ ಹೇಳ್ದೆ."

"ದಾಮೋದರಾ, ನೀ ಬಹಳ ಅಕಲ್ಗ್ಗರ ಕಣಯ್ಯಾ. ಅಧೈರ್ಯ ಬಿಟ್ಟು ಅಕಲ್ ಹರಸಯ್ಯಾ."

"ನಂಗೇನೂ ತೋಚ್ತಾ ಇಲ್ಲವಲ್ಲಯ್ಯಾ! ಯಾಕೋ ಲೈಫೇ ಡಿಸ್ಗಸ್ಟ್ ಆಗಿದೆ."

ಹೆಂಡದ ಅಮಲಿನಲ್ಲಿದ್ದ ಕೆಮ್ಮಿರ, ದಾಮೋದರನ ಮಾತನ್ನು ಕೇಳಿ, ಎಚ್ಚರಗೊಂಡವ ನಂತೆ ತಲೆಗೊಡಹಿ, "ಏನ್ರೀ ಎಕ್ಸ್ ಚೀಫ್ ಮಿನಿಸ್ಟರೇ ಹೆಣ್ಣಿಗ್ರಾಗೇ ಮಾತಾಡ್ತೀರಲ್ರಿ! ಗಂಡಸ್ತನಕ್ಕೆ ಇಂಜಕ್ಷನ್ ಕೊಡ್ಸಾನೇನು"? ಎಂದು ನುಡಿದನು.

"ಬ್ಹಾಳ ಕಷ್ಟ ಕೆಮ್ಮಿರ. ಪುನಃ ಚೇತರಿಸಿಕೊಳ್ಳೋದು ಬ್ಹಾಳ ಕಷ್ಟ. ನನಗೆ ಅಧಿಕಾರ ಬ್ಯಾಡ; ಮಾನ ಉಳಿದರೆ ಸಾಕು."

"ನೀ ಯಾಕಪ್ಪಾ ಹೀಗೆ ಮಾಡ್ತೀಯಾ? ಸುಮ್ಮೆ ಇರು. ಶಂಭೂ ಏನಾದರೂ ಹಿಕ್ ಮತ್ ಮಾಡ್ತಾನೆ."

"ಏನ್ ಮಾಡ್ತಾನೋ ಏನೋ ಅಪ್ಪಾ! ನನಗಂತೂ ಏನೂ ಹೊಳೆಯೂದೇ ಇಲ್ಲ"

"ದಾಮೋದರಾ, ಇಸ್ಟ್ ಆಸೆ ಬಿಟ್ಟರೆ ಹ್ಯಾಗಪ್ಪಾ? ಏನಾರೂ ಮಾಡ್ತೀವಿ. ಏನೂ ಆಗ್ದೆ ಇದ್ರೆ ಅಖೈರೀಗೆ ಆ ಬಡ್ಡಿಮಗ ಕೈ ಮುರ್ಕನ್ನ ರುಂಡ ಹಾರಸ್ತೀನಿ." ಶಂಭು ಹೇಳಿದನು.

"ಏನಾದ್ರೂ ಮಾಡಪ್ಪ" ಎಂದು ದಾಮೋದರ ನಿಟ್ಟುಸಿರು ಬಿಟ್ಟ."

"ದಾಮೋದರ, ಪಟ್ವಾರ ಮಹೋದರ ಯಾಕೆ ಇವತ್ತು ಬರಲ್ಲಾ? ನೀನು ಅವರಿಗೆ ಹೇಳಿದ್ದೇನು?"

"ಹೇಳ್ದೆ ಏನು? ಇಬ್ರಿಗೂ ಹೇಳಿದ್ದೆ."

"ಹಾಗಾರೆ ಅವರು ಯಾಕೆ ಬರಲಿಲ್ಲ?"

"ಇನ್ಯಾಕೆ, ಅವರಿಗೆ ನಮ್ಮ ಸಹವಾಸ? ಅವರಿಗೆ ಆಗಬೇಕಾದ್ದೆಲ್ಲಾ ಆಗಿದೆ ನಮ್ಮಿಂದ."

ಅದುವರೆಗೆ ಸುಮ್ಮನಿದ್ದ ಹೆಮ್ಮೊರ, "ಅವರು ಮಂತ್ರಿಗಳ ಗೆಳೇರು. ಅಧಿಕಾರ ಬಂದಾಗ ಗೆಳೆತನ ಮಾಡದ್ರು, ಅಧಿಕಾರ ಹೋತು, ದೂರ ಸರಿದ್ರು" ಎಂದು ನುಡಿದನು.

"ನೀವು ಏನೇ ಹೇಳಿ, ಆ ದುರ್ಗಾದಾಸನೇ ಸರಿ. ಅವ ಈ ಲಾಭ ಬಡಕರನ್ನೆಲ್ಲಾ ಬಾಲಕೊಯ್ದು ಮೂಲಿಗಿಟ್ಟಿದ್ದ. ದುರ್ಗಾದಾಸ ಸತ್ಯವಂತ ಕಣಯ್ಯಾ, ಶಂಭು, ಅವನಿಗೆ ನಾವು ಮಾಡಿದ್ದು ಸ್ವಲ್ಪ ಹೆಚ್ಚು ಅಂತ ಕಾಣ್ತದೆ," ಎಂದು ದಾಮೋದರ ನುಡಿದ.

"ಮಿಸ್ಟರ್ ದಾಮೋದರಾ, ಈಗ್ಯಾಕೆ ಪಶ್ಚಾತ್ತಾಪ? ಆಲ್ ಈಸ್ ಫೇರ್ ಇನ್ ಲೌ ಅಂಡ್ ವಾರ್. ಬದುಕಿದ್ದರೆ ಮಿರ್ ಸಾಧಕ ಪಟವಾರ ಮಹೋದರರಿಗೆ ಪಾಠಕಲಿಸ್ದೆ ಇದ್ರೆ ಹೆಮ್ಮೊರನೇ ಅಲ್ಲ." ಎಂದ ಹೆಮ್ಮೊರ.

ಅನಂತರ ಧೂರ್ತರು ಮುಂದೇನು ಮಾಡಬೇಕೆಂಬ ವಿಚಾರದಲ್ಲಿ, ವಿಚಾರ ವಿನಿಮಯ ಮಾಡಿ, ಮರುದಿನ ರಾತ್ರಿ ಪುನಃ ಸೇರಬೇಕೆಂದು ತೀರ್ಮಾನಿಸಿ ತಮ್ಮ ಮನೆಗಳಿಗೆ ತೆರಳಿದರು.

* * * *

ಗುಪ್ತಸಭೆಯು ಮುಗಿಯುವಾಗ ರಾತ್ರಿ ಹನ್ನೆರಡು ಗಂಟೆಯಾಗಿತ್ತು. ದಾಮೋದರನು ಮನೆಗೆ ಬಂದಿದ್ದ ಸ್ನೇಹಿತರನ್ನು ಬೀಳ್ಕೊಟ್ಟು, ತನ್ನ ಶಯ್ಯಾಗೃಹಕ್ಕೆ ಹೋದನು. ಶಂಭುವೂ, ಇತರರೂ ಗುಪ್ತ ಸಭೆಯಲ್ಲಿ ಪರಾಕ್ರಮದ ಮಾತುಗಳಾನ್ನಾಡಿದ್ದರೂ, ದಾಮೋದರನಿಗೆ ಮಾತ್ರ ಆ ಮಾತುಗಳಿಂದ ಧೈರ್ಯವಾಗಲಿ, ಸ್ಫೂರ್ತಿಯಾಗಲಿ ಬಂದಿರಲಿಲ್ಲ. ತನ್ನ ಅದೃಷ್ಟದ ನಕ್ಷತ್ರವು ಅಸ್ತಮಿಸುತ್ತಿರುವುದೆಂಬ ಮುನ್ಸೂಚನೆ ಅವನಿಗೆ ತೋರಿ ಬರುತ್ತಿತ್ತು.

ದಾಮೋದರನು ಬಹಳ ಉಪಾಯಗಾರ. ಹಿಂದೆ ಹಲವು ಸಾರಿ ಉಪಾಯ ದಿಂದ ಹಲವು ಕೆಲಸಗಳನ್ನು ಸಾಧಿಸಿದವನು. ಆದರೆ ಪ್ರಕೃತ ಸಂದರ್ಭದಲ್ಲಿ ಅವನಿಗೆ ಯಾವ ಉಪಾಯವೂ ಹೊಳೆಯಲಿಲ್ಲ. ಮಂಕು ಹಿಡಿದಂತವನಾಗಿದ್ದನು. ಧೈರ್ಯವಂತೂ ಸಂಪೂರ್ಣ ಅವನನ್ನು ಕೈ ಬಿಟ್ಟಿತ್ತು. ಹಿಂದಿನ ಸ್ನೇಹಿತರೆಲ್ಲಾ ಒಬ್ಬೊಬ್ಬರಾಗಿ ದೂರವಾಗುತ್ತಿದ್ದರು. ಅವನ ವಿಷಯದಲ್ಲಿ ಜನರ ತಿರಸ್ಕಾರ ದಿನೇ ದಿನೇ ಹೆಚ್ಚಾಗುತ್ತಿತ್ತು.

ಸರ್ಕಾರದವರು ತನ್ನನ್ನು ವಿಚಾರಣೆಗೆ ಗುರಿಪಡಿಸಿದರೆ ಏನು ಮಾಡಬೇಕೆಂಬ ಕೊರಗು ಅವನನ್ನು ಕೊರೆಯತೊಡಗಿತ್ತು. ಒಮ್ಮೊಮ್ಮೆ ಪಶ್ಚಾತ್ತಾಪವೂ ಕೂಡ ಅವನನ್ನು ಕಾಡುತ್ತಿತ್ತು. ಐದು ವರ್ಷಗಳ ಕಾಲ ಹೇಮಾವತಿ ರಾಜ್ಯದಲ್ಲಿ ದೊರೆಯಂತೆ ಮೆರೆದಿದ್ದ ಅವನಿಗೆ ನ್ಯಾಯಾಧೀಶರ ಮುಂದೆ ಅಪರಾಧಿಯಾಗಿ ನಿಲ್ಲುವುದು ಅಸಹ್ಯಕರವೆನಿಸುತ್ತಿತ್ತು. ಶಿಕ್ಷೆಯಾಗಿ, ಸೆರೆಮನೆಯಲ್ಲಿ ನರಳುವುದಕ್ಕಿಂತ ಸಾಯುವುದೇ ಮೇಲೆಂದು

ಯೋಚಿಸುತ್ತಿದ್ದನು. ಹೀಗೆ ನಾನಾ ವಿಧವಾದ ಯೋಚನೆಗಳಿಂದ ಅವನ ಮನಸ್ಸು ಅಶಾಂತಿಯ ಕಡಲಲ್ಲಿ ತೊಳಲಾಡುತ್ತಿತ್ತು.

ನಿದ್ದೆ ಮಾಡಬೇಕೆಂದು ಪ್ರಯತ್ನಿಸಿದನು. ನಿದ್ದೆ ಬರಲಿಲ್ಲ. ಗೋಡೆಯಲ್ಲಿದ್ದ ಗಡಿಯಾರ "ಢಣ್ ಢಣ್" ಎಂದು ಗಂಟೆಯನ್ನು ಹೊಡೆಯಿತು. ಆಗಲೇ ರಾತ್ರಿ ಎರಡು ಗಂಟೆಯಾಗಿತ್ತು. ಮಾನಸಿಕ ಶಾಂತಿಯನ್ನು ಪಡೆಯಲು ಮತ್ತಷ್ಟು ಮಧ್ಯವನ್ನು ಸೇವಿಸಿದನು. ಹಾಗೂ ನಿದ್ದೆ ಬರುವ ಸೂಚನೆ ಕಂಡು ಬರಲಿಲ್ಲ. ನಿದ್ದೆ ಮಾಡಬೇಕೆಂದು ಕಣ್ಣು ಮುಚ್ಚಿದೊಡನೆ, ಏನೇನೋ ಯೋಚನೆಗಳು ಅವನ ಮನಸ್ಸನ್ನಾವರಿಸುತ್ತಿದ್ದುವು. ಹಾಸಿಗೆಯ ಮೇಲೆ ಹೊರಳಾಡುತ್ತಿದ್ದಾಗ, ಟೆಲಿಫೋನ್ ಗಂಟೆ ಒಂದೇ ಸುಮ್ಮನೆ ಬಾರಿಸಿತು.

ದಾಮೋದರನು ಎದ್ದು ಹೋಗಿ ಫೋನ್ ಎತ್ತಿಕೊಂಡು, "ಯಾರಪ್ಪಾ ಇಷ್ಟು ಹೊತ್ತಿನಲ್ಲಿ," ಎಂದು ಬೇಸರದಿಂದ ಮಾತನಾಡಿದನು. "ನಾನು ಸಾರ್. ಶಾಮಸುಂದರ," ಎಂದು ಉತ್ತರ ಬಂತು.

"ಏನು ಶಾಮಸುಂದರ, ಈ ಅವೇಳೆಯಲ್ಲಿ ಫೋನ್ ಮಾಡಿದೆಯಲ್ಲ?"

"ಸಾರ್, ಸರ್ವನಾಶ!"

"ಏನದು ಶಾಮಸುಂದರ?"

"ನಾಳೆ ನನ್ನನ್ನೂ ತಮ್ಮನ್ನೂ, ನಮ್ಮ ಕಡೆಯವರೆಲ್ಲರ ದಸ್ತಗಿರಿ ಮಾಡುತ್ತಾರೆ. ತಾವು ಈಗಲೇ ಈ ಊರು ಬಿಟ್ಟು ಬೇರಲ್ಲಿಗಾದರೂ ಹೋದರೆ ಅನುಕೂಲ. ತಾವು ಹೊರಡುವುದಾದರೆ ನಾನೂ ಬರುತ್ತಿದ್ದೆ."

"ಈಗೆಲ್ಲಿಗೆ ಹೋಗುವುದು, ಶಾಮಸುಂದರ?" ಎಂದು ಹೇಳುತ್ತಿರುವಲ್ಲಿ, ರಿಸೀವರ್ ಅವನ ಕೈಯಿಂದ ಜಾರಿ ಕೆಳಗೆ ಬಿತ್ತು. ಅವನು ಶೋಕ ಸಂತಪ್ತನಾಗಿ ಕುಸಿದು ಬಿದ್ದನು.

ಸ್ವಲ್ಪ ಹೊತ್ತಿನ ನಂತರ, ದಾಮೋದರನು ಚೇತರಿಸಿಕೊಂಡು ಮೇಲಕ್ಕೆದ್ದನು. ಅವನ ಮನಸ್ಸು ಅಲ್ಲೋಲಕಲ್ಲೋಲ ಪರಿಸ್ಥಿತಿಯಲ್ಲಿತ್ತು. ಬದುಕಿ ಅವಮಾನಿತ ನಾಗುವುದಕ್ಕಿಂತ ಸಾಯುವುದೇ ಮೇಲೆಂದು ನಿರ್ಧರಿಸಿ, ಕಪಾಟದಲ್ಲಿದ್ದ ರಿವಾಲ್ವರನ್ನು ಕೈಗೆತ್ತಿಕೊಂಡನು. ಆದರೆ ಹೊಡೆದುಕೊಳ್ಳಲು ಮನಸ್ಸಾಗಲಿಲ್ಲ. ಹಾಗೆಯೇ ಏನೇನೋ ಸ್ವಲ್ಪ ಕಾಲ ಯೋಚಿಸುತ್ತಿದ್ದು, ರಿವಾಲ್ವರನ್ನು ಪುನಃ ಕಪಾಟದಲ್ಲಿರಿಸಿದನು. ಕೆಲವು ದಿನಗಳ ಹಿಂದೆ ನಿದ್ದೆಯ ಮಾತ್ರೆಗಳನ್ನು ತಂದಿದ್ದ ನೆನಪಾಯಿತು. ಆ ಮಾತ್ರೆಗಳಿಗಾಗಿ ಹುಡುಕಿದನು. ಎಲ್ಲಿಟ್ಟಿದ್ದೇನೆಂಬುದು ಅವನಿಗೆ ತಕ್ಷಣ ಹೊಳೆಯಲಿಲ್ಲ. ಮತ್ತೆ ಯೋಚನಾ ಕ್ರಾಂತನಾದನು. ಅವನ ಮನಸ್ಸಿನಲ್ಲಿ ಸಾವು ಬದುಕಿನ ತುಮುಲ ಯುದ್ಧ ನಡೆಯುತ್ತಿತ್ತು.

ಒಮ್ಮೆ ಸಾಯಬೇಕೆಂದು ಹತಾಶನಾದರೆ, ಮತ್ತೊಮ್ಮೆ ಬದುಕಬೇಕೆಂಬ ಆಶೆ ಅಂಕುರಿಸುತ್ತಿತ್ತು. ಒಮ್ಮೆ ಧೀರನಂತೆ ಕಷ್ಟವನ್ನು ಎದುರಿಸಬೇಕೆಂಬ ಧೈರ್ಯ ಉದ್ಭವಿಸಿದರೆ, ಮತ್ತೊಮ್ಮೆ ಯಾರಿಗಾಗಿ ಬದುಕಬೇಕೆಂಬ ಪ್ರಶ್ನೆ ಉದ್ಭವಿಸುತ್ತಿತ್ತು. ನಾನಾ ವಿಧವಾದ ಯೋಚನಾ ತರಂಗಗಳು ಅವನ ಮನಸ್ಸಿನ ತೆರೆಯ ಮೇಲೆ ಸುಳಿದು ಹೋಗುತ್ತಿದ್ದುವು.

"ಆತ್ಮಹತ್ಯೆಯಿಂದ ಸತ್ತರೆ, ಮಾಡಬಾರದ ಕೆಲಸ ಮಾಡಿ ಹೇಡಿಕ್ಷುದ್ರ ಜೀವಿಯೊಂದು ತೊಲಗಿ ಹೋಯಿತೆಂದು ಜನರು ಅವಹೇಳನ ಮಾಡುತ್ತಾರೆ. ಸಾಯದೆ ಬದುಕಿದ್ದರೆ, ನನಗಾಗಿ ಕಾದಿರುವ ಕಷ್ಟ ಕಾರ್ಪಣ್ಯಗಳನ್ನು ಎದುರಿಸಲು ಸಿದ್ಧವಾಗಿರಬೇಕು. ಕಾರಾಗೃಹ ವಾಸವಂತೂ ಶತಸಿದ್ಧ. ಅರಮನೆಯಲ್ಲಿ ರಾಜನಂತೆ ಬಾಳಿದ ನಾನು ಸೆರೆಮನೆಯಲ್ಲಿ ಬಾಳುವುದು ಹೇಗೆ? ಬಾಳಿ ಬರುವುದಾದರೂ ಏನು? ಅಧಿಕಾರವಿದ್ದಾಗ, ಅತ್ಯಂತ ಗೆಳೆಯರಂತೆ ವರ್ತಿಸುತ್ತಿದ್ದವರೂ, ಅವಿಚ್ಛಿನ್ನ ಭಕ್ತರಂತೆ ಓಡಾಡುತ್ತಿದ್ದವರೂ, ನನ್ನಿಂದ ನೂರಾರು ಉಪಕಾರಗಳನ್ನು ಹೊಂದಿದ್ದವರೂ, ಎಲ್ಲರೂ ದೂರ ಸರಿದರು. ನನ್ನ ಜಾತಿಯವರೆಂಬ ಅಭಿಮಾನದಿಂದ ಹಲವರಿಗೆ ಹಲವು ರೀತಿಯ ಉಪಕಾರ ಮಾಡಿದೆ. ಅವರ್ಯಾರೂ ನನ್ನ ಹತ್ತಿರ ಸುಳಿಯುವುದಿಲ್ಲ. ಅಧಿಕಾರವಿದ್ದಾಗ, ಪ್ರೇಮಾದರಗಳನ್ನು ತೋರ್ಪಡಿಸುತ್ತಿದ್ದ ಬಂಧು ಬಾಂಧವರೂ ಸಹ ನನ್ನನ್ನು ಕೈ ಬಿಟ್ಟಿದ್ದಾರೆ. ಯಾಕೆ ಬಾಳಬೇಕು? ಯಾರಿಗಾಗಿ ಬಾಳಬೇಕು?"

ಇವೇ ಮುಂತಾದ ಯೋಚನೆಗಳಲ್ಲಿ ಸ್ವಲ್ಪಕಾಲ ತಲ್ಲೀನನಾಗಿದ್ದು, ಪುನಃ ಮೇಲಕ್ಕೆದ್ದು ನಿದ್ದೆಯ ಮಾತ್ರೆಗಳಿಗಾಗಿ ಹುಡುಕಾಡಿದನು. ಎಲ್ಲೋ ಮೂಲೆಯಲ್ಲಿಟ್ಟಿದ್ದ ಮಾತ್ರೆಯ ಸೀಸೆಯೂ ಸಿಕ್ಕಿತು. ಕೆಲವು ದಿನಗಳಿಂದ ದೂರವಾಗಿದ್ದ ಧೈರ್ಯ ಹತ್ತಿರ ಬಂತು. ಮಾತ್ರೆಗಳನ್ನು ಸೇವಿಸುವ ಮುನ್ನ ಪಕ್ಕದ ಕೊಠಡಿಯಲ್ಲಿ ಮಲಗಿದ್ದ ಮಡದಿಯನ್ನು ನೋಡಬೇಕೆಂಬ ಆಸೆ ಅವನಿಗೆ ಮೂಡಿ ಬಂತು. ತಕ್ಷಣ "ಸಾಯುವವನಿಗೆ ಮಡದಿ ಮಕ್ಕಳ ಚಿಂತೆಯೇಕೆ? ಬದುಕಿರುವವನಿಗೆ, ಮಡದಿ, ಮಕ್ಕಳೂ ಆಸ್ತಿಪಾಸ್ತಿಗಳೂ ಸ್ಥಿರ. ಸಾಯುವವನಿಗೆ ಅವೆಲ್ಲವೂ ಅಸ್ಥಿರ ಅಂದುಕೊಂಡು ಆ ಆಸೆಯನ್ನು ಅದುಮಿದನು. ಸೀಸೆಯಲ್ಲಿದ್ದ ಎಲ್ಲಾ ಮಾತ್ರೆಗಳನ್ನೂ ಬಾಯಿಗೆ ತುರುಕಿ, ಯಥೇಚ್ಛವಾಗಿ ನೀರು ಕುಡಿದು, ಹಾಸಿಗೆಯ ಮೇಲೆ ಮಲಗಿದನು. ಮಾತ್ರೆಯ ಅಮಲು ಕ್ರಮೇಣ ಏರತೊಡಗಿತು. ಒಂದು ಗಂಟೆಯೊಳಗಾಗಿ ಅವನು ಪ್ರಜ್ಞಾಶೂನ್ಯನಾದನು.

ಬೆಳಗಿನ ಜಾವ, ಸುಮಾರು ಐದು ಗಂಟೆಯ ಹೊತ್ತಿಗೆ, ಸಾವು ಅವನ ಅಂಗಾಂಗಳನ್ನೂ ಹಿಂಡುತ್ತಿತ್ತು. ಜೀವ ಅದನ್ನು ಸಹಿಸಲಾರದೆ ದೇಹವನ್ನು ಬಿಡಲು ಅಣಿಯಾಗುತ್ತಿತ್ತು. ದಾಮೋದರನು ಕಷ್ಟವನ್ನು ಕಾಣದೆ ಕುಟಿಲ ವಿದ್ಯೆಯಿಂದಲೇ ಸುಖವಾಗಿ ಬಾಳಿದವನು. ಮನುಷ್ಯರು ಸುಖವಾಗಿರುವಾಗ ಪಾಪ, ಪುಣ್ಯ, ಆತ್ಮ, ಪುನರ್‌ಜನ್ಮ ಮುಂತಾದ ವಿಚಾರಗಳನ್ನು ಯೋಚಿಸುವುದು ಬಹಳ ಅಪರೂಪ. ದೇಹ ಅಳಿದ ಮೇಲೂ ಆತ್ಮ ಉಳಿಯುವುದೆಂಬ ಕಲ್ಪನೆ ದಾಮೋದರನಿಗೆ ಎಂದೂ ಬಂದಿರಲಿಲ್ಲ. ಸಾವು ಅವನನ್ನು ಹಿಂಡುತ್ತಿದ್ದ ಆ ಸಮಯದಲ್ಲಿ, ಸತ್ತಮೇಲೂ ಜೀವ ಜೀವಂತವಾಗಿ ಉಳಿಯುವುದೆಂದು ಅವನಿಗೆ ಭಾಸವಾಯಿತು.

ಸ್ವಲ್ಪ ಹೊತ್ತಿನಲ್ಲಯೇ, ದಾಮೋದರನಿಗೊಂದು ಭಯಾನಕ ಕನಸಾಯಿತು. ಕನಸಿನಲ್ಲಿ ಭೂತಾಕಾರದ, ತಾಮ್ರ ವರ್ಣದ, ಕರಾಳ ವ್ಯಕ್ತಿಯೊಬ್ಬನು ಅವನ

ಮುಂದೆ ಬಂದು ನಿಂತಿದ್ದನು. ಆ ಕರಾಳ ರೂಪವನ್ನು ನೋಡಿದೊಡನೆ, ದಾಮೋದರನು ಭಯದಿಂದ ನಡುಗುತ್ತಾ, ಚಿಟ್ಟನೆ ಚೀರಿಕೊಂಡನು.

"ದಾಮೋದರಾ, ದಾಮೋದರಾ, ನಿನ್ನ ಅಂತ್ಯ ಕಾಲವು ಸಮೀಪಿಸುತ್ತಾ ಇದೆ. ನೀನು ಮುಖ್ಯಮಂತ್ರಿಯಾಗಿದ್ದಾಗ ಮಾಡಿರುವ ಘೋರ ಅಪರಾಧಗಳಿಗೆ ಉತ್ತರ ಹೇಳುವ ಕಾಲ ಸನ್ನಿಹಿತವಾಗಿದೆ. ನಿನಗೆ ಈ ರಾಜ್ಯದ ಮುಖ್ಯಮಂತ್ರಿಯಾಗಿ ಜನತೆಗೆ ಸೇವೆ ಸಲ್ಲಿಸುವ ಸದಾವಕಾಶವೊಂದು ದೊರಕಿತ್ತು. ಆದರೆ ನೀನೇನು ಮಾಡಿದೆ? ನೀವು ಮಾಡಿರುವ ಅಪರಾಧಗಳೆಲ್ಲಾ ಒಂದೊಂದಾಗಿ ಸ್ಮರಿಸಿಕೊಂಡು, ಅವುಗಳಿಗೆ ಸಮಜಾಯಿಸಿ ಏನಾದರೂ ಹೇಳುವುದಿದ್ದರೆ ಹೇಳಬಹುದು," ಎಂದು ಆ ಕರಾಳ ವ್ಯಕ್ತಿ, ಸಿಡಿಲಿನ ಧ್ವನಿಯಲ್ಲಿ ಘರ್ಜಿಸಿದನು.

"ಪ್ರಭೂ ತಾವಾರೆಂಬುದು ತಿಳಿಯದು. ತಮ್ಮ ಘೋರ ರೂಪದಿಂದ ನಾನು ಭಯಗ್ರಸ್ತನಾಗಿದ್ದೇನೆ. ನನಗೆ ಏನು ಹೇಳುವುದಕ್ಕೂ ತೋಚುವುದಿಲ್ಲ."

"ಎಲೈ ಧೂರ್ತ, ಸುಳ್ಳು ಹೇಳುತ್ತಿರುವೆಯಾ? ನೀನು ಯಾರನ್ನು ವಂಚಿಸಿದರೂ ನನ್ನನ್ನು ವಂಚಿಸಲಾರೆ. ನಾನು ನಿನ್ನ ಆತ್ಮ ಸಾಕ್ಷಿಯ ಘೋರ ಸ್ವರೂಪ."

"ಮಹಾಮಹಿಮರಾದ ತಮಗೆ ಗೊತ್ತಿಲ್ಲದ ಸಂಗತಿ ಯಾವುದಿದೆ? ನಾನು ಪಾಪಿ. ಎಲ್ಲೋ ಮೂಲೆಯಲ್ಲಿ, ಅನಾಮಧೇಯ ವ್ಯಕ್ತಿಯಾಗಿದ್ದ ನಾನು ಈ ರಾಜ್ಯದ ಮುಖ್ಯಮಂತ್ರಿಯಾದೆ. ಅಧಿಕಾರದ ಮದದಿಂದ ನ್ಯಾಯಾನ್ಯಾಯಗಳನ್ನು ವಿಮರ್ಶಿಸದೆ ಹಲವು ಅಪರಾಧಗಳನ್ನು ಮಾಡಿದ್ದೇನೆ. ಈಗೇನು ಸಮಜಾಯಿಸಿ ನೀಡಲಿ? ಜನಸೇವೆಯಲ್ಲಿ ತಲ್ಲೀನನಾಗಿರುವ ಬದಲು ಊಟ ಉಪಚಾರಗಳಲ್ಲಿ, ಮಧುಪಾನ ಮದನಕೇಳಿಗಳಲ್ಲಿ, ಸಭೆ ಸಮಾರಂಭಗಳಲ್ಲಿ ವ್ಯರ್ಥ ಕಾಲಹರಣ ಮಾಡಿದೆ. ನಿಷ್ಪಕ್ಷಪಾತದಿಂದ ಆಳುವ ಬದಲು ಸ್ವಜನ ಪಕ್ಷಪಾತ ಮಾಡಿದ ಪಾತಕಿಯಾದೆ. ರಾಜ್ಯದ ಅಭ್ಯುದಯವನ್ನು ಸಾಧಿಸುವ ಬದಲು ನನ್ನ ಮತ್ತು ನನ್ನವರ ಅಭ್ಯುದಯವನ್ನು, ಸಾಧಿಸಿದೆ. ನನ್ನ ಘೋರ ಅಪರಾಧಗಳನ್ನು ಮನ್ನಿಸಬೇಕು ಮಹಾಪ್ರಭೂ."

ದಾಮೋದರನು ಹೀಗೆ ಹೇಳುತ್ತಿರುವಷ್ಟರಲ್ಲಿ ಆ ಕರಾಳ ವ್ಯಕ್ತಿಯು ಅಂತರ್ಧಾನವಾದನು. ಅನಂತರ ದಾಮೋದರನು ಅತಿ ಸುಪ್ತಿಯಲ್ಲಿ ಮುಳುಗಿ ಸ್ವಲ್ಪ ಹೊತ್ತಿನ ನಂತರ ಇಹಲೋಕದ ಯಾತ್ರೆಯನ್ನು ಮುಗಿಸಿದನು.

* * * *

ಮರುದಿನ, ಹೇಮಾವತಿ ರಾಜ್ಯದ ಮಾಜಿ ಮುಖ್ಯಮಂತ್ರಿಯ ಆತ್ಮಹತ್ಯೆಯ ಸುದ್ದಿ, ಹಿಂದೂಸ್ಥಾನದ ಆದ್ಯಂತ ಕೋಲಾಹಲವನ್ನುಂಟು ಮಾಡಿತ್ತು. ಸರ್ವಾಧಿಕಾರಿ ಯಂತೆ ಆಳಿದ ದಾಮೋದರನು ಹೇಡಿಯಂತೆ ಆತ್ಮಹತ್ಯೆ ಮಾಡಿಕೊಂಡಿದ್ದು, ಅನೇಕರಿಗೆ ಸೋಜಿಗವನ್ನುಂಟುಮಾಡಿತ್ತು. ಆ ದಿನವೇ ಶಂಭು, ಹೆಮ್ಮೊರ, ಕೆಮ್ಮೊರ, ಜಲೋದರ, ಗಾಂಢೀವ ಮೊದಲಾದ ದುಷ್ಟ ರಾಜಕಾರಣಿಗಳನ್ನೂ ಆನಂದ, ಶಾಮಸುಂದರ ಮುಂತಾದ ಭ್ರಷ್ಟ ಅಧಿಕಾರಿಗಳನ್ನೂ, ಸರ್ಕಾರದ ಆಜ್ಞೆಯಂತೆ ದಸ್ತಗಿರಿ

ಮಾಡಲಾಯಿತು. ಇವರುಗಳ ಬಂಧನದ ಸುದ್ಧಿಯು ರಾಷ್ಟ್ರದಲ್ಲಿ ಮತ್ತಷ್ಟು ಕೋಲಾಹಲವನ್ನುಂಟುಮಾಡಿತ್ತು. ಈ ಸುದ್ದಿಯನ್ನು ಕೇಳಿದ ದುಷ್ಟ ರಾಜಕಾರಣಿಗಳೂ, ಲಂಚಕೋರ ಅಧಿಕಾರಿಗಳೂ ತಲ್ಲಣಗೊಂಡರು. ಜನಸಾಮಾನ್ಯರು ಸಂತಸಗೊಂಡರು.

ಸರ್ಕಾರವು ತನಿಖಾಮಂಡಳಿಯ ಶಿಫಾರಸ್ಸಿನ ಮೇಲೆ ಅಷ್ಟೊಂದು ತ್ವರಿತಗತಿಯಲ್ಲಿ ಕ್ರಮ ಕೈಗೊಳ್ಳಬಹುದೆಂಬ ಕಲ್ಪನೆ ಶಂಭುವಿಗಿರಲಿಲ್ಲ. ತನ್ನ ಆಳ್ವಿಕೆ ಕಾಲದಲ್ಲಿ ಆಮೆಗತಿಯಲ್ಲಿ ಚಲಿಸುತ್ತಿದ್ದಂತೆ ಜಯಸಿಂಹನ ಕಾಲದಲ್ಲೂ ಸರ್ಕಾರದ ವ್ಯವಹಾರಗಳು ಚಲಿಸುತ್ತಿರಬಹುದೆಂದು ಅವನು ಭಾವಿಸಿದ್ದನು. ತನಿಖಾ ಮಂಡಳಿಯ ವರದಿಯು ಕಾರ್ಯರೂಪಕ್ಕೆ ಬರದಂತೆ ಮಾಡುವುದಕ್ಕಾಗಿ, ಶಂಭು ನಾನಾ ಉಪಾಯಗಳನ್ನು ಯೋಚಿಸಿದನು. ಜಯಸಿಂಹನನ್ನು ಕೊಲೆ ಮಾಡಬೇಕೆಂಬುದೂ ಸಹ ಅವನ ಒಂದು ಹಂಚಿಕೆಯಾಗಿತ್ತು. ಆದರೆ ಅವನು ಹಂಚಿಕೆಯನ್ನು ಹೂಡುವ ಮೊದಲೇ ಸರ್ಕಾರದವರು ಅವನನ್ನು ಬಂಧಿಸಿದರು. ಬಂಧಿಗಳಾಗಿದ್ದ ಶಂಭು ಮುಂತಾದವರು ಬೋನಿನಲ್ಲಿ ಸಿಕ್ಕ ಇಲಿಗಳಂತಾಗಿದ್ದರು.

* * * *

ವಿಶೇಷ ನ್ಯಾಯಾಧೀಶರ ಸಮ್ಮುಖದಲ್ಲಿ ಭ್ರಷ್ಟರ ಬಹಿರಂಗ ವಿಚಾರಣೆ ಪ್ರಾರಂಭವಾಯಿತು. ಸತತ ನಾಲ್ಕು ತಿಂಗಳ ಕಾಲ ವಿಚಾರಣೆ ನಡೆಯಿತು. ವಿಚಾರಣೆಯನ್ನು ನೋಡಲು, ಸಾವಿರಾರು ಜನರು ಪ್ರತಿದಿನವೂ ನ್ಯಾಯಾಲಯದ ಮುಂದೆ ನೆರೆಯುತ್ತಿದ್ದರು. ವಿಚಾರಣೆಯ ಸಂಬಂಧ ಪತ್ರಿಕೆಗಳಲ್ಲಿ ಬರುತ್ತಿದ್ದ ವರದಿಗಳನ್ನು ಜನರು ಆಸಕ್ತಿಯಿಂದ ಓದುತ್ತಿದ್ದರು. ನೂರಾರು ಜನರು ವಿಶೇಷ ನ್ಯಾಯಾಲಯದ ಮುಂದೆ ರುಜುವಾತು ಕೊಟ್ಟರು. ಮೊಕದ್ದಮೆಯಲ್ಲಿ ನೂರಾರು ದಾಖಲೆಗಳು ಹಾಜರಾಗಿದ್ದುವು.

ಸೋಮಶೇಖರನ ಕೊಲೆಗೆ ಸಂಬಂಧಪಟ್ಟಂತೆ ತನಿಖೆಯೂ ಸಹ ನಡೆದಿತ್ತು. ಸೋಮಶೇಖರನ ಕೊಲೆಯಲ್ಲಿ ಶಂಭುವಿನೊಡನೆ ಸಾಮಿಲಾಗಿದ್ದ ಇಬ್ಬರು ಪೋಲಿಸ್ ಇನ್‌ಸ್ಪೆಕ್ಟರುಗಳೂ, ಡಾಕ್ಟರೂ, ಶಂಭುವಿನೊಡನೆ ಅಪರಾಧಿಗಳಾಗಿದ್ದರು. ಸೋಮಶೇಖರನ ಕೊಲೆಗೆ ಶಂಭುವೇ ಮೂಲ ಕಾರಣನೆಂದು ವಿಚಾರಣೆಯಲ್ಲಿ ಸಾಬೀತಾಯಿತು. ಹೆಮ್ಮೊರ, ಕೆಮ್ಮೊರ, ಜಲೋದರ, ಗಾಂಡೀವ ಮೊದಲಾದ ಧುರೀಣರೂ, ಆನಂದ ಮೊದಲಾದ ಲಂಚಕೋರ ಅಧಿಕಾರಿಗಳೂ ನಡೆಯಿಸಿದ್ದ ಹಲವು ನ್ಯಾಯಬಾಹಿರ ಹೇಯಕೃತ್ಯಗಳು ವಿಚಾರಣೆಯಿಂದ ರುಜುವಾತಾಗಿದ್ದವು.

ವಿಚಾರಣೆಯ ಅಂತಿಮದಲ್ಲಿ, ವಿಶೇಷ ನ್ಯಾಯಾಧೀಶರು ಒಬ್ಬೊಬ್ಬ ಅಪರಾಧಿಯ ವಿಚಾರದಲ್ಲೂ ಒಂದೊಂದು ಸಂಪುಟದಷ್ಟು ಗಾತ್ರದ ತೀರ್ಪನ್ನು ಬರೆದಿದ್ದರು. ಸೋಮಶೇಖರನನ್ನು ಕೊಲೆ ಮಾಡಿಸಿದ ತಪ್ಪಿಗಾಗಿಯೂ, ಇತರ ಅಪರಾಧಗಳಿಗಾಗಿಯೂ, ನ್ಯಾಯಾಧೀಶರು ಶಂಭುವಿಗೆ ಮರಣ ದಂಡನೆಯನ್ನು ವಿಧಿಸಿದರು. ಉಳಿದ ಅಪರಾಧಿಗಳು

ದೇಶದ್ರೋಹಕ್ಕೆ ಸರಿಸಮವಾದ ಅಪರಾಧಗಳನ್ನು ಮಾಡಿದರೆಂದು ತೀರ್ಮಾನ ಮಾಡಿ, ಅವರೆಲ್ಲರಿಗೂ ಜೀವಾವಧಿ ಸೆರೆಮನೆಯ ವಾಸದ ಶಿಕ್ಷೆಯನ್ನು ವಿಧಿಸಿದರು.

ದೇಶಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರ ಯಾವ ರಾಜ್ಯದಲ್ಲಿಯೂ ಇಂತಹದೊಂದು ಸಾಮೂಹಿಕ ವಿಚಾರಣೆ ನಡೆದಿರಲಿಲ್ಲ. ಆದ್ದರಿಂದ ಶಂಭು ಮುಂತಾದವರಿಗೆ ಆಗಿದ್ದ ಶಿಕ್ಷೆಯ ಸುದ್ದಿಯು ಒಂದು ವಿಶೇಷ ಸುದ್ದಿಯಾಗಿ, ಇಡೀ ರಾಷ್ಟ್ರದ ಗಮನವನ್ನು ಸೆಳೆದಿತ್ತು. ಭ್ರಷ್ಟರಿಗೆ ಸರಿಯಾದ ಶಿಕ್ಷೆ ದೊರಕಿತೆಂದು ರಾಷ್ಟ್ರದ ಜನರು ಹರ್ಷಗೊಂಡರು. ಪಾಪಿಗಳಿಗೆ ತಕ್ಕ ಪ್ರಾಯಶ್ಚಿತ್ತವಾಯಿತೆಂದು ಹೇಮಾವತಿ ರಾಜ್ಯದ ಜನರು ತೃಪ್ತಿಪಟ್ಟರು. ಆ ಭ್ರಷ್ಟರಿಂದ ನಾನಾ ವಿಧದಲ್ಲಿ ನೊಂದ ಜನರು ಆ ದಿನ ತಮ್ಮ ಕ್ರೋಧವನ್ನು ನಿವಾರಿಸಿಕೊಂಡರು. ದುರ್ಗಾದಾಸರು ಮರಣ ಹೊಂದಿದ ದಿನ, ಜಯಸಿಂಹನು ರಾತ್ರಿ ಕನಸಿನಲ್ಲಿ ಆಡಿದ್ದ ನುಡಿಗಳನ್ನು ನಿರ್ಮಲಾದೇವಿಯವರು ನೆನಸಿಕೊಂಡರು. ದುಷ್ಟರ ಮತ್ತು ಭ್ರಷ್ಟರ ಶಿಕ್ಷೆಗೆ ಕಾರಣಕರ್ತನಾದ ಜಯಸಿಂಹನನ್ನು ಭಾರತಾದ್ಯಂತ ಕೊಂಡಾಡಿದರು.

* * * *

# ೨೦. ಆಶಾನೇಸರು

ಪ್ರಾತಃಕಾಲ ದಿನಮಣಿಯು ಪ್ರಭಾತಗಿರಿಯ ಮೇಲಿಂದ ಮೆಲ್ಲಮೆಲ್ಲನೆ ದಿಗಂತನನ್ನು ಏರುತ್ತಿರುವನೋ ಎಂಬಂತೆ ತೋರುತ್ತಿದ್ದನು. ಮನಮೋಹಕ ಉನ್ಮಾದಿನಿ ಜಲಪಾತವು ವಿಶ್ವ ಚೆಲುವಿನ ಝುರಿಯಂತೆ ಶೋಭಿಸುತ್ತಿತ್ತು. ಜಯಸಿಂಹನು ಗಿರಿಯ ತುಟ್ಟ ತುದಿಯಲ್ಲಿ ನಿಂತು, ಸೃಷ್ಟಿ ಸೌಂದರ್ಯವನ್ನು ನೋಡುತ್ತಾ, ಭಾವ ಪರವಶನಾಗಿದ್ದನು. ಸ್ಫುರದ್ರೂಪಿಯಾಗಿದ್ದ ಅವನು ಸೂರ್ಯ ಕಿರಣಗಳ ಪ್ರಭೆಯಿಂದ ಮತ್ತಷ್ಟು ಸುಂದರವಾಗಿ ಕಾಣುತ್ತಿದ್ದನು. ಅವನ ಮೈಕಟ್ಟು, ನಿಲುವು ಮುಂತಾದ ಲಕ್ಷಣಗಳು ಅವನೊಬ್ಬ ಯೋಧನೆಂಬುದನ್ನು ಸಾರುತ್ತಿದ್ದರೂ, ಅವನ ದೃಷ್ಟಿಯು, ದೃಷ್ಟಿಗೆ ಅಗೋಚರವಾದ ದಿವ್ಯ ಶಕ್ತಿಯ ಆರಾಧಕನೆಂಬುದನ್ನು ಸೂಚಿಸುತ್ತಿತ್ತು.

ಜಯಸಿಂಹನು ಹಿಂದೆ ಪ್ರಭಾತಗಿರಿಗೆ ಬಂದಿದ್ದಾಗ ಅಮಿತಾನಂದರ ಸಾನ್ನಿಧ್ಯದಲ್ಲಿ ಪಡೆದಿದ್ದ ಶಾಂತಿ ಮತ್ತು ಸ್ಫೂರ್ತಿಗಳನ್ನು ಮರೆತಿರಲಿಲ್ಲ. ಆಗಾಗ ಅಮಿತಾನಂದರ ದರ್ಶನಕ್ಕಾಗಿ ಅವನ ಮನಸ್ಸು ಹಾತೊರೆಯುತ್ತಿತ್ತು. ಮುಖ್ಯಮಂತ್ರಿಯಾದ ನಂತರ, ಆ ಮಹಾಯೋಗಿಯ ಅನುಗ್ರಹವನ್ನು ಪಡೆದು ಬರಲು ಅವನು ಆಗಾಗ ಯೋಚಿಸುತ್ತಿದ್ದನು. ಆದರೆ ಆಡಳಿತ ಕಾರ್ಯಭಾರಗಳ ದೆಶೆಯಿಂದ ಅವನು ಹೇಮಾವತಿ ರಾಜ್ಯವನ್ನು ಬಹಳಕಾಲ ಬಿಟ್ಟಿರಲಾಗಲಿಲ್ಲ. ಆಡಳಿತ ಸುಭದ್ರ ಸ್ಥಿತಿಗೆ ಬಂದು, ಶಂಭು ದಾಮೋದರರ ಪಿಡುಗು ಕೊನೆಗೊಂಡ ಬಳಿಕ, ಅವನು ಪ್ರಭಾತಗಿರಿಗೆ ಯಾತ್ರಾರ್ಥಿಯಾಗಿ ಹೋಗಿದ್ದನು.

ಆ ದಿನ ಬೆಳಿಗ್ಗೆ, ಅಮಿತಾನಂದರ ದರ್ಶನಕ್ಕಾಗಿ ಜಯಸಿಂಹನು ಅವರಿದ್ದ ಗುಹೆಯ ಸಮೀಪ ಕಾಯುತ್ತಿದ್ದನು. ಸ್ವಲ್ಪ ಹೊತ್ತಿನ ತರುವಾಯ ಅಮಿತಾನಂದರ ಶಿಷ್ಯ ಶಿವಾನಂದನು, ಅಮಿತಾನಂದರ ಅನುಮತಿ ಪಡೆದು, ಗುಹೆಯೊಳಗೆ ಜಯಸಿಂಹ ನನ್ನು ಕರೆದೊಯ್ದನು. ಜಯಸಿಂಹನು ಗುಹೆಯೊಳಗೆ ಕಾಲಿಟ್ಟವನೇ ಅಮಿತಾ ನಂದರ ಪಾದಾರವಿಂದಗಳಿಗೆ ಎರಗಿದನು. ಅವರು ಅವನನ್ನು ವಾತ್ಸಲ್ಯ ಪೂರ್ವಕ ವಾಗಿ ಸ್ವಾಗತಿಸಿ, ತಮ್ಮ ಪಕ್ಕದಲ್ಲೇ ಕುಳ್ಳಿರಿಸಿ, "ಏನು, ಹೇಮಾವತಿ ರಾಜ್ಯದ ಮುಖ್ಯಮಂತ್ರಿ ಗಳು, ಗರೀಬ ಬೈರಾಗಿಯನ್ನು ಹುಡುಕಿಕೊಂಡು ಇಷ್ಟು ದೂರ ದಯಮಾಡಿಸಿದ್ದೀರಿ?" ಎಂದು ನಗುತ್ತಾ ಪ್ರಶ್ನಿಸಿದರು.

"ತಮ್ಮಲ್ಲಿರುವ ಸಂಪತ್ತು, ರಾಜರಿಗೂ, ಮುಖ್ಯಮಂತ್ರಿಗಳಿಗೂ ಅಲಭ್ಯ. ತಮ್ಮ ಮುಂದೆ ರಾಜ ಮಹಾರಾಜರುಗಳೂ, ಮಂತ್ರಿ ಮುಖ್ಯಮಂತ್ರಿಗಳೂ ಗರೀಬರು."

"ವತ್ಸಾ, ಕ್ಷೇಮವಾಗಿದ್ದೀಯ? ನಿಮ್ಮ ರಾಜ್ಯ ಹೇಗಿದೆ?"

ತಮ್ಮ ದಯೆಯಿಂದ ನಾನು ಕ್ಷೇಮ, ನನ್ನ ರಾಜ್ಯವೂ ಕ್ಷೇಮ. ಅಂದು ತಮ್ಮ ಅಪ್ಪಣೆಯನ್ನು ಪಡೆದು ಇಲ್ಲಿಂದ ಹೋದವನು ಸೈನ್ಯಕ್ಕೇ ಸೇರಿ, ಸಮರದಲ್ಲಿ ಒಂದು ಕೈಯನ್ನು ಕಳೆದುಕೊಂಡೆ.........," ಎಂದು ಜಯಸಿಂಹನು ಮುರಿದ ಕೈಯನ್ನು ತೋರಿಸಿದನು.

"ಅಂದು ನಿನ್ನನ್ನು ನೋಡಿದ ಲಾಗಾಯ್ತು ನಿನ್ನ ಮೇಲೆ ನನಗೆ ವಾತ್ಸಲ್ಯ ಉಂಟಾಯಿತು. ಅಂದಿನಿಂದ ನಿನ್ನ ಜೀವನದ ಹಾನಿ, ವೃದ್ಧಿಗಳನ್ನು ದಿವ್ಯ ಜ್ಞಾನದಿಂದ ಗ್ರಹಿಸುತ್ತಲೇ ಬಂದಿದ್ದೇನೆ. ನೀನೇನೂ ಬಹಳ ಹೇಳಬೇಕಾಗಿಲ್ಲ. ನನಗೆಲ್ಲವೂ ಗೊತ್ತಾಗಿದೆ."

"ನಾನು ತಮಗೆ ಬಹಳ ಋಣಿಯಾಗಿದ್ದೇನೆ"

"ನನ್ನಿಂದ ಈಗೇನಾಬೇಕು, ಮಗೂ?"

"ತಮ್ಮ ಅನುಗ್ರಹಬೇಕು."

"ನಿನ್ನ ಮೇಲೆ ಅನುಗ್ರಹ ಯಾವಾಗಲೂ ಇದ್ದೇ ಇದೆ. ನೀನಿಂದು ಒಂದು ರಾಜ್ಯದ ಮುಖ್ಯಮಂತ್ರಿಯಾಗಿರುವೆ. ಆ ಪದವಿಯನ್ನು ಜನ ಸೇವೆಗಾಗಿ ಉಪಯೋಗಿಸಬೇಕೆಂಬುದೇ ನನ್ನಾಸೆ. ಈ ಜಗತ್ತಿನಲ್ಲಿ ಲಕ್ಷಾಂತರ ರಾಜ ಮಹಾರಾಜರುಗಳೂ, ಅಸಂಖ್ಯಾತ ಮಂತ್ರಿ ಮುಖ್ಯಮಂತ್ರಿಗಳೂ, ಆಳಿ ಅಳಿದು ಹೋಗಿದ್ದಾರೆ. ಬಹುಮಂದಿ ಹೆಸರಿಲ್ಲದೆ ಅಳಿದು ಹೋಗಿದ್ದಾರೆ. ಸನ್ನಿವೇಶಗಳ ಸಂಯೋಗದಿಂದಲೋ, ಪೂರ್ವಜನ್ಮದ ಸುಕೃತದಿಂದಲೋ, ಭಗವಂತನ ಅನುಗ್ರಹದಿಂದಲೋ ಕೃತಿಮ ಪಿತೂರಿಗಳಿಂದಲೋ, ಕಾಡಿ ಬೇಡುವುದರಿಂದಲೋ, ಕೆಲವರಿಗೆ ಮಾತ್ರ ಉನ್ನತ ಅಧಿಕಾರಗಳು ಲಭ್ಯವಾಗುತ್ತವೆ. ಅಧಿಕಾರ ಸಿಕ್ಕಾಗ ಮಾನವರ ಕಲ್ಯಾಣಕ್ಕಾಗಿ ಶ್ರಮಿಸುವುದು ಮಾನವರ ಲಕ್ಷಣ; ತನ್ನ ಅಥವಾ ತನ್ನವರ ಹಿತವನ್ನು ಸಾಧಿಸುವುದು ದಾನವರ ಲಕ್ಷಣ."

"ಪೂಜ್ಯರೇ, ನನ್ನಲ್ಲಿ ಮಾನವೀಯತೆ ಮತ್ತು ಸತ್ಯ ಸಂಧತೆಗಳು ವೃದ್ಧಿಸುವಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸುತ್ತೇನೆ."

"ವತ್ಸಾ, ಆಡಳಿತಗಾರರಿಗೆ ಪ್ರತಿಭೆ, ಸದ್ಗುಣಗಳೆರಡೂ ಇರಬೇಕು. ನಿನ್ನಲ್ಲಿ ಅವೆರಡೂ ಇವೆ. ಆದ್ದರಿಂದ ನಿನ್ನಿಂದ ಪ್ರಜಾಪೀಡೆ ನಡೆಯುವುದು ಅಸಂಭವ. ಹಿಂದೆ ನೀನಿಲ್ಲಿಗೆ ಬಂದಿದ್ದಾಗ ನಿನ್ನ ಮುಖ ಛಾಯೆಯಲ್ಲಿ **ನಾಳೆಯ ನೆಳಲು** ನನಗೆ ಕಂಡಿತ್ತು. ಆದ್ದರಿಂದಲೇ ನೀನೊಬ್ಬ ಮಹಾನಾಯಕನಾಗುವ ಯೋಗವಿದೆಯೆಂದು ಅಂದು ನಿನಗೆ ಹೇಳಿದ್ದೆ. ಭಾರತದ ಮಹಾ ನಾಯಕನಾಗುವ ಸುಯೋಗವೂ ಸಹ ನಿನಗೆ ಕೆಲವೇ ವರುಷಗಳಲ್ಲಿ ಲಭಿಸುತ್ತದೆ. ರಾಷ್ಟ್ರದ ರಾಜಕಾರಣವನ್ನಾವರಿಸಿರುವ ನಿರಾಶೆಯ ನಿಶೆಯಲ್ಲಿ ಆಸೆಯ ನೇಸರಾಗಿ ನೀನಿರುವೆ. ಸರ್ವಶಕ್ತನಾದ ಭಗವಂತನ ಕೃಪೆಯು ಸದಾ ನಿನ್ನ ಮೇಲಿರಲಿ." ಎಂದು ಅಮಿತಾನಂದರು ಜಯಸಿಂಹನನ್ನು ಆಶೀರ್ವದಿಸಿ ಕಳಿಸಿದರು.

* * * *

